ಶ್ರೀ

ಫಲಜ್ಯೋತಿಷ್ಯ ಜ್ಯೋತಿರ್ಮಾಲಾ ನಕ್ಷತ್ರ : ೧೮

# ಶಿಕ್ಷಣ ಜ್ಯೋತಿಷ್ಯ



ಲೇಖಕರು :
**ಶ್ರೀ. ಎನ್. ಕೆ. ಜೋಗಳೇಕರ**
ಧಾರವಾಡ



ಪ್ರಕಾಶಕರು :
**ಶ್ರೀ. ಎನ್. ಕೆ. ಜೋಗಳೇಕರ,**
ತೇಜಸ್ವಿನಗರ, ಧಾರವಾಡ – ೨
580 002

# ಅರ್ಪಣೆ

ಸಾಹಿತ್ಯದ ಅಂತಃಶಕ್ತಿಯಿಂದ ಸಮಾಜಸೇವಿಕೆಯಾಗಿ
ಸಾರ್ವಜನಿಕ ಸೇವಾರಂಗವನ್ನು ಪ್ರವೇಶಿಸಿ,
ಶೈಕ್ಷಣಿಕ-ಸಾಂಸ್ಕೃತಿಕ ಸೂತ್ರಹಿಡಿದು,
ರಾಜಕೀಯ ರಂಗದಲ್ಲಿಯೂ ರಾಷ್ಟ್ರಮಟ್ಟವನ್ನು
ಮುಟ್ಟಿದ
ಕೇಂದ್ರ ಮಾಜಿ ಉಪಸಚಿವೆ

ಡಾ. ಸರೋಜಿನಿ ಮಹಿಷಿ
ಎಂ. ಎ., ಎಲ್ಎಲ್ ಬಿ., ಪಿಎಚ್. ಡಿ.

ಇವರಿಗೆ

ಆದರಾಭಿಮಾನಗಳಿಂದ

—ಲೇಖಕ

# ಎರಡನೆಯ ಆವೃತ್ತಿ ಕುರಿತು

"ಶಿಕ್ಷಣ ಜ್ಯೋತಿಷ್ಯ" ಪುಸ್ತಕದ ಮೊದಲ ಮುದ್ರಣದ ಪ್ರತಿಗಳು ಮುಗಿದು ಹಲವು ವರುಷಗಳಾಗಿದ್ದು, ಅನೇಕ ಜನರಿಂದ ಪ್ರತಿಗಳಿಗಾಗಿ ಬೇಡಿಕೆ ಪೆಟ್ಟಿಗೆ ಬಂದಿದ್ದರೂ ಸಹ ಈವರೆಗೆ ದ್ವಿತೀಯ ಮುದ್ರಣವನ್ನು ಕೈಕೊಳ್ಳಲು ಸಾಧ್ಯವಾಗಿರಲಿಲ್ಲ. ಆದರೆ ಚಂದ್ರೋದಯ ಮುದ್ರಣಾಲಯದ ಶ್ರೀ. ಚಂ. ಗ. ಹೊನ್ನಾಪುರಮಠ ವಕೀಲರ ಸಹಕಾರದಿಂದ ಇದೀಗ ಪ್ರಕಟಿಸಲು ಸಾಧ್ಯವಾಯಿತು. ಅದಕ್ಕಾಗಿ ಅವರಿಗೆ ಕೃತಜ್ಞತೆ ಸಲ್ಲುತ್ತದೆ. ಇವರು ಕೇವಲ ಮುದ್ರಕರಾಗಿರದೆ ನನ್ನ ಆತ್ಮೀಯ ಹಿರಿಯ ಸ್ನೇಹಿತರಿದ್ದು ಪ್ರಥಮ ಮುದ್ರಣದಲ್ಲಿದ್ದ ಅನೇಕ ದೋಷಗಳನ್ನು ತಿದ್ದುವುದರಲ್ಲಿಯೂ ಸಹಕರಿಸಿದ್ದಾರೆ. ಅದಕ್ಕಾಗಿ ಅವರನ್ನು ಮತ್ತೊಮ್ಮೆ ಸ್ಮರಿಸುವೆ.

ಈ ಗ್ರಂಥದ ರಕ್ಷಾಕವಚವನ್ನು ಮುದ್ರಿಸಿಕೊಟ್ಟ ಕೃಪಾ ಮುದ್ರಣಾಲಯದ ಒಡೆಯರೂ ನನ್ನ ಆತ್ಮೀಯ ಮಿತ್ರರೂ ಆದ ಶ್ರೀ ಎನ್ ಕೆ. ಪೋತ್ನಿಸರಿಗೂ ಕೃತಜ್ಞತೆಗಳು. ಈ ಹೊತ್ತಿಗೆಗೆ ಅಂದವಾದ ಮುಖಚಿತ್ರವನ್ನು ತಯಾರಿಸಿಕೊಟ್ಟ ಶ್ರೀ. ಜಿ. ಕೆ. ಮೂರ್ತಿಯವರಿಗೂ ಪಡಿಯಚ್ಚನ್ನು ತಯಾರಿಸಿದ ಶಾರದಾ ಪ್ರೊಸೆಸ್ ಸ್ಟುಡಿಯೋದ ಶ್ರೀ. ಮಲಕಾಯಿಯವರಿಗೂ ಋಣಿ.

ಇಂತು,

೧೯೦೪ ದುಂದುಭಿ
ಚೈತ್ರ ಶು. ೧ ಪ್ರತಿಪದಾ
(ಯುಗಾದಿ) ಶುಕ್ರವಾರ
೨೬-೩-೧೯೮೨

ತನ್ಮವನಾದ;
ಎನ್. ಕೆ. ಜೋಗಳೇಕರ
ತೇಜಸ್ವಿ ನಗರ, ಧಾರವಾಡ-೨

# ಪ್ರಥಮ ಆವೃತ್ತಿಯ ಮುನ್ನುಡಿ

ಶಿಕ್ಷಣ ಮಾರ್ಗದರ್ಶನ (Educational Guidance), ವೃತ್ತಿ ಮಾರ್ಗ-ದರ್ಶನ (Vocational Guidance) ಸುಯೋಜಿತವೂ ಯೋಗ್ಯವೂ ಆದಾಗಲೇ ರಾಷ್ಟ್ರದ ಮಾನವಶಕ್ತಿಯ ಅಪವ್ಯಯ (Wastage of Man Power) ನಿಲ್ಲಿಸಲು ಬರುತ್ತದೆ ಎಂಬ ಕೂಗು ಎಲ್ಲೆಡೆ ಕೇಳಬರುತ್ತಿದೆ. ಈ ದಿಕ್ಕಿನಲ್ಲಿ ಮನಶ್ಶಾಸ್ತ್ರಜ್ಞರ ಪಾತ್ರ ಮಹತ್ವದ್ದು ಎಂಬುದು ಅನೇಕರಿಗೆ ಗೊತ್ತಿದ್ದರೂ, ಜ್ಯೋತಿಷ್ಯಶಾಸ್ತ್ರವೂ ಸಹ ತನ್ನ ಸೂತ್ರಗಳಿಂದ ಈ ವಿಷಯ ವಾಗಿ ಯೋಗ್ಯ ಮಾರ್ಗದರ್ಶನ ನೀಡಬಲ್ಲದೆಂಬುದು ಹಲವರಿಗೆ ಗೊತ್ತಿರ ಲಿಕ್ಕಿಲ್ಲ. ಇದು ಜ್ಯೋತಿಷ್ಯ ಶಾಸ್ತ್ರದ ಒಂದು ಸಾಹಸೀ ಪ್ರಯೋಗವಿದ್ದು ಯಾರಿಗೆ ಯಾವ ಶಿಕ್ಷಣ ಸರಿ ಹೊಂದುತ್ತದೆ, ಯಾರು ಯಾವ ಶಿಕ್ಷಣ ಪಡೆದರೆ ವೃತ್ತಿಜೀವನದಲ್ಲಿ ಸಫಲರಾಗಬಲ್ಲರು, ಈ ಸಮಸ್ಯೆ ಇಂದು ವಿದ್ಯಾರ್ಥಿಗಳನ್ನೂ, ಪಾಲಕರನ್ನೂ, ಆಡಳಿತ ತಜ್ಞರನ್ನೂ ಹಗಲಿರುಳೂ ಕಾಡುತ್ತಿದೆ. ಇದು ಒಂದು ಬೃಹತ್ ಸಾಮಾಜಿಕ ಸಮಸ್ಯೆಯಾಗಿದೆ. ಆದ್ದರಿಂದ ಜ್ಯೋತಿಷ್ಯಶಾಸ್ತ್ರದ ಆಧಾರದ ಮೇಲೆ ಯಾರು, ಯಾವ ಶಿಕ್ಷಣದಲ್ಲಿ ಯಶಸ್ವಿಯಾಗಬಲ್ಲರು ಎಂಬ ಸಮಸ್ಯೆಯನ್ನು ವಿವಿಧ ದೃಷ್ಟಿಕೋನಗಳಿಂದ ವಿವೇಚಿಸಿ ಈ ಗ್ರಂಥವನ್ನು ರಚಿಸಲಾಗಿದೆ. ನಮ್ಮ ರಾಷ್ಟ್ರದ ಈ ಸಮಸ್ಯೆಯು ಈ ಚಿಕ್ಕ ಪ್ರಯತ್ನದಿಂದ ಸ್ವಲ್ಪಮಟ್ಟಿಗಾದರೂ ಪರಿಹಾರಗೊಂಡರೆ ನನ್ನ ಪ್ರಯತ್ನ ಸಾರ್ಥಕವಾದೀತು.

ಇದು ಪ್ರಯೋಗಾತ್ಮಕ ಕೃತಿ. ನನ್ನ ಅನುಭವದ ಸೂತ್ರಗಳನ್ನು ಹಿಡಿದು ಜ್ಯೋತಿಷ್ಯಶಾಸ್ತ್ರದ ಅಭ್ಯಾಸದ ಆಧಾರದ ಮೇಲೆ ಸಂಶೋಧ-ನಾತ್ಮಕ ದೃಷ್ಟಿಯಿಂದ ಇದನ್ನು ರಚಿಸಲಾಗಿದೆ. ಈ ಕೃತಿ ವೃತ್ತಿ-ಬಾಂಧವರಿಗೊಂದು ದಾರಿದೀಪವಾಗಲೆಂದು ನನ್ನ ಇಚ್ಛೆ. ನನ್ನ ವೃತ್ತಿ ಬಾಂಧವರೂ, ಓದುಗರೂ ಇದರಲ್ಲಿಯ ಸೂತ್ರಗಳನ್ನೂ, ನಿಯಮಗಳನ್ನೂ ತಮ್ಮ ಅನು-ಭವಕ್ಕೆ ಪ್ರಯೋಗಿಸಿ ನನ್ನ ನಿರ್ಣಯಗಳ ನಿಜಾಂಶವನ್ನು ಅಳೆಯಬೇಕು.

ಈ ಬಗೆಗೆ ನನ್ನ ಓದುಗರು ಇದರಲ್ಲಿ ಯಾವುದಾದರೊಂದು ನ್ಯೂನತೆ ಕಂಡರೆ ಆ ನ್ಯೂನತೆಯ ವಿವರಣೆಯನ್ನು ಹಾಗೂ ತಮ್ಮ ಸಲಹೆ, ಸೂಚನೆಗಳನ್ನು ತಿಳಿಸಿದಲ್ಲಿ ಸ್ವಾಗತಿಸುವೆನು.

ನಾನು "ಶಿಕ್ಷಣ ಜ್ಯೋತಿಷ್ಯ" ಬರೆಯಬೇಕೆಂದು ಉಪಕ್ರಮಿಸಿದಾಗ ಅನೇಕರು ಸಹಾಯ ಮಾಡಿದ್ದಾರೆ. ಇದರಲ್ಲಿ ಕೆಲವರ ಸ್ಮರಣೆಯನ್ನು ಇಲ್ಲಿ ಆದರದಿಂದ ಮಾಡುತ್ತೇನೆ. ಬೆಂಗಳೂರು ವಿಶ್ವವಿದ್ಯಾಲಯದ ಉಪಕುಲಪತಿಗಳಾದ ಪದ್ಮಶ್ರೀ ವಿ. ಕೃ. ಗೋಕಾಕರು, ಧಾರವಾಡದ ಮಲ್ಲಸಜ್ಜನ ವ್ಯಾಯಾಮಶಾಲೆಯ ಶ್ರೀ ಕೆ. ಜಿ. ನಾಡಗೇರರವರು, ಸೂಚಿಶಿಲ್ಪ ವಿಶಾರದರಾದ ಹಳಪೇಟ ಚಿಂತಾಮಣಿರಾಯರು, ಡಾ. ಎಮ್. ಎಸ್. ಕಿರ್ಲೋಸ್ಕರರು, ಶ್ರೀ ಮಾಧವ ನಾ. ಮಹಿಷಿ, ಎಸ್. ಬಿ. ದೇಶಪಾಂಡೆ, ರಂಗಣ್ಣ ಜೋಶಿ ಮುಂತಾದವರು ಸಹಕರಿಸಿದ್ದಾರೆ. ಇವರಿಗೆಲ್ಲ ನಾನು ಋಣಿಯಾಗಿದ್ದೇನೆ. ಶ್ರೀ ಹಾಗೂ ಶ್ರೀಮತಿ ಜಿ. ಆರ್. ಹುಯಿಲಗೋಳ (ಸಹಾಯಕ ಇಂಜನಿಯರ) ಹಾಗೂ ಪ್ರೊ. ಕೆ. ಎಸ್. ಶರ್ಮಾ, ಪ್ರೊ. ಕೊಟ್ಟೂರಶೆಟ್ಟರ, ಕೆ. ಎ. ಕಾಮತ ಮೊದಲಾದವರು ಸ್ಫೂರ್ತಿಯನ್ನಿತ್ತಿದ್ದಾರೆ. ಇದಲ್ಲದೆ ಕರಡುಪ್ರತಿಯ ತಯಾರಿಕೆಯಲ್ಲಿ ನೆರವಾದ ಶ್ರೀ ಎಸ್. ಜಿ. ಜಯಮಂಗಲ ಹಾಗೂ ಟಿ. ರಘುನಾಥ ನಾರಾಯಣ ಖರೆ ಇವರನ್ನು ಮರೆಯಲಾರೆನು. ಈ ನನ್ನ ಗ್ರಂಥವನ್ನು ಅರ್ಪಣ ಮಾಡಲು ಅನುಮತಿ ಕೊಟ್ಟ ಡಾ. ಸರೋಜಿನಿ ಮಹಿಷಿಯವರ ಅಭಿಮಾನ ಚಿರಸ್ಮರಣೀಯ. ಸಕಾಲಕ್ಕೆ ಚೊಕ್ಕಟವಾಗಿಮುದ್ರಿಸಿ ಉಪಕರಿಸಿದ ಫಾಣೀಕರ ರವೀಂದ್ರರನ್ನು ನೆನೆಸುತ್ತೇನೆ.

ನನ್ನ ಫಲಜ್ಯೋತಿಷ್ಯ ಜ್ಯೋತಿರ್ಮಾಲೆಯ ೧೧ ನೆಯ ನಕ್ಷತ್ರವಾದ ಈ "ಶಿಕ್ಷಣ ಜ್ಯೋತಿಷ್ಯ"ವು ಶಿಕ್ಷಣ ಮಾರ್ಗದರ್ಶನ, ವೃತ್ತಿಮಾರ್ಗದರ್ಶನ ಬಯಸುವ ಬಾಂಧವರಿಗೆ ದಾರಿದೀಪವಾಗಲೆಂದು ಹಾರೈಸುತ್ತೇನೆ.

ಇಂತು,

ತಮ್ಮವನಾದ,

ಧಾರವಾಡ — ಎನ್. ಕೆ. ಜೋಗಳೇಕರ

ತಾ. ೨೨-೧೦-೧೯೭೮ — ಧಾರವಾಡ

# ಪರಿವಿಡಿ

# ಶಿಕ್ಷಣ ಜ್ಯೋತಿಷ್ಯ

## ವಿಷಯಪ್ರವೇಶ

"ವಿದ್ಯಾವಿಹೀನಃ ಪಶುಭಿಸ್ಸಮಾನಃ" ಎಂಬ ಉಕ್ತಿ ಹಿಂದಿನ ಕಾಲಕ್ಕಿಂತಲೂ ಈಗಿನ ಯುಗಕ್ಕೆ ಹೆಚ್ಚು ಅನುಗುಣವಾಗಿದೆ ಎನ್ನಬಹುದು. ವಿದ್ಯೆಯಿಲ್ಲದವನು ಪಶುಸಮಾನನು ಎಂದಾಗ ಆವನು ಮೃಗದಂತೆ ಅನಾಗರಿಕತೆಯ ಪ್ರತೀಕನಾಗುತ್ತಾನೆ ಎಂಬ ಅರ್ಥ ಒಂದು ಕಡೆಯಿಂದ ಸಮಂಜಸವೆನಿಸಿದರೆ, ವಿದ್ಯಾವಿಹೀನನು ಈ ಯಂತ್ರ-ವಿಜ್ಞಾನ ಯುಗದಲ್ಲಿ ಬದುಕಲಾರನೆಂಬ ಇನ್ನೊಂದು ಅಂಶವನ್ನೂ ಗಮನಿಸಬೇಕಾಗುತ್ತದೆ. ಮಾನವನಿಗೆ ಸ್ಪರ್ಧಾತ್ಮಕ ಮನೋವೃತ್ತಿ ಜನ್ಮತಃ ಬಂದಿರುತ್ತದೆ. ಇಂದಿನ ಯುಗಧರ್ಮದಲ್ಲಿ ಶಕ್ತಿವಂತನು ಬದುಕುತ್ತಾನೆ ಎಂದಿದೆ. ಇಲ್ಲಿ ಶಕ್ತಿಯ ವಿಶೇಷ ಅರ್ಥ ವಿದ್ಯೆ. ಏಕೆಂದರೆ ದೈಹಿಕಶಕ್ತಿಗೆ ಶಿಲಾಯುಗದಲ್ಲಿ ಮಹತ್ವವಿದ್ದರೆ, ಅಣು-ಅಂತರಿಕ್ಷ ಯುಗದಲ್ಲಿ ಬೌದ್ಧಿಕ ಶಕ್ತಿಗೆ ಮಹತ್ವವಿದೆ.

ಹಿಂದಿನ ಕಾಲದಲ್ಲಿ ವಿದ್ಯೆಯಿಲ್ಲದವನನ್ನು ಪಶುವೆಂದು ಪರಿಗಣಿಸಿದರೂ ಅವನು ಬದುಕಲು ಜೀವನೋಪಾಯ ದೊರಕುತ್ತಿತ್ತು. ಆದರೆ ಇಂದು ವಿದ್ಯೆಯಿಲ್ಲದವನು ಬದುಕುವುದೇ ಕ್ಲಿಷ್ಟಕರವಾಗತೊಡಗಿದೆ. ಕೇವಲ ಜ್ಞಾನಾರ್ಜನೆಗೆ ವಿದ್ಯೆ ಬೇಕು ಎಂದಿದ್ದದ್ದು ಇಂದು ಹೊಟ್ಟೆಯ ಪಾಡಿಗೂ ವಿದ್ಯೆ ಬೇಕು, ಸಮಾಜದ ಬೆಳವಣಿಗೆಗೂ ವಿದ್ಯೆ ಬೇಕು; ರಾಷ್ಟ್ರದ, ವಿಶ್ವದ, ಮಾನವಕೋಟಿಯ ಪ್ರಗತಿಗೂ ವಿದ್ಯೆ ಬೇಕು. ವಿದ್ಯೆಯು ಇಷ್ಟು ಮಹತ್ವದ ಸ್ಥಾನ ಪಡೆದಿರುವಾಗ ವಿದ್ಯೆಯನ್ನು ಪಡೆಯಲು ಯಾರಿಗೆ ಕುತೂಹಲ

ವಿರುವದಿಲ್ಲ? ಆದರೆ ಇದು ಜಗತ್ತಿನ ಎಲ್ಲ ಮಾನವರಿಗೂ ಏಕೆ ಸಾಧಿಸಿಲ್ಲ? ಸಾಧಿಸಬೇಕಾದರೆ ಕೇವಲ ವೈಯಕ್ತಿಕ ಪರಿಶ್ರಮದಿಂದ ಸಾಧ್ಯವೇ? ಹಾಗೆ ವೈಯಕ್ತಿಕ ಪರಿಶ್ರಮ ಮಾಡಿಯೂ ಯಶಸ್ವಿಯಾಗದಿದ್ದವರಿಲ್ಲವೇ? ಹೀಗೇಕೆ ಆಗಬೇಕು? ಈ ಮೊದಲಾದ ನೂರಾರು ಸಮಸ್ಯೆಗಳಿಗೆ ಸೂಕ್ತ ಉತ್ತರ ಬೇಕಾದರೆ ನಾವು ಜ್ಯೋತಿಷ್ಯಶಾಸ್ತ್ರದ ನೆರವನ್ನೇ ಪಡೆಯಬೇಕಾಗುತ್ತದೆ. ಏಕೆಂದರೆ ಯಾವುದೇ ಕೆಲಸದಲ್ಲಿ ಯಶಸ್ವಿಯಾಗಬೇಕು ಎಂಬ ಹಂಬಲ, ಪ್ರೇರಣೆ ಒಂದಾದರೆ ಅದರ ಸಾರ್ಥಕತೆಗೆ ದೈವೀ ಅನುಗ್ರಹ ಪ್ರಯತ್ನ ಬೇಕು; ಗ್ರಹಗಳ ಬೆಂಬಲ ಬೇಕು. ಮಾನವನ ಆಗು-ಹೋಗುಗಳೆಲ್ಲವೂ ಗ್ರಹಗಳ ಪ್ರಭಾವದಿಂದಲೇ ಆಗುತ್ತವೆ. ಯಾರು ಯಾವ ಕಾರ್ಯವನ್ನೂ ಗ್ರಹಗಳ ಪ್ರಭಾವದ ಪ್ರವಾಹದ ವಿರುದ್ಧ ಸಾಧಿಸಲು ಸಾಧ್ಯವಿಲ್ಲ ಎಂದು ನಂಬಿದಾಗ ಶಿಕ್ಷಣದ ಸಮಸ್ಯೆಗಳ ಪರಿಹಾರಕ್ಕೂ, ಜ್ಯೋತಿಷ್ಯಶಾಸ್ತ್ರದ ಉಲ್ಲೇಖ, ಸಹಕಾರ ಬೇಕೆಬೇಕು ಎಂದು ಸ್ಪಷ್ಟವಾಗುತ್ತದೆ. ವಿದ್ಯೆ ಬರಬೇಕಾದರೂ ಯೋಗಾಯೋಗ ಬೇಕು. ವಿದ್ಯೆಯಲ್ಲಿ ಆತಂಕವಿರುವುದು ಕೂಡ ಜಾತಕದಲ್ಲಿಯ ಕುಯೋಗದ ಪರಿಣಾಮವೆನ್ನಬೇಕು. ವಿದ್ಯೆ-ಶಿಕ್ಷಣಗಳಿಗೂ, ಗ್ರಹಗಳಿಗೂ ಇಷ್ಟು ನಿಕಟಸಂಬಂಧವಿರುವಾಗ ಶಿಕ್ಷಣಾರ್ಥಿಯ ದೈನಂದಿನ ಸಮಸ್ಯೆಗಳಿಗೆ ಗ್ರಹಗಳ ಉಲ್ಲೇಖ. ಪರಿಹಾರ ಏನು? ಎಂಬ ಸಮಸ್ಯೆ ಎಲ್ಲರನ್ನೂ ಕಾಡುತ್ತದೆ. ಈ ಸಮಸ್ಯೆಯ ಪರಿಹಾರಕ್ಕೆಂದೇ "ಶಿಕ್ಷಣ ಜ್ಯೋತಿಷ್ಯ" ರೂಪುಗೊಂಡಿದೆ.

ವಿದ್ಯಾರ್ಥಿಯ ಜೀವನ ಸಮಸ್ಯೆ ಭೂಯಿಷ್ಠವಾಗಿಯೇ ಇರುತ್ತದೆ. ವರ್ಷದುದ್ದಕ್ಕೂ ಬೇರೆ ಬೇರೆ ತಿಂಗಳುಗಳಲ್ಲಿ ಬೇರೆ ಬೇರೆ ವಿಧವಾದ ಸಮಸ್ಯೆಗಳು ಅವನಿಗೆ ಉದ್ಭವಿಸುತ್ತವೆ. ಬೇಸಿಗೆಯ ಸೂಟಿಯು ಮುಗಿದು ಶಾಲೆ-ಕಾಲೇಜುಗಳು ಪ್ರಾರಂಭವಾದೊಡನೆ ಮೃಗಶಿರದ ( ಜಿಟಿಜಿಟಿ ಮಳೆ ) ಮಳೆಯಂತೆ ಸಮಸ್ಯೆಗಳ ಮಳೆ ವಿದ್ಯಾರ್ಥಿಗಳನ್ನು ಕಾಡಲು ಪ್ರಾರಂಭವಾಗುತ್ತದೆ. ಜೂನ್ ತಿಂಗಳಲ್ಲಿ ಪ್ರವೇಶದ (Admission) ಅವಕಾಶ, ಅನುಕೂಲತೆಗಳ ಬಗೆಗೆ ಹೆಚ್ಚಾಗಿ ಸಮಸ್ಯೆಗಳಿರುತ್ತವೆ. ಉದಾಹರಣೆಗೆ: ನಿರ್ದಿಷ್ಟವಾದ ಕೋರ್ಸುಗಳ ನಿರ್ದಿಷ್ಟ ವಿಷಯಗಳೊಡನೆ ಪ್ರವೇಶ ದೊರೆಯಬಹುದೆ, ನಿರ್ದಿಷ್ಟವಾದ ಕಾಲೇಜುಗಳಲ್ಲಿ ಪ್ರವೇಶ ದೊರೆಯುತ್ತದೆಯೆ,

ಯಾವ ಶಾಲೆ-ಕಾಲೇಜಿಗೆ ಹೋದರೆ ಒಳಿತಾದೀತು, ಯಾವುದಾದರೂ ಕಾಲೇಜಿನಲ್ಲಿ ಸ್ನಾನಕೋತ್ತರ ವಿಭಾಗದಲ್ಲಿ ಪ್ರವೇಶವಾದರೂ ದೊರೆತೀತೆ —ಮುಂತಾದ ಸಮಸ್ಯೆಗಳ ಸುಳಿಯನ್ನು ಎದುರಿಸಬೇಕಾಗುತ್ತದೆ. ಜುಲೈ ತಿಂಗಳು ಬಂದೊಡನೆ ಹೊಸ ಸಮಸ್ಯೆಗಳು : ಮುಖ್ಯ ವಿಷಯವಾಗಿ ಯಾವುದನ್ನು ಮುಖ್ಯ ಪ್ರಧಾನ ವಿಷಯವಾಗಿ, ಯಾವದನ್ನು ಉಪ ಮುಖ್ಯ ವಿಷಯವಾಗಿ ಯಾವುದನ್ನು ಉಪ-ವಿಷಯವಾಗಿ (Major and Minor Subjects) ತೆಗೆದುಕೊಳ್ಳಬೇಕು. ಮತ್ತೆ ಕೆಲವು ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ಸಂಘದ ಚುನಾವಣಾ ಸಂಬಂಧದ ತಾಕಲಾಟ, ಆಗಸ್ಟ ತಿಂಗಳಲ್ಲಿ ಪ್ರತಿಭಾ ಶಿಷ್ಯವೇತನ (Merit Scholarship), ಸಾಲ ಶಿಷ್ಯ ವೇತನ (Loan Scholarship), ಪುಕ್ಕಟೆ ಶಿಕ್ಷಣದ ಸವಲತ್ತು ಮೊದಲಾದ ಶಿಷ್ಯ ವೇತನಗಳ ಜಂಜಾಟದ ಸಮಸ್ಯೆಗಳು; ಸಪ್ಟಂಬರ, ಅಕ್ಟೋಬರಗಳಲ್ಲಿ ಪೂರಕ ಪರೀಕ್ಷೆಗಳ (Supplementary Exam.) ನ್ನು ತೆಗೆದುಕೊಂಡರೆ ಒಳಿತೋ, ಕೆಡುಕೋ ಎಂಬ ಸೆಳೆದಾಟ, ನವ್ಹಂಬರ್, ಡಿಶೆಂಬರ್ ತಿಂಗಳುಗಳಲ್ಲಿ ಶಾಲೆ-ಕಾಲೇಜುಗಳ ವಾರ್ಷಿಕೋತ್ಸವಗಳಿಗೆ ಸಂಬಂಧಿಸಿದ ಚಟುವಟಿಕೆಗಳಲ್ಲಿ ಭಾಗವಹಿಸಬೇಕೋ, ಬೇಡವೋ ಎಂಬುದರ ಪೇಚಾಟ, ಫೆಬ್ರುವರಿ ಬಂದೊಡನೆ ಪರೀಕ್ಷೆಗೆ ಕೂಡ್ರಬೇಕೋ, ಬೇಡವೋ; ತೇರ್ಗಡೆ ಯಾಗುವುದೋ ಇಲ್ಲವೋ, ಶ್ರೇಣಿ-ಕ್ಲಾಸ್, ರ್‍ಯಾಂಕ್, ಪ್ರಶಸ್ತಿಗಳು ಲಭ್ಯವಾಗುವವೋ ಇಲ್ಲವೋ ಅಥವಾ ಡ್ರಾಪ್ ತೆಗೆದುಕೊಂಡರೆ ಹೇಗೆ ಮೊದಲಾದ ಸಮಸ್ಯೆಗಳ ಪೀಕಲಾಟ. ಮೇ ಬಂದೊಡನೆ ಪರೀಕ್ಷಾ ಫಲಿತಾಂಶ ಬರುತ್ತದೆ. ಆಗ ಹೊಸ ಸಮಸ್ಯೆಗಳು ಮತ್ತೆ ಉದ್ಭವಿಸುತ್ತವೆ. ಶಿಕ್ಷಣ ಮುಂದುವರಿಸುವುದು ಹೇಗೆ, ಪರದೇಶಕ್ಕೆ ಉಚ್ಚ ಶಿಕ್ಷಣಕ್ಕಾಗಿ ಹೋಗಬೇಕೋ ಅಥವಾ ಉದ್ಯೋಗಸ್ಥರಾಗಬೇಕೋ ? ಮತ್ತೆ ಕೆಲವು ವಿದ್ಯಾರ್ಥಿಗಳಿಗೆ ಎ.ಟಿ.ಕೆ.ಟಿಯ ಸೌಲಭ್ಯ ಪಡೆದು ಓದು ಮುಂದುವರಿಸಬೇಕೋ ಹೇಗೆ ಮೊದಲಾದ ವಿಷಯಗಳ ಚಿಂತೆ ಹತ್ತಿಕೊಳ್ಳುತ್ತದೆ. ಈ ಸಮಸ್ಯಾ ಚಕ್ರ ಹೀಗೆ ಪ್ರತಿ ವರ್ಷವೂ ವಿದ್ಯಾರ್ಥಿಗಳನ್ನು ಪೀಡಿಸುತ್ತಲೇ ಇರುತ್ತದೆ.

ಈ ಸಮಸ್ಯಾ ಸರಪಳಿಗೆ ಜ್ಯೋತಿಷ್ಯಶಾಸ್ತ್ರದಲ್ಲಿ ಪರಿಹಾರ ದೊರಕಿಸಲು ನಮ್ಮ ಪ್ರಾಚೀನ ಗ್ರಂಥಗಳನ್ನು ಅವಲೋಕಿಸಿದರೆ ನಮಗೆ ಕಾಣು

ವುದು ಕತ್ತಲೆಯೊಂದೇ. ಈ ಕತ್ತಲೆಯಲ್ಲಿಯೇ ಬೆಳಕನ್ನು ಕಾಣಲು ಹಿಂದಿನ ಸೂತ್ರಗಳನ್ನು ಹೊಸ ದೃಷ್ಟಿಯಿಂದ ನೋಡಿ ಅರ್ಥ ಮಾಡುವುದರಿಂದ ಮಾತ್ರ ಸಾಧ್ಯ. ಅಲ್ಲದೆ ನಮ್ಮ ಪೃಚ್ಛಕರ ಸಮಸ್ಯೆಗಳ ಹೊರೆಯ ಪರಿಶೀಲನೆ, ಅವಲೋಕನೆ, ಸಂಶೋಧನೆಗಳಿಂದ ಪಡೆದುಕೊಂಡ ಅನುಭವ ಭಾಂಡಾರದ ಸಹಾಯದಿಂದ ಹೊಸ ಸೂತ್ರಗಳನ್ನು ರಚಿಸಿ ಶಿಕ್ಷಣ ಕ್ಷೇತ್ರದಲ್ಲಿ ವಿದ್ಯಾರ್ಥಿಗಳಿಗೆ ಬರುವ ಎಲ್ಲ ಸಮಸ್ಯೆಗಳನ್ನೂ ಪರಿಹರಿಸುವ ಪ್ರಯತ್ನ ಮಾಡಲಾಗಿದೆ. ಈ ಪ್ರಯೋಗ ನವೀನ ಪ್ರಯತ್ನ. ಈ ಸಂಪುಟವನ್ನು ೫ ಭಾಗಗಳಾಗಿ ವಿಭಜಿಸಲಾಗಿದೆ. ಪ್ರಥಮ ಪ್ರಕರಣದಲ್ಲಿ ವಿದ್ಯಾರ್ಥಿಯ ಶಿಕ್ಷಣಾವಧಿಯಲ್ಲಿ ಬರುವ ಅಡೆ-ತಡೆಗಳ ವಿಶ್ಲೇಷಣೆ ಮಾಡಲಾಗಿದೆ. ದ್ವಿತೀಯ ಪ್ರಕರಣದಲ್ಲಿ ಶಿಕ್ಷಣ ಪಡೆಯುವ ಯೋಗವಿರುವ ಜಾತಕ ಹೇಗಿರಬೇಕು, ಜಾತಕನಿಗೆ ಯಾವ ಯಾವ ಗ್ರಹ, ಯೋಗ, ರಾಶಿಗಳು ಅನುಕೂಲವಿರುವವು ಎಂಬ ವಿಷಯದ ವಿವೇಚನೆಯಿದೆ. ಮೂರನೆಯ ಪ್ರಕರಣದಲ್ಲಿ ಶಿಕ್ಷಣದ ವಿವಿಧ ಕೋರ್ಸುಗಳ ಹಾಗೂ ಯಾವ ಯಾವ ಕೋರ್ಸಿಗೆ ಹೋಗಲು ಯಾವ ಯಾವ ಗ್ರಹ, ರಾಶಿ ಹೇಗಿರಬೇಕು ಮೊದಲಾದ ವಿಷಯಗಳ ಸುದೀರ್ಘ ವಿವರಣೆಯಿದೆ. ನಾಲ್ಕನೆಯ ಪ್ರಕರಣದಲ್ಲಿ ಪರೀಕ್ಷೆಯ ಫಲಿತಾಂಶಗಳ ಕುರಿತು ವಿವರಗಳಿವೆ. ಐದನೆಯ ಪ್ರಕರಣದಲ್ಲಿ ಅನುಭವಸಿದ್ಧ ನಿಯಮಗಳ ಪಟ್ಟಿಯನ್ನು ಕೊಡಲಾಗಿದೆ. ಹೀಗೆ "ಶಿಕ್ಷಣ ಜ್ಯೋತಿಷ್ಯ"ವು ಶಿಕ್ಷಣದ ಪಂಚಕೋನ ದೃಷ್ಟಿಯ ಶಿಕ್ಷಣಪಂಚಕವಾಗಿ ರೂಪಿತವಾಗಿದೆ.

——

# ೧. ಕ್ಷಣದಲ್ಲಿಯ ಅಡೆ-ತಡೆಗಳ ವಿಶ್ಲೇಷಣೆ

ಶಿಕ್ಷಣಾರ್ಥಿಯು ಯಾವುದೇ ವಿದ್ಯಾಭ್ಯಾಸವನ್ನು ಅರ್ಥಾತ್ ಯಾವುದೊಂದು ಕೋರ್ಸನ್ನು ಪ್ರಾರಂಭಿಸಿದರೆ ಅದನ್ನು ಸುಗಮವಾಗಿ, ನಿರ್ವಿಘ್ನವಾಗಿ ಪೂರ್ತಿಗೊಳಿಸುವುದು ಕೂಡ ಒಂದು ಯೋಗಾಯೋಗವೇ ಎಂದರೆ ತಪ್ಪಾಗಲಿಕ್ಕಿಲ್ಲ. ಏಕೆಂದರೆ ಎಲ್ಲ ವಿದ್ಯಾರ್ಥಿಗಳ ವಿದ್ಯಾಭ್ಯಾಸವು ಅಡೆ-ತಡೆಗಳಿಲ್ಲದೆಯೇ ಪೂರ್ತಿಯಾಗುತ್ತದೆ ಎಂದು ಹೇಳಲಾಗುವದಿಲ್ಲ. ವಿದ್ಯಾರ್ಥಿಯು ಜಾತಕದಲ್ಲಿ ಅನಿಷ್ಟ ಕುಯೋಗಗಳಿದ್ದರೆ ಅವನ ವಿದ್ಯಾಭ್ಯಾಸವು ಸುಗಮವಾಗಿ ಸಾಗದೆ ಅನೇಕ ಬಾರಿ ಪರೀಕ್ಷೆಗಳಲ್ಲಿ ಅನುತ್ತೀರ್ಣನಾಗುವುದೂ ಉಂಟು. ಅಷ್ಟೇ ಏಕೆ, ಶಿಕ್ಷಣವನ್ನು ಮುಂದುವರಿಸುವುದೂ ಕೂಡ ಕಷ್ಟದಾಯಕವಾಗಿರುವ ಅನೇಕ ವಿದ್ಯಾರ್ಥಿಗಳ ಅನುಭವ ಕಥನ ಕೇಳಿ ಜಾತಕವನ್ನು ಪರಿಶೀಲಿಸಿ ಮನಗಂಡ ಅನುಭವವಿದೆ. ಈ ಪ್ರಕರಣದಲ್ಲಿ ವಿದ್ಯಾರ್ಥಿಯ ಶಿಕ್ಷಣದಲ್ಲಿ ಯಾವ ಯಾವ ಅಡೆ-ತಡೆಗಳು ಬರುತ್ತವೆ, ಅವು ಯಾತಕ್ಕಾಗಿ ಬರುತ್ತವೆ, ಹೇಗೆ ಬರುತ್ತವೆ ಎಂಬುದರ ವಿಶ್ಲೇಷಣೆಯನ್ನು ಹಾಗೂ ಆಯಾ ಸ್ಥಿತಿಗತಿಗಳನ್ನು ಗ್ರಹಗಳ ಸ್ಥಾನಮಾನ, ರಾಶಿಗಳ ಪ್ರಭಾವ, ಯೋಗಗಳ ಪರಿಣಾಮಗಳ ಬಗೆಗೆ ವಿವೇಚಿಸಲಾಗಿದೆ.

**ಅಡೆ-ತಡೆಗಳಲ್ಲಿಯ ಪ್ರಕಾರ:—** ಜ್ಯೋತಿಷ್ಯಶಾಸ್ತ್ರದ ಆಧಾರದ ಮೇಲಿಂದ ಶಿಕ್ಷಣದಲ್ಲಿ ಬರುವ ಆತಂಕ, ಅಡೆ-ತಡೆಗಳನ್ನು ವಿಶ್ಲೇಷಿಸಿದಾಗ ಹದಿನೈದು ಕಾರಣಗಳನ್ನು ಹೇಳಬಹುದು. (೧) ಕೋರ್ಸ ಅಥವಾ ವಿಷಯಗಳ ಆಯ್ಕೆಯಲ್ಲಿಯ ದೋಷ (Wrong Selaction of Course or Subjects), (೨) ಪ್ರೇಮ ಪ್ರಣಯಗಳಲ್ಲಿ ಮಗ್ನತೆ, (೩) ಅಧ್ಯಾಪಕರ ಅಸಹಕಾರ, ಪಠ್ಯೇತರ ಚಟುವಟಿಕೆಗಳಲ್ಲಿ ಹೆಚ್ಚು ಆಸಕ್ತಿ, ಶಾರೀರಿಕ ಪೀಡೆ, (೬) ಡ್ರಾಪ್ ತೆಗೆದುಕೊಳ್ಳುವಿಕೆ, (೭) ಕಡ್ಡಾಯ ವಿಷಯಗಳ ಪ್ರಭಾವ, (೮) ಮನೆಯಲ್ಲಿಯ ವಿಷಮ ವಾತಾವರಣ, ೯) ಪರೀಕ್ಷಾ ಭಯ,

೧೦) ಅತಿಶಯ ಆತ್ಮವಿಶ್ವಾಸ, ೧೧) ಪಾಲಕರ ವಶೀಲಿಯ ಪ್ರಭಾವ, ೧೨) ಕಡುದಾರಿದ್ರ್ಯ, ೧೩) ಸರಕಾರದ ಧೋರಣೆ, ೧೪) ವಿವಾಹದ ಪ್ರಭಾವ, ೧೫) ಕೆಲವು ವಿಚಿತ್ರ ಯೋಗಗಳು.

೧. **ಕೋರ್ಸ್ ಅಥವಾ ವಿಷಯಗಳ ಆಯ್ಕೆಯಲ್ಲಿಯ ದೋಷ :—** ಮೊದಲನೆಯದಾಗಿ ವಿದ್ಯಾರ್ಥಿಯು ತನ್ನ ಶಿಕ್ಷಣದಲ್ಲಿಯ ಕೋರ್ಸಗಳನ್ನಾಗಲಿ, ವಿಷಯಗಳನ್ನಾಗಲಿ ಆಯ್ದುಕೊಳ್ಳುವುದರಲ್ಲಿ ತಪ್ಪು ಮಾಡಿದರೆ ಶಿಕ್ಷಣದಲ್ಲಿ ಆತಂಕ ಉಂಟಾಗುವ ಸಂಭವ ಹೆಚ್ಚುತ್ತದೆ. ಈ ಆಯ್ದುಕೊಳ್ಳುವುದರಲ್ಲಿ ತಪ್ಪು ಮಾಡಲು ಅನೇಕ ಕಾರಣಗಳಿವೆ. ಮೊದಲನೆಯದಾಗಿ ವಿದ್ಯಾರ್ಥಿಯ ಅಭಿರುಚಿ, ಆಸಕ್ತಿ, ಯೋಗ್ಯತೆ, ಶಿಕ್ಷಣದ ಪರಿಮಿತಿಗಳನ್ನು ಲಕ್ಷಿಸದೆ ತಂದೆ-ತಾಯಿಗಳು, ಪಾಲಕರು ಒತ್ತಾಯಪೂರ್ವಕವಾಗಿ ತಮ್ಮ ಇಚ್ಛೆ, ಅಭಿಲಾಷೆಗಳಂತೆಯೇ ವಿಷಯಗಳನ್ನಾಗಲಿ, ಕೋರ್ಸಗಳನ್ನಾಗಲಿ ಆರಿಸುವಂತೆ ಒತ್ತಾಯ ಮಾಡುವುದು. ಉದಾಹರಣೆಗಾಗಿ : ತನ್ನ ಮಗ ಡಾಕ್ಟರನಾಗಲೇಬೇಕೆಂಬ ಇಚ್ಛೆಯುಳ್ಳ ಪಾಲಕನು ಇಚ್ಛೆಯಿಲ್ಲದ ತನ್ನ ಮಗನನ್ನು ವೈದ್ಯಕೀಯ ಶಿಕ್ಷಣಕ್ಕೆ ಕಳಿಸಿಕೊಡುವಿಕೆ. ಎರಡನೆಯದಾಗಿ, ವಿದ್ಯಾರ್ಥಿಯು ತನಗೆ ಆಸಕ್ತಿಯುಳ್ಳ ಕೋರ್ಸಿಗೆ ಪ್ರವೇಶ ದೊರೆಯದೆ ಇದ್ದಾಗ ಅವನ ಆಸಕ್ತಿಯ ವಿರುದ್ಧವಾಗಿ ಅನಿವಾರ್ಯವಾಗಿ ಬೇರೊಂದು ಕೋರ್ಸಿಗೆ ಸೇರುವ ಸನ್ನಿವೇಶ. ಮೂರನೆಯದಾಗಿ ಶಾಲೆ-ಕಾಲೇಜುಗಳಲ್ಲಿಯ ಶಿಕ್ಷಕ-ಅಧ್ಯಾಪಕರು ಯೋಗ್ಯ ಮಾರ್ಗದರ್ಶನ ನೀಡದೆ ತಮ್ಮ ಅಭಿಲಾಷೆಯಂತೆ ಅಥವಾ ತಮ್ಮ ಶಿಕ್ಷಣ ಸಂಸ್ಥೆಗಳಲ್ಲಿ ದೊರೆಯುವ ಶಿಕ್ಷಣದ ಉಪಲಬ್ಧತೆ ಹಾಗೂ ಉಪಕರಣಗಳ ಸೌಲಭ್ಯಗಳಿಗನುಗುಣವಾಗಿ ನಿರ್ದಿಷ್ಟ ವಿಷಯ ಅಥವಾ ಕೋರ್ಸಗಳನ್ನು ಆಯ್ದುಕೊಳ್ಳಬೇಕೆಂಬ ಕಡ್ಡಾಯದ ನಿರ್ದೇಶನದ ಪ್ರಭಾವಕ್ಕೊಳಗಾಗುವಿಕೆ, ಕೊನೆಯದಾಗಿ ಉದ್ಯೋಗದ ಅವಕಾಶ ಅಥವಾ ಗಳಿಕೆಯ ಸೌಲಭ್ಯಗಳನ್ನು ದೃಷ್ಟಿಯಲ್ಲಿರಿಸಿಕೊಂಡು ರಾಷ್ಟ್ರದಲ್ಲಿಯ ಯಾವ ಯಾವ ಕೋರ್ಸಿಗೆ ಅಥವಾ ಯಾವ ಯಾವ ವಿಷಯಗಳಿಗೆ ಹೆಚ್ಚು ಮಾನ್ಯತೆ, ಬೇಡಿಕೆಗಳಿರುವವೋ ಅವನ್ನೇ ವಿದ್ಯಾರ್ಥಿಗಳು ಆರಿಸಿಕೊಳ್ಳುವಂತೆ ಇರುವ ವಾತಾವರಣ (ಪ್ರಸಂಗ) ಈ ನಾಲ್ಕು ಕಾರಣಗಳಿಂದ ಕೋರ್ಸುಗಳ ವಿಷಯಗಳ ಆಯ್ಕೆಯಲ್ಲಿ ತಪ್ಪಾಗು

ತ್ರದೆ. ಇನ್ನು ಜ್ಯೋತಿಷ್ಯಶಾಸ್ತ್ರದಂತೆ ಜಾತಕನಿಗೆ ಯಾವ ಯಾವ ವಿಷಯಗಳಲ್ಲಿ ಅಥವಾ ಯಾವ ಯಾವ ಕೋರ್ಸುಗಳಲ್ಲಿ ಪರಿಣತಿ ಪಡೆಯಬಹುದು ಎಂಬ ವಿಷಯಗಳಿಗೆ ಈ ಪುಸ್ತಕದ ಎರಡನೆಯ ಪ್ರಕರಣದಲ್ಲಿ ಸಂಕ್ಷಿಪ್ತವಾಗಿಯೂ. ಮೂರನೆಯ ಪ್ರಕರಣದಲ್ಲಿ ವಿಶದವಾಗಿಯೂ ವಿವರಿಸಲಾಗಿದೆ. ಪ್ರಸ್ತುತ ಈ ಪ್ರಕರಣದಮಟ್ಟಿಗೆ ಇಲ್ಲಿ ವಿವರಿಸಲಾಗಿದೆ.

ಯಾವ ಕೋರ್ಸನ್ನು ಆಯ್ದುಕೊಳ್ಳಬೇಕು ? :— ಯಾವುದೇ ವಿದ್ಯಾರ್ಥಿಯು ಯಾವ ಕೋರ್ಸನ್ನು, ಯಾವ ವಿಷಯವನ್ನು ಆಯ್ದುಕೊಳ್ಳಲಿ ಎಂದು ವಿಚಾರಿಸಿದಾಗ ಇದಕ್ಕೆ ಉತ್ತರಕೊಡುವ ಪೂರ್ವದಲ್ಲಿ ನಾವು ಎರಡು ಸಂಗತಿಗಳನ್ನು ಲಕ್ಷ್ಯದಲ್ಲಿಟ್ಟುಕೊಳ್ಳಬೇಕು. ಮೊದಲನೆಯದಾಗಿ ಜಾತಕನ ಜಾತಕದಲ್ಲಿಯ ವಿದ್ಯಾಯೋಗ, ಶಿಕ್ಷಣಮಟ್ಟ, ಬೌದ್ಧಿಕ ಸಾಮರ್ಥ್ಯಗಳನ್ನು ಪರಿಶೀಲಿಸಿದ ನಂತರ ಯಾವ ಕೋರ್ಸನ್ನು ಆಯ್ದುಕೊಂಡರೆ ಅನುಕೂಲವಾದೀತೆಂಬುದನ್ನು ಉತ್ತರಿಸಬೇಕು. ಎರಡನೆಯದಾಗಿ ಗೋಚರೀ ಗ್ರಹಗಳ ಪರಿಭ್ರಮಣದ ಅನಾನುಕೂಲತೆಯ ಪರಿಣಾಮ, ದಶೆ-ಅಂತರ್ದಶೆಗಳ ಪ್ರಭಾವದ ಪರಿಣಾಮ ಪರಿಶೀಲಿಸಬೇಕು. ಏಕೆಂದರೆ ಗೋಚರಿಯಿಂದ ಸಾಡೇಸಾತಿ, ಪಂಚಮಾಷ್ಟಮ ಶನಿಯ ಪರಿಭ್ರಮಣ ಹಾಗೂ ಗೋಚರೀ ಗುರುವಿನ ಪರಿಣಾಮವೂ ಕೂಡ ವಿದ್ಯಾರ್ಥಿ ದೆಶೆಯಲ್ಲಿ, ಅದರಲ್ಲಿಯೂ ಪರೀಕ್ಷೆಯ ವಿಷಯವಾಗಿ ಹೆಚ್ಚು ಪರಿಣಾಮವನ್ನುಂಟು ಮಾಡುತ್ತವೆ ಎಂಬುದು ಅನೇಕ ಜಾತಕಗಳ ಅವಲೋಕನದಿಂದ ತಿಳಿದಿದೆ. ಉದಾಹರಣೆಗಾಗಿ: ಧನು ಲಗ್ನದ ಪಂಚಮದಲ್ಲಿ ಗುರು-ಚಂದ್ರರಿದ್ದು, ಪಂಚಮೇಶನು ಭಾಗ್ಯದಲ್ಲಿದ್ದು ಅನಿಷ್ಟ ಸಾಡೇಸಾತಿಯ ಪರಿಣಾಮದಿಂದ ಅಯಶಸ್ವಿಯಾದ ಉದಾಹರಣೆಗಳಿವೆ.

ಎರಡನೆಯದಾಗಿ ಶಿಕ್ಷಣದ ಕೋರ್ಸಿನ ವಿಷಯವಾಗಿ ನಿರ್ಣಯ ತೆಗೆದುಕೊಳ್ಳುವ ಪೂರ್ವದಲ್ಲಿ ನಾವು ಮೂರು ಸಂಗತಿಗಳನ್ನು ಲಕ್ಷ್ಯದಲ್ಲಿಡಬೇಕು. ೧) ಜಾತಕನ ಜಾತಕವು ಪದವೀ ಪಡೆಯುವ ಯೋಗವುಳ್ಳದ್ದೋ ಅಥವಾ ಡಿಪ್ಲೋಮಾ ಪಡೆಯುವಂತಹದ್ದೋ ಅಥವಾ ಯಾವುದಾದರೂ ಒಂದು ಅಲ್ಪಾವಧಿಯ ಸರ್ಟಿಫಿಕೇಟು ( Short Certificate Course )

ಲಭಿಸುವಂತಹದೋ ಹೇಗೆ ಎಂಬುದನ್ನು ಮೊದಲು ಪರಿಶೀಲಿಸಬೇಕು. ಇವುಗಳ ವಿವರಣೆ ಮೂರನೆಯ ಪ್ರಕರಣಲ್ಲಿ ಕೊಡಲಾಗಿದೆ. ಉದಾಹರಣೆಗಾಗಿ : ಎಸ್.ಎಸ್.ಎಲ್.ಸಿ. ಉತ್ತೀರ್ಣನಾದ ವಿದ್ಯಾರ್ಥಿಯೊಬ್ಬನ ಜಾತಕವನ್ನು ಪರಿಶೀಲಿಸಿದಾಗ ಅವನ ಜಾತಕದಲ್ಲಿ ಮೂರು ವರ್ಷಗಳ ನಂತರ ಶಿಕ್ಷಣಕ್ಕೆ ವಿಘ್ನಗಳು ಉಂಟಾಗುತ್ತವೆ ಎಂದು ತಿಳಿಯಿರಿ. ಇಲ್ಲಿ ಮೂರು ವರ್ಷದ ವರೆಗಿನ ಯಾವುದಾದರೊಂದು ಡಿಪ್ಲೋಮಾದ ಕೋರ್ಸನ್ನು ಆಯ್ದುಕೊಳ್ಳುವಂತೆ ಸಲಹೆ ನೀಡಬೇಕು; ಐದಾರು ವರ್ಷದ ಪದವೀ ಕೋರ್ಸಿಗೆ ಬೆನ್ನುಹತ್ತಿ ಶಿಕ್ಷಣದಲ್ಲಿ ಆತಂಕ ತಂದುಕೊಳ್ಳಬಾರದೆಂದು ಸಲಹೆ ನೀಡಬೇಕು.

ಇದರಂತೆಯೇ ವಿಷಯಗಳನ್ನು ಆಯ್ದುಕೊಳ್ಳುವ ಪೂರ್ವದಲ್ಲಿ ಜಾತಕವನ್ನು ಪೂರ್ಣ ಪರಿಶೀಲಿಸಬೇಕು. ಉದಾಹರಣೆಗೆ : ಜಾತಕದಲ್ಲಿ ಬುಧನು ಬಲಾಢ್ಯನಿದ್ದರೆ ಅರ್ಥಶಾಸ್ತ್ರ, ಅಂಕಿ-ಸಂಖ್ಯಾಶಾಸ್ತ್ರ, ಭಾಷಾಶಾಸ್ತ್ರ ಮೊದಲಾದ ವಿಷಯಗಳನ್ನು ಆಯ್ದುಕೊಳ್ಳಬೇಕು. ಮಂಗಳನು ಬಲಾಢ್ಯನಿದ್ದರೆ ಭೌತಿಕವಿಜ್ಞಾನ, ಇಂಜನಿಯರಿಂಗ್ ವಿಜ್ಞಾನ, ಸೈನಿಕ ಶಿಕ್ಷಣ ಮೊದಲಾದ ಶಿಕ್ಷಣದಲ್ಲಿ ಜ್ಞಾನ ಲಭಿಸುತ್ತದೆ. ಹೀಗೆ ಆಯ್ದುಕೊಳ್ಳದೆ ಬುಧನು ದುರ್ಬಲವಿದ್ದ ಜಾತಕನು ಅರ್ಥಶಾಸ್ತ್ರ ತೆಗೆದುಕೊಳ್ಳುವುದು, ಮಂಗಳನು ಜಾತಕದಲ್ಲಿ ದುರ್ಬಲನಿದ್ದ ಜಾತಕನು ಭೌತಿಕ ವಿಜ್ಞಾನದಲ್ಲಿ ಪರಿಣತಿಯನ್ನು ಹೊಂದಲು ಹವಣಿಸಿ ಅನುತ್ತೀರ್ಣರಾದ ಅನೇಕ ವಿದ್ಯಾರ್ಥಿಗಳ ಜಾತಕಗಳನ್ನು ನೋಡಿದ ಅನುಭವವಿದೆ. ಆದುದರಿಂದ ಯೋಗ್ಯ ಕೋರ್ಸುಗಳನ್ನಾಗಲಿ, ಯೋಗ್ಯ ವಿಷಯಗಳನ್ನಾಗಲಿ ಆಯ್ದುಕೊಳ್ಳುವುದರಲ್ಲಿ ತಪ್ಪಾಗುವುದರಿಂದ ಪರೀಕ್ಷೆಯಲ್ಲಿ ಅಯಶಸ್ವಿಯಾಗುತ್ತಾರೆ. ಯಾವ ವಿದ್ಯಾರ್ಥಿಗೆ ಯಾವ ಕೋರ್ಸುಗಳನ್ನು, ಯಾವ ವಿಷಯಗಳನ್ನು ಆಯ್ದುಕೊಳ್ಳಬೇಕೆಂಬುದನ್ನು ಇದೇ ಪುಸ್ತಕದ ಮೂರನೆಯ ಪ್ರಕರಣದಲ್ಲಿ ಹೆಚ್ಚು ವಿವರವಾಗಿ ವಿವೇಚಿಸಲಾಗಿದೆ.

೨. ಪ್ರೇಮ–ಪ್ರಣಯಗಳ ಮಗ್ನತೆಯಿಂದಾಗುವ ದುಷ್ಪರಿಣಾಮ : ಎರಡನೆಯದಾಗಿ ವಿದ್ಯಾರ್ಜನೆಯ ಅವಧಿಯಲ್ಲಿ ವಿದ್ಯಾರ್ಥಿಗಳು ದುಷ್ಪ

ಸಹವಾಸಗಳಿಗೆ ಒಳಗಾಗಿ ಪ್ರೇಮ-ಪ್ರಣಯಗಳ ಮೋಹಜಾಲದಲ್ಲಿ ಬಿದ್ದು ಅಭ್ಯಾಸವನ್ನು ಅಲಕ್ಷಿಸಿ ಪರೀಕ್ಷೆಗಳಲ್ಲಿ ಅಯಶಸ್ವಿಯಾಗುವರು. ಕೆಲವು ವಿದ್ಯಾರ್ಥಿಗಳಂತೂ ಪರೀಕ್ಷೆಗೆ ಹಣವನ್ನು ಕಟ್ಟದೆ, ಕ್ಷಣಿಕ ವಿಲಾಸ ಭೋಗ ಗಳಿಗೆ ಖರ್ಚುಮಾಡಿ ವರ್ಷವನ್ನು ಕಳೆದುಕೊಂಡ ಉದಾಹರಣೆಗಳು ಸಾಕ ಷ್ಟಿವೆ. ಅಷ್ಟೇ ಏಕೆ, ಈ ಪ್ರೇಮ-ಪ್ರಣಯಗಳ ಪಾಶದಲ್ಲಿ ಸಿಕ್ಕು ಭ್ರಮಿಷ್ಟ ರಾದ ಹಾಗೂ ಪಾಲಕರ ಪ್ರೀತಿ, ಸಹಾನುಭೂತಿ, ಸಹಕಾರಗಳಿಗೂ ಎರವಾಗಿ ಶಿಕ್ಷಣವನ್ನು ನಿಲ್ಲಿಸಿದ ಶಾಲೆ-ಕಾಲೇಜು, ಕೋರ್ಸು ವಿಷಯಗಳನ್ನು ಬದಲಾ ಯಿಸಿ ಶಿಕ್ಷಣಕ್ಕೇ ಆತಂಕವನ್ನು ತಂದುಕೊಂಡಂಥ ಸಾವಿರಾರು ಜಾತಕಗಳನ್ನು ನೋಡಿದ ಅನುಭವವಿದೆ.

ಸಾಮಾನ್ಯವಾಗಿ ಇಂಥ ವಿದ್ಯಾರ್ಥಿ-ವಿದ್ಯಾರ್ಥಿನಿಯರ ಜಾತಕದಲ್ಲಿ ಚಂದ್ರ-ಶುಕ್ರರು ದೂಷಿತರೂ, ಲಗ್ನ, ಪಂಚಮ, ಅಷ್ಟಮ ಸ್ಥಾನಗಳು ಸಹ ದೂಷಿತವಾದವೂ ಇರುತ್ತವೆ.

೧) ಚಂದ್ರ ಅಥವಾ ಶುಕ್ರರು ಸಪ್ತಮದಲ್ಲಿದ್ದು, ಶನಿಯು ಪಂಚಮ, ಲಗ್ನ ದಶಮದಲ್ಲಿದ್ದರೆ,

೨) ಪಂಚಮದಲ್ಲಿ ಚಂದ್ರ ಅಥವಾ ಶುಕ್ರರಿದ್ದು ಶನಿಯು ಲಾಭ, ತೃತೀಯ ಅಷ್ಟಮದಲ್ಲಿದ್ದರೆ,

೩) ಚಂದ್ರ ಅಥವಾ ಶುಕ್ರ ಅಷ್ಟಮದಲ್ಲಿದ್ದು ಶನಿಯು ದ್ವಿತೀಯ, ಷಷ್ಠ, ಲಾಭದಲ್ಲಿದ್ದರೆ,

೪) ಚಂದ್ರ ಅಥವಾ ಶುಕ್ರ ವ್ಯಯದಲ್ಲಿದ್ದು ಶನಿಯು ಷಷ್ಠ, ದಶಮ ತೃತೀಯದಲ್ಲಿದ್ದರೆ,

೫) ಚಂದ್ರ ಅಥವಾ ಶುಕ್ರ ಲಗ್ನದಲ್ಲಿದ್ದು ಶನಿಯು ಲಾಭ, ಸಪ್ತಮ, ಚತುರ್ಥದಲ್ಲಿದ್ದರೆ,

೬) ಚಂದ್ರ ಅಥವಾ ಶುಕ್ರ ಪಂಚಮದಲ್ಲಿದ್ದು ಮಂಗಳನು ದಶಮ, ಲಾಭ ದ್ವಿತೀಯದಲ್ಲಿದ್ದರೆ,

೭) ಚಂದ್ರ ಅಥವಾ ಶುಕ್ರ ಸಪ್ತಮದಲ್ಲಿದ್ದು ಕುಜನು ಲಗ್ನ, ವ್ಯಯ, ಚತುರ್ಥದಲ್ಲಿದ್ದರೆ,

೮) ಚಂದ್ರ ಅಥವಾ ಶುಕ್ರರು ಅಷ್ಟಮದಲ್ಲಿದ್ದು ಕುಜನು ಲಗ್ನ, ದ್ವಿತೀಯ ಪಂಚಮದಲ್ಲಿದ್ದರೆ,

೯) ಚಂದ್ರ ಅಥವಾ ಶುಕ್ರ ವ್ಯಯದಲ್ಲಿದ್ದು ಕುಜನು ಪಂಚಮ, ಷಷ್ಠ, ನವಮದಲ್ಲಿದ್ದರೆ,

೧೦) ಚಂದ್ರ-ರಾಹು ಅಥವಾ ಶುಕ್ರ-ರಾಹು ಗ್ರಹಗಳ ಯುತಿ ಯೋಗವು ಪಂಚಮ, ಸಪ್ತಮ, ಅಷ್ಟಮ, ವ್ಯಯ, ಲಗ್ನದಲ್ಲಿದ್ದರೆ,

೧೧) ಜಲ ಇಲ್ಲವೆ ಭೂರಾಶಿಯ ಚಂದ್ರನ ಮೇಲೆ ಶನಿ ಮಂಗಳರ ಪ್ರತಿಯೋಗವಾಗಲಿ, ಯುತಿಯೋಗವಾಗಲಿ, ದೃಷ್ಟಿಯೋಗವಾಗಲಿ, ಇದ್ದರೆ,

೧೨) ಶುಕ್ರನು ವಾಯು ಇಲ್ಲವೆ ಪೃಥ್ವಿ ರಾಶಿಯವನಾಗಿದ್ದು ಶನಿ ಇಲ್ಲವೆ ಮಂಗಳನೊಂದಿಗೆ ದೃಷ್ಟಿ ಇಲ್ಲವೆ ಪ್ರತಿಯೋಗವಿದ್ದರೆ,

೧೩) ಚಂದ್ರ-ಶುಕ್ರರ ಯುತಿಯೋಗವು ಪಂಚಮ, ಸಪ್ತಮ, ವ್ಯಯ, ಅಷ್ಟಮ ಲಗ್ನದಲ್ಲಿದ್ದರೆ.

ಹೀಗೆ ಮೇಲೆ ಕಾಣಿಸಿದ ೧೩ ಯೋಗಗಳಲ್ಲಿ ಜನಿಸಿದ ಜಾತಕನ ವಿದ್ಯಾರ್ಥಿದೆಶೆಯಲ್ಲಿ ಸಾಡೇಸಾತಿ ಮೊದಲಾದ ಅನಿಷ್ಟ ಗೋಚರಿ ಗ್ರಹಗಳ ಪರಿಭ್ರಮಣವಿದ್ದಾಗ ಪ್ರೇಮ-ಪ್ರಣಯಗಳ ಮಗ್ನತೆಯಿಂದಾಗಿ ಶಿಕ್ಷಣವನ್ನು ಅರ್ಧಕ್ಕೇ ನಿಲ್ಲಿಸಿದ, ಮನೆಯಿಂದ ಪಲಾಯನ ಮಾಡಿದ, ಶಾಲೆ, ಕೋರ್ಸು, ವಿಷಯಗಳನ್ನು ಬದಲಿಸಿದ ಅನೇಕ ವಿದ್ಯಾರ್ಥಿಗಳನ್ನು ನೋಡಿದ ಅನುಭವ ಇದೆ.

೩. ಅಧ್ಯಾಪಕರ ಅಸಹಕಾರದ ದುಷ್ಪರಿಣಾಮ :— ಅನೇಕ ವಿದ್ಯಾರ್ಥಿಗಳು ತಮ್ಮ ಶಾಲೆ-ಕಾಲೇಜುಗಳಲ್ಲಿಯ ಶಿಕ್ಷಕ, ಅಧ್ಯಾಪಕ, ಪ್ರಾಚಾರ್ಯರೊಂದಿಗೆ ವಿರಸ ಮಾಡಿಕೊಂಡು ಅವರ ಅಸಹಕಾರದಿಂದ ವಿದ್ಯಾಭ್ಯಾಸಕ್ಕೆ ತೊಡಕು ಮಾಡಿಕೊಳ್ಳುತ್ತಾರೆ. ಅಷ್ಟೆ ಏಕೆ? ಶಿಕ್ಷಣವನ್ನೂ ನಿಲ್ಲಿಸಿ, ಸೇಡಿನ ಭಾವನೆಯ ಸ್ವಭಾವದವರಾಗಿ ಸಮಾಜಕ್ಕೆ ಘಾತುಕರಾಗುತ್ತಾರೆ. ಮತ್ತೆ ಕೆಲವು ವಿದ್ಯಾರ್ಥಿಗಳು ಈ ಅಧ್ಯಾಪಕರ ಅಸಹಕಾರ ಪ್ರವೃತ್ತಿಗೊಳಗಾಗಿ ಆತ್ಮಹತ್ಯೆಯನ್ನು ಮಾಡಿಕೊಂಡ ಉದಾಹರಣೆಗಳು ಸಾಕಷ್ಟು ಇವೆ. ಕೆಲವು ವಿದ್ಯಾರ್ಥಿಗಳು ಭ್ರಮಿಷ್ಟರಾಗಿಯೂ ಇದ್ದಾರೆ. ಸ್ನಾತ

ಕೋತ್ತರ ಪದವಿಗಳಿಗೆ ಅಭ್ಯಾಸಮಾಡುವ ವಿದ್ಯಾರ್ಥಿಗಳಂತೂ ಆಯಾ ವಿಭಾಗದ ಮುಖ್ಯಸ್ಥರೊಡನೆ (Heads of the Departments) ವಿರಸ ಕಟ್ಟಿಕೊಂಡರೆ ಆ ವಿದ್ಯಾರ್ಥಿಯು ಉತ್ತೀರ್ಣವಾಗುವದೇ ಅಶಕ್ಯವಾಗುತ್ತದೆ.

ಅಧ್ಯಾಪಕರ ಅಸಹಕಾರವಾಗಲು ಕೂಡ ಅನೇಕ ಕಾರಣಗಳಿವೆ.

೧) ಮೊದಲನೆಯದಾಗಿ ವಿದ್ಯಾರ್ಥಿಯು ಪ್ರಾಧ್ಯಾಪಕರಿಗಿಂತ ಹೆಚ್ಚು ಬುದ್ಧಿವಂತನಿರುವುದರಿಂದ ದಡ್ಡ ಅಧ್ಯಾಪಕನು ಬುದ್ಧಿವಂತ ವಿದ್ಯಾರ್ಥಿಯ ಏಳ್ಗೆಯನ್ನು ಸಹಿಸದೆ ಅಸೂಯಾಭಾವದ ಮೂಲಕ ವಿದ್ಯಾರ್ಥಿಯ ಅಭ್ಯುದಯಕ್ಕೆ ಮುಳುವಾಗುತ್ತಾನೆ.

೨) ಎರಡನೆಯದಾಗಿ ಅವಿಧೇಯತನದಿಂದ ಅನೇಕ ವಿದ್ಯಾರ್ಥಿಗಳು ಶ್ರೀಮಂತಿಕೆ ( Aristocracy ) ಯ ಪ್ರಭಾವದಿಂದಲೋ ಅಥವಾ ಪಾಲಕರ ಅಂತಸ್ತು, ಅಧಿಕಾರ, ವರ್ಚಸ್ಸು ಇವುಗಳ ಪ್ರಭಾವದಿಂದಲೋ ಜನ್ಮತಃ ಅವಿಧೇಯರಿರುತ್ತಾರೆ. ಇದು ಕೂಡ ಕೆಲವೊಟ್ಟಿಗೆ ಅಧ್ಯಾಪಕರ ಅಸಹಕಾರಕ್ಕೆ ಕಾರಣವಾಗುತ್ತದೆ.

೩) ಮೂರನೆಯದಾಗಿ ಸಾಮಾನ್ಯವಾಗಿ ಯಾವುದೇ ಶಿಕ್ಷಣಸಂಸ್ಥೆಯಲ್ಲಿ ಅಧ್ಯಾಪಕರಲ್ಲಿ ಎರಡು ಬಣ, ಪಂಗಡ, ಗುಂಪುಗಳಿರುತ್ತವೆ. ಈ ಗುಂಪುಗಳು ಮುಖ್ಯಾಧ್ಯಾಪಕರ ಹಾಗೂ ಇತರ ಅಧ್ಯಾಪಕರಲ್ಲಿರಬಹುದು. ಅಥವಾ ಸಂಸ್ಥೆಯ ವ್ಯವಸ್ಥಾಪಕ ವರ್ಗದೊಂದಿಗೆ ಇರಬಹುದು. ಈ ಯಾವುದೊಂದು ಗುಂಪಿನ ಅಧ್ಯಾಪಕರು ಯಾರೊಬ್ಬ ವಿದ್ಯಾರ್ಥಿಗೆ ಹೆಚ್ಚು ಸ್ನೇಹ, ಸಹಕಾರ, ಸಹಾನುಭೂತಿ ತೋರಿಸಿದಲ್ಲಿ ಇನ್ನೊಂದು ಗುಂಪಿನ ಅಸಹಕಾರವನ್ನು ಆ ದುರ್ದೈವೀ ವಿದ್ಯಾರ್ಥಿಯು ಎದುರಿಸಬೇಕಾಗುತ್ತದೆ.

೪) ನಾಲ್ಕನೆಯದಾಗಿ ಕೆಲವು ಅಧ್ಯಾಪಕರು ತಾವು ಮೆಚ್ಚಿದ ಲೇಖಕರ ಗ್ರಂಥದ ಅಥವಾ ತಾವು ಕೊಟ್ಟ ಟಿಪ್ಪಣೆಗಳ ಆಧಾರದಿಂದಲೇ ವಿದ್ಯಾರ್ಥಿಗಳಿಂದ ಉತ್ತರವನ್ನು ಬಯಸುತ್ತಾರೆ. ಇವುಗಳ ವಿರುದ್ಧ ವಿದ್ಯಾರ್ಥಿ ವರ್ತಿಸಿದಲ್ಲಿ ಅಧ್ಯಾಪಕರ ಅವಕೃಪೆಗೆ ಪಾತ್ರನಾಗುತ್ತಾನೆ.

೫) ಕೊನೆಯದಾಗಿ ನಾವು ಭಾವೈಕ್ಯದ ಬಗ್ಗೆ ಎಷ್ಟೇ ಮಾತನಾಡಿದರೂ, ಬರೆದರೂ ವಿದ್ಯಾರ್ಥಿಯ ದುರ್ದೈವದಿಂದ, ಜಾತೀಯತೆಯ ಧೂತಕ್ಕೆ ತುತ್ತಾಗಿ ಅಧ್ಯಾಪಕರ ಅವಕೃಗೆಗೆ ಒಳಗಾದ ಅನೇಕ ವಿದ್ಯಾರ್ಥಿಗಳ ಜಾತಕಗಳನ್ನು ನೋಡಿದ ಅನುಭವವಿದೆ.

ಅಧ್ಯಾಪಕರ ಅಸಹಕಾರವು ಏಕಲವ್ಯ-ದ್ರೋಣಾಚಾರ್ಯರ ಕಾಲದಿಂದಲೂ ಬಂದಿರುತ್ತದೆ. ಆದರೆ ಒಂದು ಸಂಗತಿ ಮಾತ್ರ ನಿಜ. ಈ ಶಿಕ್ಷಕ ಶತ್ರುತ್ವ'ದ ಅನಿಷ್ಟ ಯೋಗವು ಎಲ್ಲ ವಿದ್ಯಾರ್ಥಿಗಳಲ್ಲಿರದೆ ಕೆಲವೇ ದುರ್ದೈವೀ ವಿದ್ಯಾರ್ಥಿಗಳಲ್ಲಿರುತ್ತದೆ. ಇಂಥ ವಿದ್ಯಾರ್ಥಿಗಳ ಜಾತಕದಲ್ಲಿ ಎಂಥ ಕುಯೋಗಗಳಿರುತ್ತವೆಂಬುದನ್ನು ಪರಿಶೀಲಿಸುವಾ.

ಅಧ್ಯಾಪಕರ ಅಸಹಕಾರಕ್ಕೆ ಅನೇಕ ಕಾರಣಗಳಿದ್ದರೂ ಪ್ರಾಮುಖ್ಯವಾಗಿ ಎರಡು ಕಾರಣಗಳಿವೆ: ೧) ಅವಿಧೇಯತನ, ೨) ಅತಿ ಬುದ್ಧಿವಂತಿಕೆ. ಜಾತಕದಲ್ಲಿ ಅವಿಧೇಯತನವನ್ನುಂಟುಮಾಡುವ ಗ್ರಹವೆಂದರೆ ಮಂಗಳನು. ಮಂಗಳನು ಜಾತಕದಲ್ಲಿ ಬಲಾಢ್ಯನಾಗಿದ್ದ ವಿದ್ಯಾರ್ಥಿಗಳು ಹೆಚ್ಚಾಗಿ ಅವಿಧೇಯರಿರುತ್ತಾರೆ. ಎರಡನೆಯದಾಗಿ ಪುರುಷರಾಶಿಯಲ್ಲಿಯ ಅನೇಕ ಗ್ರಹಗಳಿರುವಿಕೆ, ಅದರಲ್ಲಿಯೂ ಚಂದ್ರನು ಮೇಷ, ಮಿಥುನ, ಸಿಂಹ, ವೃಶ್ಚಿಕ, ಧನು, ಮಕರ, ಕುಂಭ ಈ ರಾಶಿಗಳಲ್ಲಿದ್ದರೆ ವಿದ್ಯಾರ್ಥಿಗಳು ಹೆಚ್ಚು ಅವಿಧೇಯರಿರುತ್ತಾರೆ. ಮೂರನೆಯದಾಗಿ ಲಗ್ನದ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ಸಿಂಹ, ಧನು, ವೃಶ್ಚಿಕ, ವೃಷಭ, ಮಕರ ಈ ಲಗ್ನದ ವಿದ್ಯಾರ್ಥಿಗಳು ಹೆಚ್ಚು ಅವಿಧೇಯರಿರುತ್ತಾರೆ. ನಾಲ್ಕನೆಯದಾಗಿ ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ಲಗ್ನ (ತನುಸ್ಥಾನ) ಹಾಗೂ ಚತುರ್ಥ ಸ್ಥಾನಗಳು ದೂಷಿತವಿದ್ದರೆ ಅಥವಾ ಲಗ್ನ-ಚತುರ್ಥದಲ್ಲಿ ಕ್ರೂರ ಗ್ರಹಗಳಿದ್ದರೆ ಅದರಲ್ಲಿಯೂ ಮಂಗಳನಿದ್ದರೆ ಇಂಥ ವಿದ್ಯಾರ್ಥಿಗಳು ಹೆಚ್ಚಾಗಿ ಅವಿಧೇಯರಿರುತ್ತಾರೆ.

ಅತಿ ಬುದ್ಧಿವಂತರಿದ್ದ ವಿದ್ಯಾರ್ಥಿಗಳು ತಮ್ಮ ಬುದ್ಧಿವಂತಿಕೆಯ ಪ್ರದರ್ಶನದಿಂದ ಅಧ್ಯಾಪಕರ ಅಸಹಕಾರಕ್ಕೆ ಒಳಗಾಗುತ್ತಾರೆ. ಸಾಮಾನ್ಯವಾಗಿ ಇಂಥ ವಿದ್ಯಾರ್ಥಿಗಳ ಜಾತಕದಲ್ಲಿ ಹೆಚ್ಚಾಗಿ ಅನೇಕ ಗ್ರಹಗಳು

ವಾಯುರಾಶಿಯಲ್ಲಿರುತ್ತವೆ. ಅದರಲ್ಲಿಯೂ ಹೆಚ್ಚಾಗಿ ಬುಧ, ಚಂದ್ರ, ಗುರು, ಗ್ರಹಗಳು ಇರುತ್ತವೆ. ಎರಡನೆಯದಾಗಿ ಇಂಥ ವಿದ್ಯಾರ್ಥಿಗಳ ಜಾತಕವು ವೃಷಭ, ಮಿಥುನ, ತುಲಾ, ಕುಂಭ, ಲಗ್ನಗಳುಳ್ಳದ್ದಿರುತ್ತದೆ. ಮೂರನೆಯದಾಗಿ ಇಂಥ ವಿದ್ಯಾರ್ಥಿಗಳ ಜಾತಕದ ಲಗ್ನ, ಪಂಚಮ, ದ್ವಿತೀಯದಲ್ಲಿ ಚಂದ್ರ, ಬುಧ, ಗುರು ಗ್ರಹಗಳಿರುತ್ತವೆ. ನಾಲ್ಕನೆಯದಾಗಿ ಇಂಥ ವಿದ್ಯಾರ್ಥಿಗಳ ಜಾತಕದಲ್ಲಿ ಚಂದ್ರನು ಮಿಥುನ, ತುಲಾ, ಕುಂಭ, ಕರ್ಕ, ಮೀನ ರಾಶಿಯವನಿರುತ್ತಾನೆ.

ಅಧ್ಯಾಪಕರಿಂದ ಅಸಹಕಾರವನ್ನು ಹೊಂದುವ ವಿದ್ಯಾರ್ಥಿಗಳ ಜಾತಕದಲ್ಲಿ ಈ ಕೆಳಗಿನಂತೆ ಯೋಗಗಳಿರುತ್ತವೆ.

೧) ಮೇಷ, ಸಿಂಹ, ಧನು, ವೃಶ್ಚಿಕ, ಮಕರ ಈ ರಾಶಿಗಳ ವಿದ್ಯಾರ್ಥಿಗಳು ಅವಿಧೇಯತನದಿಂದ ಶಿಕ್ಷಕರ ಅವಕೃಪೆಗೆ ಪಾತ್ರರಾಗುತ್ತಾರೆ.

೨) ಮಿಥುನ, ತುಲಾ, ಕುಂಭ ಈ ರಾಶಿಯ ವಿದ್ಯಾರ್ಥಿಗಳು ಬುದ್ಧಿವಂತಿಕೆಯ ಪ್ರದರ್ಶನದಿಂದಲೂ ಅಥವಾ ಶಿಕ್ಷಕರ ಟಿಪ್ಪಣಿಗಳಿಗೆ ಮಹತ್ವ ಕೊಡದೆ ಇರುವದರ ಮೂಲಕವೂ ಅಸಹಕಾರವನ್ನು ಹೊಂದುವರು.

೩) ಲಗ್ನ ಇಲ್ಲವೆ ಚತುರ್ಥದಲ್ಲಿ ಮಂಗಳನಿದ್ದ ಜಾತಕನು (ದುರ್ಬಲ ಲಗ್ನೇಶ, ಚತುರ್ಥೇಶರು) ಶಿಕ್ಷಕರ ಅಸಹಕಾರವನ್ನು ಹೊಂದುವನು.

೪) ಲಗ್ನದಲ್ಲಿ ಗುರುವಿದ್ದ ವಿದ್ಯಾರ್ಥಿಯು ತನ್ನ ಪಾಂಡಿತ್ಯ ಪ್ರದರ್ಶನದಿಂದ ಅಧ್ಯಾಪಕರ ಅವಕೃಪೆಗೆ ಒಳಗಾಗುತ್ತಾನೆ.

೫) ಜಾತಕದಲ್ಲಿ ಅನೇಕ ಗ್ರಹಗಳು ರಾಶಿಬಲದವರಿದ್ದ ವಿದ್ಯಾರ್ಥಿಗಳು ಅನೇಕ ವಿಷಯಗಳಲ್ಲಿ ಜ್ಞಾನವುಳ್ಳವರಿದ್ದು ಬಹುವಿಷಯ ಪಾಂಡಿತ್ಯವೇ ಅವರಿಗೆ ಮುಳುವಾಗುತ್ತದೆ.

೬) ವೃಷಭ ಹಾಗೂ ಕನ್ಯಾರಾಶಿಯ ವಿದ್ಯಾರ್ಥಿಗಳು ಅನವಶ್ಯಕ ಮಾತುಗಾರಿಕೆಯಿಂದ ಶಿಕ್ಷಕರ ಅವಕೃಪೆಗೆ ಪಾತ್ರರಾಗುತ್ತಾರೆ.

೭) ವೃಷಭ, ಕರ್ಕ, ಕನ್ಯಾ, ಮೀನ ಈ ರಾಶಿಯ ವಿದ್ಯಾರ್ಥಿಗಳು ಯಾವುದೊಂದು ಗುಂಪಿನ ಅಧ್ಯಾಪಕರ ಅತಿಶಯ ಸ್ನೇಹ, ಸಹಕಾರ, ಸಹಾನುಭೂತಿಗಳಿಗೆ ಪಾತ್ರರಿರುವುದರಿಂದ ಇನ್ನೊಂದು ಗುಂಪಿನ ಅಧ್ಯಾಪಕರ ಅಸಹಕಾರಕ್ಕೆ ಎರವಾಗುತ್ತಾರೆ.

೮) ವೃಶ್ಚಿಕ ಹಾಗೂ ಮಕರ ರಾಶಿಯ ವಿದ್ಯಾರ್ಥಿಗಳು ಸ್ವಭಾವತಃ (ಜನ್ಮತಃ) ಮೋಹಕರ ಸಂಭಾಷಕರಿರುವದಿಲ್ಲ. ಇವರ ಅಯೋಗ್ಯ ಸಂಭಾಷಣೆಯೇ (Unpleasent Conversation) ಅಸಹಕಾರಕ್ಕೆ ಕಾರಣವಾಗುತ್ತದೆ.

೯) ಜಾತಕದಲ್ಲಿ ಮಂಗಳನು ಬಲಾಢ್ಯನಿದ್ದ ವಿದ್ಯಾರ್ಥಿಗಳು ಅಥವಾ ಸಿಂಹ, ಧನು, ವೃಶ್ಚಿಕ, ಮಕರ ರಾಶಿಯ ವಿದ್ಯಾರ್ಥಿಗಳು ತಮ್ಮ ಕಠೋರ, ನಿಷ್ಠುರ, ಸ್ಪಷ್ಟ ಮಾತುಗಾರಿಕೆಯಿಂದ ಅಧ್ಯಾಪಕರ ಅವಕೃಪೆಗೆ ಒಳಗಾಗುತ್ತಾರೆ.

೧೦) ಶನಿ–ರವಿ, ಶನಿ-ಮಂಗಳ, ಶನಿ-ಚಂದ್ರ ಇವರ ಯುತಿಯೋಗವಾಗಲಿ, ಪ್ರತಿಯೋಗವಾಗಲಿ, ಲಗ್ನ, ಚತುರ್ಥ, ಪಂಚಮಗಳಲ್ಲಿದ್ದರೆ ಶಿಕ್ಷಕರ ಅವಕೃಪೆ ಯಾವಾಗಲೂ ಇರುತ್ತದೆ. ಹೀಗೆ ಹತ್ತು ಯೋಗಗಳಲ್ಲಿ ಜನಿಸಿದ ವಿದ್ಯಾರ್ಥಿಗಳಿಗೆ ಅಧ್ಯಾಪಕರ ಅಸಹಕಾರವಿರುತ್ತದೆ.

೪. ಪಠ್ಯೇತರ ಚಟುವಟಿಕೆಗಳಲ್ಲಿ ಹೆಚ್ಚು ಆಸಕ್ತಿಯಿಂದಾಗುವ ದುಷ್ಪರಿಣಾಮಗಳು :— ನಾಲ್ಕನೆಯದಾಗಿ ವಿದ್ಯಾರ್ಜನೆಯ ಅವಧಿಯಲ್ಲಿ ಅನೇಕ ವಿದ್ಯಾರ್ಥಿಗಳು ಪಠ್ಯೇತರ ಚಟುವಟಿಕೆಗಳಲ್ಲಿ ಹೆಚ್ಚಾಗಿ ತೊಡಗಿ ತಮ್ಮ ವಿದ್ಯಾಭ್ಯಾಸವನ್ನು ಕಡೆಗಣಿಸುವರು. ಇಷ್ಟೇ ಯಾಕೆ, ಇವರ ಪಠ್ಯೇತರ ಚಟುವಟಿಕೆಗಳು ಅನೇಕ ಸಲ ಅಧ್ಯಾಪಕ, ಪ್ರಾಧ್ಯಾಪಕ, ಪ್ರಾಚಾರ್ಯ, ಪಾಲಕರ ವಿರಸಕ್ಕೂ ಕಾರಣವಾಗಿ ಪರೀಕ್ಷೆಗಳನ್ನು ಕಳೆದುಕೊಂಡು ಶಿಕ್ಷಣವನ್ನು ನಿಲ್ಲಿಸಿದ ನಿದರ್ಶನಗಳೂ ಸಾಕಷ್ಟಿವೆ. ಆದರೆ ಒಂದು ಸಂಗತಿ ನಿಜ. ಪಠ್ಯೇತರ ಚಟುವಟಿಕೆಗಳಲ್ಲಿ ಭಾಗವಹಿಸುವ ಯೋಗವು ಎಲ್ಲ ವಿದ್ಯಾರ್ಥಿಗಳಲ್ಲಿಯೂ ಇರುವದಿಲ್ಲ. ಇದೂ ಅಲ್ಲದೆ ಪಠ್ಯೇತರ ಚಟುವಟಿಕೆಯಲ್ಲಿ ಭಾಗವಹಿಸಿಯೂ ಪರೀಕ್ಷೆಯಲ್ಲಿ ಸಹ ಉಚ್ಚಶ್ರೇಣಿಯಲ್ಲಿ ತೇರ್ಗಡೆಯಾಗುವ ವಿದ್ಯಾರ್ಥಿಗಳನ್ನು ನೋಡಿದ ಅನುಭವವೂ ಇದೆ. ಆದುದರಿಂದ ಯಾವ ವಿದ್ಯಾರ್ಥಿಯು ಪಠ್ಯೇತರ ಚಟುವಟಿಕೆಯಲ್ಲಿ ಭಾಗವಹಿಸಲು ಜಾತಕ ಎಂತಿರಬೇಕು, ಯಾರಿಗೆ ಪಠ್ಯೇತರ ಚಟುವಟಿಕೆಗಳಲ್ಲಿ ಹಾನಿಯಾಗುವುದು ಎಂಬುದನ್ನು ಈ ಕೆಳಗಿನಂತೆ ಕೊಡಲಾಗಿದೆ.

ಪಠ್ಯೇತರ ಚಟುವಟಿಕೆಯಲ್ಲಿ ತೊಡಗುವ ವಿದ್ಯಾರ್ಥಿಗಳನ್ನು ಮೂರು ವರ್ಗವನ್ನಾಗಿ ವಿಂಗಡಿಸಬಹುದು:

೧) ಶಾಲೆ-ಕಾಲೇಜುಗಳಲ್ಲಿ ನಡೆಯುವ ವಿವಿಧ ಸಂಘ-ಸಂಸ್ಥೆಗಳ ಚುನಾವಣೆಗಳಲ್ಲಿ ಭಾಗವಹಿಸಿ ಪದಾಧಿಕಾರಿಗಳಾಗಿ ವಿದ್ಯಾಲಯಗಳ ಸಾಂಸ್ಕೃತಿಕ, ಸಾಮಾಜಿಕ ಚಟುವಟಿಕೆಯಲ್ಲಿ ಮುಂದಾಳುತ್ವವನ್ನು ವಹಿಸುವ ಒಂದು ವರ್ಗ.

೨) ಶಾಲೆ-ಕಾಲೇಜುಗಳಲ್ಲಿ ನಡೆಯುವ ಸ್ನೇಹ-ಸಮ್ಮೇಲನ, ವಾರ್ಷಿಕೋತ್ಸವಗಳಲ್ಲಿ, ನಾಟಕ ಮೊದಲಾದವುಗಳಲ್ಲಿ ಪ್ರತ್ಯಕ್ಷ ಭಾಗವಹಿಸುವ ಎರಡನೆಯ ವರ್ಗ.

೩) ಮೂರನೆಯದಾಗಿ ವಿದ್ಯಾಲಯಗಳಲ್ಲಿ ನಡೆಯುವ ಕ್ರೀಡಾ-ವಿಭಾಗದಲ್ಲಿ ಹೆಚ್ಚು ಆಸಕ್ತಿಹೊಂದಿ ಪುಸ್ತಕ ಜ್ಞಾನವನ್ನೇ ಮರೆಯುವ ಮೂರನೆಯ ವರ್ಗ.

ಹೀಗೆ ಮೂರು ವರ್ಗಗಳಿದ್ದು ವಿವಿಧ ವರ್ಗದ ವಿದ್ಯಾರ್ಥಿಗಳ ಜಾತಕದ ಯೋಗಗಳೂ ಭಿನ್ನ ಭಿನ್ನವಿರುತ್ತವೆ. ಇವುಗಳನ್ನು ಈ ಕೆಳಗಿನಂತೆ ಕೊಡಲಾಗಿದೆ.

ವಿದ್ಯಾರ್ಥಿದೆಶೆಯಲ್ಲಿಯೇ ನಾಯಕರಾಗಬಲ್ಲವರಾರು ?

ಯಾವನೊಬ್ಬ ವಿದ್ಯಾರ್ಥಿ ಯಾವುದೊಂದು ಅಧಿಕಾರಸ್ಥಾನಕ್ಕೆ ಚುನಾಯಿತನಾಗುವನೆಂದರೆ ತನ್ನ ಸರಿಸಮಾನರಾದ ಹಲವು ಹುರಿಯಾಳುಗಳೊಂದಿಗೆ ಸ್ಪರ್ಧಿಸಿ ಬಹುಮತ ಪಡೆದು ಗೆಲ್ಲುವುದೇ ಆಗುತ್ತದೆ. ವಿದಾರ್ಥಿಗಳ ಬಹುಮತ ಬೆಂಬಲ ಪಡೆವ ವಿದ್ಯಾರ್ಥಿಯು ಆಯ್ಕೆಯಾಗುವನು ಎಂಬುದು ಸಾಮಾನ್ಯರ ತಿಳುವಳಿಕೆ. ಇದರಂತೆಯೇ ಅವನ ಶಿಕ್ಷಣಾರ್ಹತೆ, ಸೇವಾಬುದ್ಧಿ, ಅಸ್ಖಲಿತ ಮಾತುಗಾರಿಕೆ ಮೊದಲಾದ ಮುಂದಾಳುತನದ ಗುಣಗಳು ಅವನಲ್ಲಿರಬೇಕಾದ ಲಕ್ಷಣಗಳಿರಬೇಕೆಂದು ಹೇಳಲಾಗುತ್ತದೆ. ಆದರೆ ಇವೆಲ್ಲವುಗಳಿಗಿಂತ ಹೆಚ್ಚಾಗಿ ಯಾವನೊಬ್ಬ ಹುರಿಯಾಳು ಆಯ್ಕೆಯಾಗಲು ಆಯಾ ವಿದ್ಯಾಲಯಗಳ ಮುಖ್ಯಾಧ್ಯಾಪಕ, ಪ್ರಿನ್ಸಿಪಾಲ್ ಅಥವಾ ಪ್ರಭಾವೀ ಅಧ್ಯಾಪಕರ ಬೆಂಬಲ, ಧನಬಲ ಹಾಗೂ ಇತರ ಸಾಮಾಜಿಕ ವರ್ಚಸ್ಸುಗಳೇ ಅವನ ಚುನಾವಣಾ ವಿಜಯಕ್ಕೆ ಮುಖ್ಯ ಕಾರಣಗಳೆಂದು ಎಲ್ಲರೂ ಬಲ್ಲರು. ಆದರೆ

ಚುನಾವಣೆಯ ಸೋಲು–ಗೆಲುವುಗಳನ್ನು ಇಷ್ಟೊಂದು ಸುಲಭವಾಗಿ ವಿಶ್ಲೇಷಿಸಲು ಸಾಧ್ಯವಿಲ್ಲ. ಮೇಲೆ ಹೇಳಿದ ಎಲ್ಲ ಗುಣ–ಲಕ್ಷಣಗಳಿದ್ದರೂ ಯಾವನೊಬ್ಬ ವಿದ್ಯಾರ್ಥಿಯು ಚುನಾವಣೆಯಲ್ಲಿ ಸೋಲುವ ಸಂಭವವಿದ್ದೇ ಇದೆ ಎಂಬುದನ್ನು ಯಾರೂ ಅಲ್ಲಗೆಳೆಯಲಿಕ್ಕಾಗದು.

ವಿದ್ಯಾರ್ಥಿಯು ಎಷ್ಟೇ ಪ್ರಯತ್ನವಾದಿಯಾಗಿದ್ದರೂ ಅವನ ಪ್ರಯತ್ನದ ಪರಿಣಾಮವನ್ನು ನಿರ್ಧರಿಸುವುದು ಯಾವುದೋ ಒಂದು ಕಾಣದ ಕೈ ಎಂಬುದು ತನ್ನಿಂದ ತಾನೇ ನಿದರ್ಶನಕ್ಕೆ ಬರುವುದು. ಅದಕ್ಕೇ ದೈವವೆಂದು ಕರೆಯಲಾಗುತ್ತದೆ. ದೈವದ ಎದುರು ಮಾನವನ ಆಟ ಸಾಗದೆಂಬುದು ನಿಜವಾದರೂ ಅದರ ಗತಿಯನ್ನು, ಒಲವನ್ನು ಸಾಕಷ್ಟು ನಿಶ್ಚಿತತೆಯಿಂದ ಅರಿತುಕೊಳ್ಳಲು ಜ್ಯೋತಿಷ್ಯಶಾಸ್ತ್ರದ ಮೂಲಕ ಸಾಧ್ಯವಾಗಬಹುದಾಗಿದೆ. ಯಾಕೆಂದರೆ ದೈವ ಪ್ರತಿಯೊಬ್ಬನ ವಿಷಯದಲ್ಲಿಯೂ ತಾನು ನಡೆಯುತ್ತಿದೆಯೆಂಬುದನ್ನು ಗ್ರಹಗತಿಯ ಮೂಲಕ ಸ್ಥೂಲವಾಗಿ, ಸೂಕ್ಷ್ಮವಾಗಿ ತಿಳಿಸುತ್ತಲೇ ಇರುತ್ತದೆ. ಅಂತೆಯೇ ವಿದ್ಯಾರ್ಥಿಗಳ ಭವಿತವ್ಯವನ್ನು ಅವನ ಜಾತಕದಲ್ಲಿಯ ಗ್ರಹಗಳ ಬಲಾಬಲದ ಲೆಕ್ಕಾಚಾರದಿಂದ ಹೇಳಲಾಗುತ್ತದೆ. ಈ ಕಾರಣದಿಂದ ವಿದ್ಯಾಲಯಗಳ ಚುನಾವಣೆಯಲ್ಲಿ ಭಾಗವಹಿಸಬೇಕೋ, ಬೇಡವೋ, ಚುನಾವಣೆಯಲ್ಲಿ ಯಶ ಲಭಿಸುವುದೋ ಹೇಗೆ, ಚುನಾಯಿತನಾದ ಬಳಿಕ ಚುನಾವಣಾವಧಿಯಲ್ಲಿ ತೊಂದರೆಗಳಿವೆಯೋ— ಈ ಮೊದಲಾದ ವಿದ್ಯಾರ್ಥಿಗಳ ಸಮಸ್ಯೆಗೆ ಜ್ಯೋತಿಷ್ಯ ದೃಷ್ಟಿಯಲ್ಲಿ ಈ ಕೆಳಗಿನಂತೆ ಉತ್ತರ ಕೊಡಲಾಗುವುದು.

ಚುನಾವಣೆಯಲ್ಲಿ ಯಾವನೊಬ್ಬ ವಿದ್ಯಾರ್ಥಿಗೆ ಜಯ ಸಿಗಬಹುದೋ ಹೇಗೆಂಬುದನ್ನು ನಿರ್ಧರಿಸುವಾಗ ನಾವು ಮುಖ್ಯವಾಗಿ ಮೂರು ಸಂಗತಿಗಳನ್ನು ಪರಿಶೀಲಿಸಬೇಕು. ಮೊದಲನೆಯದಾಗಿ ವಿದ್ಯಾರ್ಥಿಯ ಮೂಲ ಜಾತಕದಲ್ಲಿ ಮುಂದಾಳುತನದ ಯೋಗ ಹೇಗಿದೆ, ಎರಡನೆಯದಾಗಿ ಚುನಾವಣೆ ನಡೆಯುವ ಸಮಯದಲ್ಲಿಯ ಗ್ರಹಗತಿ ಹೇಗಿದೆಯೆಂಬುದನ್ನು ಮೊದಲು ಪರಿಶೀಲಿಸಬೇಕು. ಏಕೆಂದರೆ ಅನೇಕ ಸಲ ಅನೇಕ ವಿದ್ಯಾರ್ಥಿಗಳು ತಮ್ಮ ಪ್ರತಿಸ್ಪರ್ಧಿ ವಿದ್ಯಾರ್ಥಿ ಗುಂಪಿನ ಮುಖಂಡರೊಂದಿಗೆ ಶಾಶ್ವತ

ಹಗೆತನವನ್ನು ಕಟ್ಟಿಕೊಂಡು ಒಬ್ಬರಿಗೊಬ್ಬರು ಹೇಗೆ ಹಾನಿ ಮಾಡಬೇಕೆಂಬ ವಿಚಾರದಲ್ಲಿಯೇ ಕಾಲ ಕಳೆಯುತ್ತಾರೆ. ಅಷ್ಟೇ ಏಕೆ, ಇವರ ಹಗೆತನವು ಪ್ರತಿಸ್ಪರ್ಧಿಯ ಪಾಲಕರಲ್ಲಿಯೂ ಬಂದ ಉದಾಹರಣೆಗಳಿಗೇನೂ ಕಡಿಮೆಯಿಲ್ಲ. ಈ ವಿದ್ಯಾರ್ಥಿ ಚುನಾವಣಾ ಸಂಬಂಧದಿಂದಾದ ತಂಟೆ, ಜಗಳ ಬಿಡಿಸಲು ಪೋಲೀಸರ ಹಾಗೂ ಸ್ಥಳೀಯ ಶಾಸಕರ, ಅಧಿಕಾರಿಗಳ ನೆರವನ್ನೂ ಪಡೆದ ಅನೇಕ ಉದಾಹರಣೆಗಳಿವೆ. ಮೂರನೆಯದಾಗಿ ಚುನಾವಣೆಯ ನಂತರ ಚುನಾಯಿತ ಅವಧಿಯ ಕಾಲ ಹೇಗಿದೆಯೆಂಬುದನ್ನೂ ಪರಿಶೀಲಿಸುವುದು ಮಹತ್ತ್ವದ ಸಂಗತಿಯಾಗಿದೆ. ಏಕೆಂದರೆ ವಿದ್ಯಾಲಯಗಳಲ್ಲಿ ನಡೆಯುತ್ತಿರುವ ದೈನಂದಿನ, ಸಾಮಾಜಿಕ, ಶೈಕ್ಷಣಿಕ ಚಟುವಟಿಕೆಗಳ ರೂಪರೇಷೆಗಳನ್ನು ನಿರ್ಧರಿಸುವಾಗ ಅನೇಕ ಸಲ ಅಧ್ಯಾಪಕರ, ಮುಖ್ಯಾಧ್ಯಾಪಕರ, ಪ್ರಾಚಾರ್ಯರ ವಿರಸವನ್ನೂ ಕಟ್ಟಿಕೊಳ್ಳಬೇಕಾಗುತ್ತದೆ. ಈ ವಿರಸದ ಪರಿಣಾಮ ವಿದ್ಯಾರ್ಥಿಗಳ ಪರೀಕ್ಷೆಯ ಮೇಲೆಯೂ ಆಗುತ್ತದೆ, ಹಾಗೂ ಶಿಕ್ಷಣದ ಮೇಲೂ ಆಗುತ್ತದೆ.

ವಿದ್ಯಾಲಯಗಳಲ್ಲಿ ನಡೆಯುವ ವಿದ್ಯಾರ್ಥಿ ಸಂಘದ ಮುಖ್ಯ ಕಾರ್ಯದರ್ಶಿ ಹಾಗೂ ಕ್ರೀಡಾ, ವಾಚನಾಲಯ, ಕಾಲೇಜ್ ಮಿಸಿಲನಿ, ಚರ್ಚಾಕೂಟ, ನಾಟಕ ಮೊದಲಾದ ವಿಭಾಗಗಳ ಕಾರ್ಯದರ್ಶಿ ಮುಂತಾದ ಹುದ್ದೆಗಳನ್ನು ಪಡೆಯಲು ಅರ್ಥಾತ್ ಆಯ್ಕೆಯಾಗಲು ಜಾತಕ ಹೇಗಿರಬೇಕೆಂಬುದನ್ನು ಪರಿಶೀಲಿಸುವಾ—

ವಿದ್ಯಾರ್ಥಿ ಸಂಘದ ಯಾವುದೇ ವಿಭಾಗದ ಮುಂದಾಳ್ತನದ ಹುದ್ದೆಗೆ ಸ್ಪರ್ಧಿಸುವ ವಿದ್ಯಾರ್ಥಿಗಳ ಜಾತಕದಲ್ಲಿ ರವಿಯು ಬಲಾಢ್ಯನಿರಬೇಕು. ರವಿಯ ತರುವಾಯ ಗುರು, ಶುಕ್ರ, ಚಂದ್ರ ಈ ಗ್ರಹಗಳೂ ಸಹ ಜಾತಕದಲ್ಲಿ ಬಲಾಢ್ಯರಿರಬೇಕು.

ವಿದ್ಯಾರ್ಥಿಗಳು ಚನಾವಣೆಯಲ್ಲಿ ಭಾಗವಹಿಸಿ ಮುಂದಾಳುತ್ವವನ್ನು ಹೊಂದಲು, ಗೌರವಾನ್ವಿತ ಸ್ಥಾನಾದಿಗಳನ್ನು ಹೊಂದಲು ಶಿಕ್ಷಣ, ಧನಬಲ, ವರ್ಚಸ್ಸು, ಜಾತಿ ಮೊದಲಾದವುಗಳು ಕಾರಣವಾಗುತ್ತವೆಂದು ಹಲವರು ಅಭಿಪ್ರಾಯಪಡುತ್ತಾರೆ. ಆದರೆ ಜ್ಯೋತಿಷ್ಯದಲ್ಲಿ ಇಂಥ ಲೌಕಿಕ ಅಂಶಗಳು

ಗೌಣವಾಗುತ್ತವೆ. ಅದು ಅವಲಂಬಿಸುವುದು ಅವರವರ ಭಾಗ್ಯವನ್ನೇ. ಅಂತೆಯೇ ಆಯಾ ವಿದ್ಯಾರ್ಥಿಯ ಜಾತಕದಲ್ಲಿಯ ಭಾಗ್ಯಸ್ಥಾನವನ್ನು ಪರಿಶೀಲಿಸಬೇಕು. ಆದುದರಿಂದ ವಿದ್ಯಾರ್ಥಿಯ ಜಾತಕದಲ್ಲಿ ಭಾಗ್ಯಸ್ಥಾನ ಹಾಗೂ ಭಾಗ್ಯೇಶ ಬಲಾಢ್ಯರಿರುವ ಎಲ್ಲರೂ ಮುಂದಾಳುತನವನ್ನು ಪಡೆಯುವರು.

ಈ ಕೆಳಗೆ ಹೇಳಿದ ಯೋಗಗಳು ಯಾವನೊಬ್ಬ ವಿದ್ಯಾರ್ಥಿಯ ಜಾತಕದಲ್ಲಿದ್ದರೆ ಅಂಥ ವಿದ್ಯಾರ್ಥಿಯು ಚುನಾವಣೆಯಲ್ಲಿ ವಿಜಯಿಯಾಗುತ್ತಾನೆಂದು ಹೇಳಬಹುದು.

೧) ಮೇಷ, ಸಿಂಹ, ಧನು ಈ ಲಗ್ನಗಳಿದ್ದು ರವಿ, ಗುರುಗಳು ಲಗ್ನ, ಭಾಗ್ಯ, ಪಂಚಮ ಈ ಯಾವುದೊಂದು ಸ್ಥಾನದಲ್ಲಿದ್ದರೆ ಇಂಥ ವಿದ್ಯಾರ್ಥಿಗಳು ಚುನಾವಣೆಯಲ್ಲಿ ಜಯಹೊಂದುವರು.

೨) ಧನು ಲಗ್ನವಿದ್ದು ಭಾಗ್ಯದಲ್ಲಿ ರವಿ, ಲಾಭದಲ್ಲಿ ಶುಕ್ರ, ಲಗ್ನದಲ್ಲಿ ಗುರು ಇದ್ದರೆ ಇಂಥ ವಿದ್ಯಾರ್ಥಿಗಳು ಚುನಾವಣೆಯಲ್ಲಿ ವಿಜಯಿಯಾಗುವರು.

೩) ವೃಶ್ಚಿಕ ಲಗ್ನದ ದಶಮದಲ್ಲಿ ರವಿ, ಭಾಗ್ಯದಲ್ಲಿ ಚಂದ್ರನಿದ್ದರೆ ಇಂಥ ವಿದ್ಯಾರ್ಥಿಗಳು ಚುನಾವಣೆಯಲ್ಲಿ ಯಶಪಡೆಯುವರು.

೪) ವೃಶ್ಚಿಕ ಲಗ್ನವಿದ್ದು ಭಾಗ್ಯದಲ್ಲಿ ಗುರು-ಚಂದ್ರರಿದ್ದು ದಶಮದಲ್ಲಿ ರವಿಯಿದ್ದರೆ ಇಂಥ ವಿದ್ಯಾರ್ಥಿಗಳು ಚುನಾವಣೆಯಲ್ಲಿ ಜಯ ಸಂಪಾದಿಸುವರು.

೫) ಕರ್ಕಲಗ್ನವಿದ್ದು ಲಗ್ನ, ಚತುರ್ಥ, ಭಾಗ್ಯ, ಲಾಭ ಈ ಯಾವುದೊಂದು ಸ್ಥಾನದಲ್ಲಿ ಚಂದ್ರ, ಶುಕ್ರರ ಯುತಿಯಿದ್ದರೆ ಇಂಥ ವಿದ್ಯಾರ್ಥಿಗಳು ಚುನಾವಣೆಗಳಲ್ಲಿ ಜಯ ಗಳಿಸುವರು.

೬) ಯಾವುದೇ ವಿದ್ಯಾರ್ಥಿಯ ಜಾತಕದಲ್ಲಿ ರವಿ ಹಾಗೂ ಭಾಗ್ಯೇಶ ಬಲಾಢ್ಯರಿದ್ದರೆ ಚುನಾವಣೆಯಲ್ಲಿ ಜಯ ನಿಶ್ಚಿತ.

೭) ಮಿಥುನ ಲಗ್ನವಿದ್ದು ಲಗ್ನ, ಚತುರ್ಥ, ಭಾಗ್ಯ, ದಶಮ ಈ

ಯಾವುದೊಂದು ಸ್ಥಳದಲ್ಲಿ ಗುರು, ಶುಕ್ರ ಯೋಗವಿದ್ದರೆ ಚುನಾವಣೆಯಲ್ಲಿ ವಿಜಯ ಖಂಡಿತ.

೮) ವೃಷಭ ಲಗ್ನವಿದ್ದು ರವಿ, ಬುಧರು ಬಲಾಢ್ಯರಿದ್ದ ವಿದ್ಯಾರ್ಥಿಗೆ ಚುನಾವಣೆಯಲ್ಲಿ ವಿಜಯಲಕ್ಷ್ಮಿ ಸದಾ ಒಲಿಯುತ್ತಾಳೆ.

೯) ಸಿಂಹ ಲಗ್ನವಿದ್ದು ರವಿ, ಮಂಗಳರು ಬಲಾಢ್ಯರಿದ್ದ ವಿದ್ಯಾರ್ಥಿಯ ಚುನಾವಣಾ ಯಶ ಖಂಡಿತ.

೧೦) ತುಲಾ ಲಗ್ನವಿದ್ದು ಲಗ್ನ, ಚತುರ್ಥ, ಪಂಚಮ, ಭಾಗ್ಯ ಈ ಯಾವುದೊಂದು ಸ್ಥಾನದಲ್ಲಿ ಶುಕ್ರ-ಚಂದ್ರರಿದ್ದರೆ ಚುನಾವಣೆಯಲ್ಲಿ ಯಶ ಖಂಡಿತ.

೧೧) ಷಷ್ಠದಲ್ಲಿ ದುರ್ಬಲ ಚಂದ್ರನಿದ್ದ ವಿದ್ಯಾರ್ಥಿಗೆ ಪ್ರತಿಸ್ಪರ್ಧಿಗಳು ಬಹಳ.

೧೨) ಯಾವ ವಿದ್ಯಾರ್ಥಿಗಳು ಯಾವುದೇ ವರುಷ ಏಪ್ರಿಲ್ ೧೨ ರಿಂದ ಮೇ ೧೫ರ ವರೆಗೆ ಮತ್ತು ಆಗಸ್ಟ್, ೧೫ರಿಂದ ಸಪ್ಟಂಬರ ೧೬ರ ವರೆಗೆ ಹಾಗೂ ಡಿಶೆಂಬರ ೧೬ರಿಂದ ಜನೆವರಿ ೧೪ರ ವರೆಗೆ ಜನಿಸಿದ್ದಾರೋ ಅಂಥ ವಿದ್ಯಾರ್ಥಿಗಳು ಯಾವಾಗಲೂ ವಿದ್ಯಾರ್ಥಿ ಮುಂದಾಳುಗಳಾಗುತ್ತಾರೆ,

೧೩) ಅಕ್ಟೋಬರ ೧೮ ರಿಂದ ನವೆಂಬರ ೧೭ರ ವರೆಗೆ ಜನಿಸಿದ ಯಾವುದೇ ವಿದ್ಯಾರ್ಥಿಗೆ ಚುನಾವಣೆಯ ತೊಡಕುಗಳು ಬಹಳ.

೧೪) ವಾಚನಾಲಯ (Reading Room) ವಿಭಾಗದ ಮುಖಂಡತ್ವಕ್ಕೆ ಸ್ಪರ್ಧಿಸುವ ವಿದ್ಯಾರ್ಥಿಗಳ ಜಾತಕದಲ್ಲಿ ಬುಧನು ಬಲಾಢ್ಯನಿರಬೇಕು.

೧೫) ಕ್ರೀಡಾ ವಿಭಾಗದ ಮುಂದಾಳುತನಕ್ಕೆ ಸ್ಪರ್ಧಿಸುವ ವಿದ್ಯಾರ್ಥಿಗಳ ಜಾತಕದಲ್ಲಿ ರವಿ-ಮಂಗಳರು ಬಲಾಢ್ಯರಿರಬೇಕು.

೧೬) ಕಾಲೇಜಿನ ಮಿಸಲನಿ ವಿಭಾಗದ ಮುಂದಾಳ್ತನಕ್ಕೆ ಸ್ಪರ್ಧಿಸುವ ವಿದ್ಯಾರ್ಥಿಗಳ ಜಾತಕದಲ್ಲಿ ಬುಧ, ಶುಕ್ರ, ಗುರು ಗ್ರಹಗಳು ಬಲಾಢ್ಯರಿರಬೇಕು.

೧೭) ಕಾಲೇಜಿನ ನಾಟಕ ಮೊದಲಾದ ಸಾಂಸ್ಕೃತಿಕ ವಿಭಾಗದ

ಮುಂದಾಳ್ತನಕ್ಕೆ ಸ್ಪರ್ಧಿಸುವ ವಿದ್ಯಾರ್ಥಿಗಳ ಜಾತಕದಲ್ಲಿ ಶುಕ್ರ, ಚಂದ್ರರು ಬಲಾಢ್ಯರಿರಬೇಕು.

(೧೮) ಕಾಲೇಜಿನ ಜನರಲ್ ಸೆಕ್ರೆಟರಿ ಹುದ್ದೆಗೆ ಸ್ಪರ್ಧಿಸುವ ವಿದ್ಯಾರ್ಥಿಯ ಜಾತಕದಲ್ಲಿ ರವಿ, ಮಂಗಳ, ಗುರು, ಭಾಗ್ಯಸ್ಥಾನ, ಭಾಗ್ಯೇಶ ಈ ಐದು ಬಲಾಢ್ಯವಿರಬೇಕು.

ಹೀಗೆ ಮೇಲೆ ವಿವರಿಸಿದ ಅಂಶಗಳು ಯಾವ ವಿದ್ಯಾರ್ಥಿಯ ಜಾತಕದಲ್ಲಿ ಪೋಷಕವಾಗಿರುವವೋ ಅಂಥ ವಿದ್ಯಾರ್ಥಿಗಳು ವಿದ್ಯಾರ್ಥಿ ಸಂಘದ ಮುಂದಾಳುಗಳಾಗುವರು.

ಎರಡನೆಯದಾಗಿ ಚುನಾವಣೆ ನಡೆಯುವ ಸಮಯದಲ್ಲಿ ಗೋಚರೀ ಗ್ರಹಗಳು ಅನುಕೂಲವಿರಬೇಕು. ಅದರಲ್ಲಿಯೂ ರವಿ–ಚಂದ್ರರು ಗೋಚರಿಯಿಂದ ಪೋಷಕರಿದ್ದ ವಿದ್ಯಾರ್ಥಿಗಳು ಚುನಾವಣೆಯಲ್ಲಿ ಯಶ ಪಡೆಯುವರು.

ಮೂರನೆಯದಾಗಿ ಚುನಾವಣೆಯ ನಂತರ ಚುನಾಯಿತ ಅವಧಿಯ ಕಾಲ ಹೇಗಿದೆಯೆಂಬುದನ್ನು ಪರಿಶೀಲಿಸುವುದು ಮಹತ್ವದ ಸಂಗತಿಯಾಗಿದೆ. ಏಕೆಂದರೆ ಚುನಾಯಿತ ಅವಧಿಯು ಅಶುಭವಿದ್ದರೆ ವಿದ್ಯಾಲಯದಲ್ಲಿ ನಡೆಯುವ ದೈನಂದಿನ ಕಾರ್ಯಕ್ರಮಗಳ ರೂಪರೇಷೆಗಳನ್ನು ನಿರ್ಧರಿಸುವಾಗ ಅನೇಕ ಸಲ ಅಧ್ಯಾಪಕರ ಹಾಗೂ ಸಂಗಡಿಗರ ಜೊತೆಗೆ ವಿರಸ ಕಟ್ಟಿಕೊಂಡು ಪರೀಕ್ಷೆಗಳನ್ನು ಕಳೆದುಕೊಂಡ ಹಾಗೂ ಶಿಕ್ಷಣವನ್ನು ನಿಲ್ಲಿಸಿದ ಉದಾಹರಣೆಗಳೂ ಸಾಕಷ್ಟಿವೆ. ಆದುದರಿಂದ ಚುನಾಯಿತ ಅವಧಿಯಲ್ಲಿ ಸಾಡೇಸಾತಿ, ಪಂಚಮ, ಅಷ್ಟಮ, ಶನಿ ಹಾಗೂ ಗೋಚರಿಯ ಅಶುಭ ಗುರು ಇರಕೂಡದು.

ಎರಡನೆಯದಾಗಿ ಶಾಲೆ–ಕಾಲೇಜುಗಳಲ್ಲಿ ನಡೆಯುವ ವಾರ್ಷಿಕೋತ್ಸವ, ಸ್ನೇಹ ಸಮ್ಮೇಲನಗಳಲ್ಲಿ ನಾಟಕ, ಸಂಘಟನೆ ಮೊದಲಾದ ಸಾಂಸ್ಕೃತಿಕ, ಮನರಂಜನೆಯ ಚಟುವಟಿಕೆಗಳಲ್ಲಿ ಭಾಗವಹಿಸಿ ಶಿಕ್ಷಣಾವಧಿಯ ಅಮೂಲ್ಯ ವೇಳೆಯನ್ನು ಹಾಳುಮಾಡಿಕೊಳ್ಳುವರು. ಇದಲ್ಲದೆ ಈ ಸ್ನೇಹಸಮ್ಮೇಲನ, ವಾರ್ಷಿಕೋತ್ಸವದಲ್ಲಿ ಭಾಗವಹಿಸುವ ಅನೇಕ ವಿದ್ಯಾರ್ಥಿಗಳಲ್ಲಿ ಪ್ರೇಮ–ಪ್ರಣಯಗಳ ಅಂಕುರಗಳು ಒಡಮೂಡಿ ಪ್ರೇಮ

ಪಾಶವಲ್ಲಿ ಬಿದ್ದು ಪರೀಕ್ಷೆಗಳನ್ನು ಕಳೆದುಕೊಂಡ ಉದಾಹರಣೆಗಳೂ ಬಹಳ ಷ್ಟಿವೆ. ಇಂಥ ವಿದ್ಯಾರ್ಥಿಗಳ ಜಾತಕದಲ್ಲಿ ಈ ಕೆಳಗಿನಂತೆ ಯೋಗಗಳಿರುತ್ತವೆ.

೧) ಇಂಥ ವಿದ್ಯಾರ್ಥಿಗಳ ಜಾತಕದಲ್ಲಿ ಶುಕ್ರನು ವೃಷಭ, ಮಿಥುನ, ಕನ್ಯಾ, ತುಲಾ, ಕುಂಭ, ಮೀನ ಈ ರಾಶಿಯವನಾಗಿ ಲಗ್ನ, ದ್ವಿತೀಯ, ಪಂಚಮ, ಸಪ್ತಮ, ಭಾಗ್ಯ, ಏಕಾದಶ ಈ ಯಾವದೊಂದು ಸ್ಥಾನದಲ್ಲಿ ವಿರಾಜಿಸುತ್ತಾನೆ.

೨) ಇಂಥ ವಿದ್ಯಾರ್ಥಿಗಳ ಜಾತಕದಲ್ಲಿ ಚಂದ್ರನು ಹೆಚ್ಚಾಗಿ ವೃಷಭ, ಮಿಥುನ, ಕರ್ಕ, ಕನ್ಯಾ, ತುಲಾ, ವೃಶ್ಚಿಕ, ಕುಂಭ, ಮೀನ ಈ ರಾಶಿ ಯವನಾಗಿರುತ್ತಾನೆ.

೩) ಇಂಥ ವಿದ್ಯಾರ್ಥಿಗಳ ಜಾತಕದಲ್ಲಿ ಬುಧನು ರಾಶಿಬಲದವ ನಿರುತ್ತಾನೆ.

ಹೀಗೆ ಮೇಲ್ಕಂಡ ಮೂರು ಯೋಗಗಳಲ್ಲಿ ಜನಿಸಿದ ವಿದ್ಯಾರ್ಥಿಗಳು ನಾಟಕ ಮೊದಲಾದ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಪ್ರತ್ಯಕ್ಷ ಭಾಗ ವಹಿಸು ವುದರ ಮೂಲಕ ಕೆಲವೊಮ್ಮೆ ಪರೀಕ್ಷೆಗಳನ್ನು ಕಳೆದುಕೊಳ್ಳುವರು.

ಮೂರನೆಯದಾಗಿ ವಿದ್ಯಾಲಯಗಳಲ್ಲಿ ನಡೆಯುವ ಕ್ರೀಡಾ ವಿಭಾಗದಲ್ಲಿ ಹೆಚ್ಚು ಆಸಕ್ತಿಹೊಂದಿದವರಾದ ಈ ವಿದ್ಯಾರ್ಥಿಗಳು ಪುಸ್ತಕ ಜ್ಞಾನವನ್ನೇ ಮರೆತು ತಮ್ಮ ಹೆಚ್ಚಿನ ವೇಳೆಯನ್ನು ಆಟ-ಪಾಟಗಳಲ್ಲಿ ಭಾಗವಹಿಸುವುದರ ಮೂಲಕ ಪರೀಕ್ಷೆಗಳನ್ನು ಕಳೆದುಕೊಳ್ಳುತ್ತಾರೆ. ಇಂಥ ವಿದ್ಯಾರ್ಥಿಗಳ ಜಾತಕದಲ್ಲಿ ಈ ಕೆಳಗಿನಂತೆ ಯೋಗಗಳಿರುತ್ತವೆ.

೧) ಇಂಥ ವಿದ್ಯಾರ್ಥಿಗಳ ಜಾತಕದಲ್ಲಿ ರವಿ-ಮಂಗಳರ ರಾಶಿ ಹಾಗೂ ಸ್ಥಾನಬಲದವರಿರುತ್ತಾರೆ.

೨) ಇವರು ಹೆಚ್ಚಾಗಿ ಮೇಷ, ವೃಷಭ, ತುಲಾ, ಸಿಂಹ, ವೃಶ್ಚಿಕ, ಧನು, ಮಕರ, ಕುಂಭ ಈ ರಾಶಿಯವರಿರುತ್ತಾರೆ.

೩) ಇವರ ಜಾತಕದಲ್ಲಿ ಅನೇಕ ಗ್ರಹಗಳು ಪುರುಷರಾಶಿಯಲ್ಲಿರು ತ್ತವೆ. ಅದರಲ್ಲಿಯೂ ಲಗ್ನೇಶ ಹಾಗೂ ಚಂದ್ರರು ಪುರುಷರಾಶಿಯಲ್ಲಿ ರುತ್ತಾರೆ.

೪) ಇವರ ಜಾತಕದಲ್ಲಿ ಬುಧ-ಗುರುಗಳಿಗಿಂತ ರವಿ-ಮಂಗಳರು ಯೋಗಕಾರಕರೂ, ಬಲಾಢ್ಯರೂ ಇರುತ್ತಾರೆ.

ಹೀಗೆ ಮೇಲ್ಕಾಣಿಸಿದ ಮೂರು ಪ್ರಕಾರದ ಪಠ್ಯೇತರ ಚಟುವಟಿಕೆಗಳಲ್ಲಿ ಭಾಗವಹಿಸಿ ಪರೀಕ್ಷೆಗಳನ್ನು ಕಳೆದುಕೊಳ್ಳುವರು.

### ಆ. ಶಾರೀರಿಕ ಪೀಡೆ

ವಿದ್ಯಾರ್ಜನೆಯ ಅವಧಿಯಲ್ಲಿ ಅನಾರೋಗ್ಯದಿಂದ ಅನೇಕ ವಿದ್ಯಾರ್ಥಿಗಳು ಅನುತ್ತೀರ್ಣರಾಗುವರು. ಅಷ್ಟೇ ಏಕೆ, ಶಾರೀರಿಕ ಪೀಡೆಯಿಂದ ಪರೀಕ್ಷೆಗೆ ಸಹ ಕೂಡ್ರದೆ ಶಿಕ್ಷಣವನ್ನು ಅರ್ಧಕ್ಕೇ ನಿಲ್ಲಿಸಿದ ಅನೇಕ ಬುದ್ಧಿವಂತ ವಿದ್ಯಾರ್ಥಿಗಳ ಜಾತಕ ನೋಡಿದ ಅನುಭವವಿದೆ. ಕೆಲವು ವಿದ್ಯಾರ್ಥಿಗಳು ವರ್ಷವಿಡೀ ರೋಗದಿಂದ ಬಳಲುತ್ತಿದ್ದರೆ ಮತ್ತೆ ಕೆಲವರು ಪರೀಕ್ಷಾ ವೇಳೆಯಲ್ಲಿಯೇ ಬೇನೆಬಿದ್ದು ಪರೀಕ್ಷೆಯನ್ನು ಕಳೆದುಕೊಳ್ಳುತ್ತಾರೆ. ಆದುದರಿಂದ ಇಂಥ ವಿದ್ಯಾರ್ಥಿಗಳ ಜಾತಕದಲ್ಲಿ ಎಂಥ ಕುಯೋಗಗಳಿರುತ್ತವೆಂಬುದನ್ನು ಪರಿಶೀಲಿಸುವಾ.

ಸಾಮಾನ್ಯವಾಗಿ ರೋಗಗಳನ್ನು ಎರಡು ವಿಧವಾಗಿ ವಿಂಗಡಿಸಬಹುದು: ೧) ಶಾರೀರಿಕ ರೋಗದಿಂದ ಬಳಲುವ ಒಂದು ವರ್ಗ; ೨) ಮಾನಸಿಕ ರೋಗದಿಂದ ಬಳಲುವ ಇನ್ನೊಂದು ವರ್ಗ.

ಶಾರೀರಿಕ ಪೀಡೆಯಿಂದ ಬಳಲುವ ವಿದ್ಯಾರ್ಥಿಗಳ ಜಾತಕದಲ್ಲಿ ಮೂರು ಸಂಗತಿಗಳು ದೂಷಿತವಿರುತ್ತವೆ. ಮೊದಲನೆಯದಾಗಿ ಲಗ್ನ (ತನುಸ್ಥಾನ), ಲಗ್ನೇಶ; ಹಾಗೂ ರವಿ; ಎರಡನೆಯದಾಗಿ ಷಷ್ಠಸ್ಥಾನ, ಷಷ್ಠೇಶ. ಮೂರನೆಯದಾಗಿ ಅಷ್ಟಮಸ್ಥಾನ, ಅಷ್ಟಮೇಶ ಈ ಮೂರು ಸಂಗತಿಗಳು ದೂಷಿತವಿರುತ್ತವೆ.

ಮಾನಸಿಕ ರೋಗದಿಂದ ಶಿಕ್ಷಣದಲ್ಲಿ ಹಾನಿಗೊಳ್ಳುವ ವಿದ್ಯಾರ್ಥಿಗಳ ಜಾತಕದಲ್ಲಿ ಈ ಮೂರು ಸಂಗತಿಗಳು ದೂಷಿತವಿರುತ್ತವೆ. ಮೊದಲನೆಯದಾಗಿ ಲಗ್ನ, ಲಗ್ನೇಶ; ಎರಡನೆಯದಾಗಿ ಚತುರ್ಥಸ್ಥಾನ, ಚತುರ್ಥೇಶ ಹಾಗೂ ಮೂರನೆಯದಾಗಿ ಚಂದ್ರನು ದೂಷಿತರಿರುತ್ತಾನೆ. ಈ ಮೂರು

ಸಂಗತಿಗಳು ದೂಷಿತವಿರುವ ವಿದ್ಯಾರ್ಥಿಗಳು ಶಿಕ್ಷಣದಲ್ಲಿ ಹಾನಿಗೊಳಗಾಗುತ್ತಾರೆ.

ಅನಾರೋಗ್ಯದ ಕಾರಣ ಶಿಕ್ಷಣದಲ್ಲಿ ಹಾನಿಗೊಳ್ಳುವ ಕೆಲವು ಯೋಗಗಳು ಈ ಕೆಳಗಿನಂತಿವೆ :

೧) ಅನೇಕ ಗ್ರಹಗಳು (ಚತುರ್ಗ್ರಹಯೋಗ, ಪಂಚಮಗ್ರಹ ಯೋಗ) ಲಗ್ನ ಇಲ್ಲವೆ ಚತುರ್ಥ, ಷಷ್ಠ, ಅಷ್ಟಮದಲ್ಲಿದ್ದರೆ ಅದರಲ್ಲಿಯೂ ಪಾಪ ಗ್ರಹಗಳು ಹೆಚ್ಚಾಗಿದ್ದರೆ ಇಂಥ ವಿದ್ಯಾರ್ಥಿಗಳು ಅನಾರೋಗ್ಯದ ಕಾರಣದಿಂದ ಶಿಕ್ಷಣದಲ್ಲಿ ಹಾನಿಗೊಳ್ಳುತ್ತಾರೆ.

೨) ಲಗ್ನೇಶ, ಷಷ್ಠೇಶ, ರವಿ, ಚಂದ್ರ ಈ ನಾಲ್ಕು ಸಂಗತಿಗಳು ಯಾರ ಜಾತಕದಲ್ಲಿ ದೂಷಿತವಿರುವವೋ ಅಂಥ ವಿದ್ಯಾರ್ಥಿಗಳು ಅನಾರೋಗ್ಯದ ಕಾರಣದಿಂದ ಶಿಕ್ಷಣದಲ್ಲಿ ಹಾನಿಗೊಳಗಾಗುತ್ತಾರೆ.

೩) ಶನಿ-ರವಿ, ಶನಿ-ಮಂಗಳ, ಶನಿ-ಚಂದ್ರ ಈ ಗ್ರಹಗಳ ಯುತಿ ಯೋಗವಾಗಲಿ, ಪ್ರತಿಯೋಗವಾಗಲಿ ೧, ೪, ೬, ೮, ೧೨ ಈ ಸ್ಥಾನಗಳಲ್ಲಾದರೆ ಅನಾರೋಗ್ಯದಿಂದ ಶಿಕ್ಷಣಕ್ಕೆ ತೊಂದರೆಯಾಗುವುದು.

೪) ರಾಹು-ಚಂದ್ರ, ಶನಿ-ಚಂದ್ರ, ಬುಧ-ಮಂಗಳರ ಯುತಿಯೋಗವಾಗಲಿ, ಪ್ರತಿಯೋಗವಾಗಲಿ ೧, ೪, ೬, ೮, ೧೨ ಈ ಸ್ಥಾನಗಳಲ್ಲಾದರೆ ಮಾನಸಿಕ ತೊಂದರೆಯಿಂದ ಶಿಕ್ಷಣಕ್ಕೆ ತೊಂದರೆಯಾಗುವದು.

೫) ಚಂದ್ರನು ೧, ೬, ೮, ೧೨ ಈ ಸ್ಥಾನಗಳಲ್ಲಿದ್ದು ಶನಿಯಿಂದ ದೃಷ್ಟನಾಗಿದ್ದರೆ ಆರೋಗ್ಯಕ್ಕೆ ಅಹಿತಕರವು.

೬) ದುರ್ಬಲ ರವಿಯು ೧, ೬, ೮, ೧೨ ಈ ಸ್ಥಾನಗಳಲ್ಲಿದ್ದು ಶನಿಯಿಂದ ದೃಷ್ಟನಾಗಿದ್ದರೆ ಆರೋಗ್ಯಕ್ಕೆ ಹಾನಿಕರವು.

ಹೀಗೆ ಮೇಲ್ಕಂಡ ಆರು ಯೋಗಗಳಲ್ಲಿ ಜನಿಸಿದ ವಿದ್ಯಾರ್ಥಿಗೆ ಶಾರೀರಿಕ ಪೀಡೆಯಿಂದ ಶಿಕ್ಷಣಕ್ಕೆ ತೊಂದರೆಯುಂಟಾಗುತ್ತದೆ.

ವಿಶೇಷ ಸೂಚನೆ :— ಆರೋಗ್ಯ ಹಾಗೂ ರೋಗದ ವಿಷಯವಾಗಿ ನಮ್ಮ "ಆರೋಗ್ಯ ಜ್ಯೋತಿಷ್ಯ" ಗ್ರಂಥದಲ್ಲಿ ವಿಶದವಾಗಿ ವಿವರಿಸಲಾಗಿದೆ.

## ೬. ಡ್ರಾಪ್ ತೆಗೆದುಕೊಳ್ಳುವಿಕೆ

ಅನೇಕ ವಿದ್ಯಾರ್ಥಿಗಳು ತಾವು ನಿರೀಕ್ಷಿಸಿದಷ್ಟು ಅಭ್ಯಾಸವಾಗದೆ ಇದ್ದಾಗ ಪರೀಕ್ಷೆ ಕಟ್ಟುವದಿಲ್ಲ. ಕೆಲವು ವಿದ್ಯಾರ್ಥಿಗಳಂತೂ ತಾವು ನಿರೀಕ್ಷಿಸಿದಷ್ಟು ಅಭ್ಯಾಸ ಆಗದೇ ಇದ್ದಾಗ ಒಂದೆರಡು ಪೇಪರ್‌ಗಳಿಗೆ (ವಿಷಯಗಳಿಗೆ) ಕುಳಿತು ಉತ್ತಮ ಶ್ರೇಣಿ ದೊರೆಯಲಾರದೆಂಬ ಭಯದಿಂದ ಪರೀಕ್ಷೆಯನ್ನೇ ತ್ಯಜಿಸುವರು. ಇದಕ್ಕೆಯೇ 'ಡ್ರಾಪ್ ತೆಗೆದುಕೊಳ್ಳುವಿಕೆ' ಎಂದು ಅನ್ನುವರು. ಈ ಡ್ರಾಪ್ ತೆಗೆದುಕೊಳ್ಳುವ ಪರಿಪಾಠ ಹೆಚ್ಚಾಗಿ ಸ್ನಾತಕೋತ್ತರ ಪರೀಕ್ಷೆಗೆ ಕೂಡ್ರುವ ವಿದ್ಯಾರ್ಥಿಗಳಲ್ಲಿರುವದು ಕಂಡು ಬಂದಿದೆ. ಅದರಲ್ಲಿಯೂ ಪದವೀ ಪರೀಕ್ಷೆಯಲ್ಲಿ ಉತ್ತಮ ಶ್ರೇಣಿಯಲ್ಲಿ ತೇರ್ಗಡೆಯಾದಂಥ ಈ ವಿದ್ಯಾರ್ಥಿಗಳು ಸ್ನಾತಕೋತ್ತರ ಪರೀಕ್ಷೆಯಲ್ಲಿಯೂ ಉತ್ತಮ ಶ್ರೇಣಿಯಲ್ಲಿ ತೇರ್ಗಡೆಯಾಗಬೇಕೆಂಬ ಉತ್ಕಟಾಕಾಂಕ್ಷೆಯಿಂದಲೇ ಹೆಚ್ಚಾಗಿ ಡ್ರಾಪ್ ತೆಗೆದುಕೊಳ್ಳುತ್ತಾರೆ. ಕೆಲವರು ಪ್ರಕೃತಿಯ ತೊಂದರೆಯಿಂದಲೂ ಅಥವಾ ಪರಿಸ್ಥಿತಿಯ ಒತ್ತಡದಿಂದಲೂ ಅನಿವಾರ್ಯವಾಗಿ ಡ್ರಾಪ್ ತೆಗೆದುಕೊಳ್ಳಬೇಕಾಗುತ್ತದೆ. ಯಾವುದೇ ಕಾರಣದಿಂದ ಡ್ರಾಪ್ ತೆಗೆದುಕೊಳ್ಳಲಿ, ಜ್ಯೋತಿಷ್ಯ ದೃಷ್ಟಿಯಲ್ಲಿ ಹೇಳಬೇಕಾದರೆ ಇದು ಅಪಯಶ ಯೋಗವೆನ್ನಬಹುದು. ಆದುದರಿಂದ ಇಂಥ ವಿದ್ಯಾರ್ಥಿಗಳ ಜಾತಕದಲ್ಲಿ ಎಂಥ ಯೋಗಗಳಿರುತ್ತವೆಂಬುದನ್ನು ಪರಿಶೀಲಿಸುವಾ.

ಮೊದಲನೆಯದಾಗಿ ಇಂಥ ವಿದ್ಯಾರ್ಥಿಗಳ ಜಾತಕದಲ್ಲಿ ವಿದ್ಯಾಯೋಗ ದೃಷ್ಟಿಯಿಂದ ಇವರ ಜಾತಕ ಪೋಷಕವಿರುತ್ತದೆ. ಆದರೆ ಪರೀಕ್ಷೆ ನಡೆಯುವ ಸಮಯದಲ್ಲಿ ಗೋಚರಿ ಗ್ರಹಯೋಗವು ಪ್ರತಿಕೂಲವಿದ್ದು, ಅದರಲ್ಲಿಯೂ ಗುರು-ಚಂದ್ರರು ಗೋಚರಿಯಿಂದ ಪ್ರತಿಕೂಲರಿರುತ್ತಾರೆ. ಎರಡನೆಯದಾಗಿ ಕೆಲವು ವಿದ್ಯಾರ್ಥಿಗಳ ಜಾತಕದಲ್ಲಿ ಪಂಚಮಸ್ಥಾನ ಹಾಗೂ ಪಂಚಮೇಶ ಇವರಲ್ಲಿ ಯಾರೊಬ್ಬರೂ ಬಲಾಢ್ಯರಿದ್ದು ಇನ್ನೊಂದು ಸಂಗತಿ ಸೂಚಿತವಿರುತ್ತದೆ. ಇಂಥ ವಿದ್ಯಾರ್ಥಿಗಳು ಡ್ರಾಪ್ ತೆಗೆದುಕೊಳ್ಳುತ್ತಾರೆ. ಮೂರನೆಯದಾಗಿ ಇಂಥ ವಿದ್ಯಾರ್ಥಿಗಳ ಜಾತಕದಲ್ಲಿ ಅನೇಕ ಗ್ರಹಗಳು ವಾಯುರಾಶಿಯಲ್ಲಿರುವವು. ಅದರಲ್ಲಿಯೂ ಗುರು-ಚಂದ್ರ-ಬುಧರು ಹೆಚ್ಚಾಗಿ

ವಾಯುರಾಶಿಯಲ್ಲಿರುತ್ತಾರೆ. ನಾಲ್ಕನೆಯದಾಗಿ ಇಂಥ ವಿದ್ಯಾರ್ಥಿಗಳ ಜಾತಕದಲ್ಲಿ ಲಗ್ನೇಶ, ಚತುರ್ಥೇಶ, ಚತುರ್ಥ ಸ್ಥಾನ ಹಾಗೂ ತನುಸ್ಥಾನ ದೂಷಿತವಿರುತ್ತವೆ.

ಮೇಲ್ಕಂಡ ನಾಲ್ಕು ಯೋಗಗಳಲ್ಲಿ ಜನಿಸಿದ ವಿದ್ಯಾರ್ಥಿಗಳು ಡ್ರಾಪ್ ತೆಗೆದುಕೊಳ್ಳುತ್ತಾರೆ.

೭. ಮನೆಯಲ್ಲಿಯ ವಿಷಮ ವಾತಾವರಣದ ಅನಿಷ್ಟ ಪ್ರಭಾವ

ಅನೇಕ ವಿದ್ಯಾರ್ಥಿಗಳು ಮನೆಯ ವಿಷಮ ವಾತಾವರಣದ ಪರಿಣಾಮವಾಗಿ ಶಿಕ್ಷಣದಲ್ಲಿ ತೊಂದರೆಗೊಳಗಾಗುತ್ತಾರೆ. ಅಷ್ಟೆ ಏಕೆ, ಮನೆಯಲ್ಲಿಯ ಕಲುಷಿತ ಹಾಗೂ ವಿಷಮ ವಾತಾವರಣದ ದುಷ್ಪರಿಣಾಮದಿಂದಾಗಿ ಎಷ್ಟೋ ಬುದ್ಧಿವಂತ ವಿದ್ಯಾರ್ಥಿಗಳು ಕೂಡ ಶಿಕ್ಷಣವನ್ನು ಅರ್ಧಕ್ಕೇ ನಿಲ್ಲಿಸಿದ ಉದಾಹರಣೆಗಳೂ ಬಹಳಷ್ಟಿವೆ.

ಮನೆಯಲ್ಲಿ ವಿಷಮ ವಾತಾವರಣವುಂಟಾಗಲು ಅನೇಕ ಕಾರಣಗಳಿದ್ದರೂ ಪ್ರಮುಖ ಕಾರಣವೆಂದರೆ ವಿದ್ಯಾರ್ಥಿಯು ಚಿಕ್ಕ ವಯಸ್ಸಿನಲ್ಲಿಯೇ ತಂದೆ-ತಾಯಿಗಳ ಅಗಲುವಿಕೆಯ ಮೂಲಕ ಅಥವಾ ಅವನ ಶಿಕ್ಷಣವು ಮಲತಾಯಿ, ಅತ್ತಿಗೆ, ಕಕ್ಕಿ, ಅಣ್ಣ, ಚಿಕ್ಕಪ್ಪ, ದೊಡ್ಡಪ್ಪ ಮುಂತಾದವರ ಸಾನ್ನಿಧ್ಯದಲ್ಲಿ ಹಾಗೂ ಮೇಲ್ವಿಚಾರಣೆಯಲ್ಲಿ ಶಿಕ್ಷಣವನ್ನು ಮುಂದುವರಿಸಬೇಕಾದ ಪ್ರಮೇಯ ಉದ್ಭವಿಸಿದಾಗ ಕಲುಷಿತ ವಾತಾವರಣ ವುಂಟಾಗುವುದೇ ಹೆಚ್ಚು. ಆದರೆ ಒಂದು ಸಂಗತಿಯನ್ನು ಮಾತ್ರ ಮರೆಯುವಂತಿಲ್ಲ. ಮಲತಾಯಿ, ಅತ್ತಿಗೆ, ಕಕ್ಕಿ, ಇಂಥವರಿಂದಲೇ ಹೆಚ್ಚು ಸಹಾಯ, ಸಹಕಾರ ಪಡೆದು ಶಿಕ್ಷಣವನ್ನು ಪೂರ್ತಿಗೊಳಿಸಿದ ಉದಾಹರಣೆಗಳೂ ನೋಡಲು ಸಿಗುತ್ತವೆ. ಆದುದರಿಂದ ಯಾವ ವಿದ್ಯಾರ್ಥಿಯ ಜಾತಕದಲ್ಲಿ ಎಂಥ ಗ್ರಹಯೋಗವಿದ್ದರೆ ಮನೆಯಲ್ಲಿ ವಿಷಮ ವಾತಾವರಣವುಂಟಾಗುತ್ತದೆ, ಎಂಥ ಯೋಗವಿದ್ದರೆ ಉತ್ತಮ ವಾತಾವರಣವಿರುತ್ತದೆ ಎಂಬುದನ್ನು ಈ ಕೆಳಗೆ ಪರಿಶೀಲಿಸಲಾಗಿದೆ.

೧) ಮನೆಯಲ್ಲಿ ವಿಷಮ ವಾತಾವರಣ ನಿರ್ಮಾಣಮಾಡುವ ಸ್ಥಾನ

ವೆಂದರೆ ಚತುರ್ಥಸ್ಥಾನ. ಯಾರ ಜಾತಕದಲ್ಲಿ ಚತುರ್ಥಸ್ಥಾನ ಹಾಗೂ ಚತುರ್ಥೇಶ ದೂಷಿತರಿದ್ದರೆ,

೨) ಜಾತಕದಲ್ಲಿ ಶುಕ್ರ–ಚಂದ್ರ ದೂಷಿತರಿದ್ದರೆ,

೩) ಜಾತಕದಲ್ಲಿ ಶನಿ, ಮಂಗಳ, ರಾಹು ಈ ಮೂರು ಗ್ರಹಗಳಲ್ಲಿ ಯಾವುದೇ ಎರಡು ಗ್ರಹಗಳು ಚತುರ್ಥ ಸ್ಥಾನದಲ್ಲಿದರೆ,

೪) ಜಾತಕದಲ್ಲಿ ಚತುರ್ಥ ಅಥವಾ ದಶಮದಲ್ಲಿ ಅನೇಕ ಗ್ರಹ ಗಳಿದ್ದರೆ, ಅದರಲ್ಲಿಯೂ ಪಾಪಗ್ರಹಗಳು ಹೆಚ್ಚಾಗಿದ್ದರೆ,

೫) ಶನಿ–ಮಂಗಳ, ಶನಿ–ರವಿ, ರಾಹು–ಚಂದ್ರ, ಶನಿ–ಚಂದ್ರ, ರವಿ–ಕೇತು ಈ ಗ್ರಹಗಳ ಯುತಿಯೋಗವಾಗಲಿ, ಪ್ರತಿಯೋಗವಾಗಲಿ ಚತುರ್ಥ, ದಶಮದಲ್ಲಿದ್ದರೆ ವಿಷಮ ವಾತಾವರಣವಿರುತ್ತದೆ.

೬) ಜನ್ಮಾರಭ್ಯ ಸಾಡೇಸಾತಿಯಿದ್ದರೆ ಅಥವಾ ರವಿ, ಮಂಗಳ, ಚತುರ್ಥದಲ್ಲಿದ್ದು ಗೋಚರಿಯಿಂದ ಶನಿ ಪರಿಭ್ರಮಣ ಈ ಗ್ರಹಗಳ ಮೇಲಿಂದಾಗುವಾಗ,

೭) ಚತುರ್ಥೇಶನು ದುರ್ಬಲನಾಗಿ೬,೮,೧೨, ಈ ಸ್ಥಾನಗಳಲ್ಲಿದ್ದರೆ,

೮) ಚತುರ್ಥಸ್ಥಾನ, ಚಂದ್ರ, ಚತುರ್ಥೇಶ ಶುಕ್ರ ಈ ನಾಲ್ಕು ಸಂಗತಿಗಳು ದೂಷಿತವಿದ್ದರೆ,

೯) ಯಾವ ವಿದ್ಯಾರ್ಥಿಯ ಜಾತಕದಲ್ಲಿ ಈ ಕೆಳಗೆ ವಿವರಿಸಿದ ಯೋಗ ಗಳಿದ್ದರೆ ಅವರ ಮನೆಯಲ್ಲಿ ಅನುಕೂಲ ವಾತಾವರಣವಿರುತ್ತದೆ.

೧೦) ಬಲಾಢ್ಯ ಗುರು, ಶುಕ್ರ, ಚಂದ್ರರಲ್ಲಿ ಯಾರೊಬ್ಬರು ಚತುರ್ಥ ದಲ್ಲಿದ್ದರೆ ಮನೆಯಲ್ಲಿಯ ವಾತಾವರಣವು ಅನುಕೂಲವೂ, ಹಿತಕರವೂ ಇರುತ್ತದೆ.

೧೧) ಚತುರ್ಥೇಶ, ಚತುರ್ಥಸ್ಥಾನ, ಶುಕ್ರ ಹಾಗೂ ಚಂದ್ರ ಈ ನಾಲ್ಕು ಸಂಗತಿಗಳು ಅನುಕೂಲವಿದ್ದರೆ ಅಥವಾ ಬಲಾಢ್ಯ ಗುರುವಿನ ದೃಷ್ಟಿ ಚತುರ್ಥದ ಮೇಲಿದ್ದರೆ ಮನೆಯಲ್ಲಿ ಉತ್ತಮ ಹಾಗೂ ಹಿತಕರ ವಾತಾವರಣವಿರುತ್ತದೆ.

ಹೀಗೆ ಮೇಲ್ಕಂಡ ೧೧ ಯೋಗಗಳಿಂದ ಮನೆಯಲ್ಲಿಯ ಅನುಕೂಲ ಹಾಗೂ ಪ್ರತಿಕೂಲ ವಾತಾವರಣದ ಬಗೆಗೆ ಹೇಳಬಹುದು.

## ೮. ಪರೀಕ್ಷಾಭಯದ ಪರಿಣಾಮ

ಕೆಲವು ವಿದ್ಯಾರ್ಥಿಗಳಿಗೆ ಪರೀಕ್ಷೆಯೆಂದರೆ ಭಯವಿರುತ್ತದೆ. ಶಾಲೆ–ಕಾಲೇಜಗಳ ಕ್ಲಾಸಿನಲ್ಲಾಗಲಿ, ಮನೆಯಲ್ಲಾಗಲಿ ಉತ್ತಮ ಬದ್ಧಿವಂತ ವಿದ್ಯಾರ್ಥಿಯೆನಿಸಿಕೊಂಡು ಶಿಕ್ಷಕರ ಹಾಗೂ ಮನೆಯವರ (ಪಾಲಕರ) ಮೆಚ್ಚುಗೆಗೆ ಪಾತ್ರರಾದಂಥ ವಿದ್ಯಾರ್ಥಿಗಳು ಪರೀಕ್ಷಾಭಯದಿಂದ ಪರೀಕ್ಷೆಗಳನ್ನು ಕಳೆದುಕೊಂಡಂಥ ಅನೇಕರ ಜಾತಕ ನೋಡಿದ ಅನುಭವವಿದೆ. ಆದುದರಿಂದ ಪರೀಕ್ಷಾಭಯವಿರಲು ಜಾತಕದಲ್ಲಿ ಎಂಥ ಕುಯೋಗಗಳಿರುತ್ತವೆಂಬುದನ್ನು ಪರಿಶೀಲಿಸುವಾ.

ಕುಯೋಗಗಳು :

೧) ಜಾತಕದಲ್ಲಿ ಚಂದ್ರನು ದೂಷಿತನಿದ್ದರೆ,

೨) ಮಂಗಳನು ಜಾತಕದಲ್ಲಿ ದುರ್ಬಲನಿದ್ದ ವಿದ್ಯಾರ್ಥಿಗಳಿಗೆ,

೩) ಚಂದ್ರನು ಪಾಪಗ್ರಹಪೀಡಿತ, ಪಾಪಗ್ರಹದೃಷ್ಟನಾಗಿ ೬, ೫, ೮ ೧೨ನೆಯ ಸ್ಥಾನಗಳಲ್ಲಿದ್ದರೆ,

೪) ಜಾತಕದಲ್ಲಿ ಅನೇಕ ಗ್ರಹಗಳು ಸ್ತ್ರೀರಾಶಿಯಲ್ಲಿದ್ದರೆ,

೫) ಚಂದ್ರ, ಮಂಗಳ (ಮಕರ ರಾಶಿಯ ಹೊರತು), ಲಗ್ನೇಶ, ಚತುರ್ಥೇಶ ಈ ಗ್ರಹಗಳು ಸ್ತ್ರೀರಾಶಿಯಲ್ಲಿದ್ದ ವಿದ್ಯಾರ್ಥಿಗಳಿಗೆ,

೬) ಚತುರ್ಥ, ಲಗ್ನ ಈ ಸ್ಥಾನಗಳೂ ಈ ಸ್ಥಾನಾಧೀಶರೂ ದೂಷಿತರಿದ್ದರೆ,

## ೯. ಮಿತಿಮೀರಿದ ಆತ್ಮವಿಶ್ವಾಸದ ದುಷ್ಪರಿಣಾಮ

ತಮಗೆ ಬಾರದ, ಗೊತ್ತಿಲ್ಲದ, ತಿಳಿಯದ ವಿಷಯವೇ ಇಲ್ಲ ಎಂಬ ಮಿತಿಮೀರಿದ ಆತ್ಮವಿಶ್ವಾಸದಿಂದ ಅಭ್ಯಾಸವನ್ನು ಅಲಕ್ಷಿಸಿ ಪರೀಕ್ಷೆಯನ್ನು ಕಳೆದುಕೊಂಡ ವಿದ್ಯಾರ್ಥಿಗಳ ಜಾತಕಗಳನ್ನು ನೋಡಿದ ಅನುಭವವಿದೆ. ಇಂಥ ವಿದ್ಯಾರ್ಥಿಗಳ ಜಾತಕದಲ್ಲಿ ಈ ಕೆಳಗಿನಂತೆ ಯೋಗಗಳಿರುತ್ತವೆ.

೧) ಸಾಮಾನ್ಯವಾಗಿ ಇಂಥ ವಿದ್ಯಾರ್ಥಿಗಳ ಲಗ್ನದಲ್ಲಿ ಗುರು ಇಲ್ಲವೆ ಬುಧರಿರುತ್ತಾರೆ.

೨) ಇವರು ಹೆಚ್ಚಾಗಿ ಮಿಥುನ, ತುಲಾ, ಕುಂಭ, ವೃಷಭ, ಕನ್ಯಾ ಈ ರಾಶಿಯವರಿರುತ್ತಾರೆ.

೩) ಇಂಥ ವಿದ್ಯಾರ್ಥಿಗಳ ಜಾತಕದಲ್ಲಿ ಅನೇಕ ಗ್ರಹಗಳು ಹೆಚ್ಚಾಗಿ ವಾಯುರಾಶಿಯಲ್ಲಿರುತ್ತವೆ.

ಹೀಗೆ ಮೇಲ್ಕಂಡ ಮೂರು ಯೋಗಗಳಲ್ಲಿ ಜನಿಸಿದ ವಿದ್ಯಾರ್ಥಿಗಳು ಮಿತಿಮೀರಿ ಆತ್ಮವಿಶ್ವಾಸದಿಂದ ಪರೀಕ್ಷೆಯನ್ನು ಕಳೆದುಕೊಳ್ಳುತ್ತಾರೆ.

## ೧೦. ವಶೀಲಿಯ ಅನಿಷ್ಟ ಪರಿಣಾಮ

ಕೆಲವು ವಿದ್ಯಾರ್ಥಿಗಳ ಅಭ್ಯಾಸವು ಮೊದಲಿನಿಂದಲೇ ಅರ್ಥಾತ್ ಅಡಿ ಪಾಯದಿಂದಲೇ ಕಚ್ಚಾ ಇರುತ್ತದೆ. ಆದರೆ ಪಾಲಕರ, ತಂದೆ-ತಾಯಿಗಳ ಅಂತಸ್ತು, ವರ್ಚಸ್ಸು, ಅಧಿಕಾರ, ಐಶ್ವರ್ಯ ಮೊದಲಾದ ಪ್ರಭಾವದಿಂದ ಪರೀಕ್ಷೆಗಳನ್ನು ದಾಟುತ್ತ ಬರುವ ವಿದ್ಯಾರ್ಥಿಗಳೂ ಕೆಲವರಿರುತ್ತಾರೆ. ದುರ್ದೈವದಿಂದ ಪಾಲಕರ ಪ್ರಭಾವ ಕಡಿಮೆಯಾದಾಗ ಅನುತ್ತೀರ್ಣರಾಗಿ ಉಳಿಯಬೇಕಾಗಿ ಬರುವ ವಿದ್ಯಾರ್ಥಿಗಳ ಸಂಖ್ಯೆಯೇನೂ ಕಡಿಮೆಯಿಲ್ಲ. ಇಂಥ ವಿದ್ಯಾರ್ಥಿಗಳ ಜಾತಕದಲ್ಲಿ ಈ ಕೆಳಗಿನಂತೆ ಯೋಗಗಳಿರುತ್ತವೆ.

೧) ಮೊದಲನೆಯದಾಗಿ ಇಂಥ ವಿದ್ಯಾರ್ಥಿಗಳ ಜಾತಕದಲ್ಲಿ ಪಂಚಮ ಸ್ಥಾನ ಹಾಗೂ ಪಂಚಮೇಶರಿಗಿಂತ ಭಾಗ್ಯಸ್ಥಾನ, ಭಾಗ್ಯೇಶ, ಚತುರ್ಥಸ್ಥಾನ, ಚತುರ್ಥೇಶ ಹಾಗೂ ರವಿ ಈ ಗ್ರಹಗಳು ಜಾತಕದಲ್ಲಿ ಬಲಾಢ್ಯವಿರುತ್ತವೆ.

೨) ಎರಡನೆಯದಾಗಿ ಇಂಥ ವಿದ್ಯಾರ್ಥಿಗಳಿಗೆ (ಪಾಲಕರಿಗೂ, ವಿದ್ಯಾರ್ಥಿಗಳಿಗೂ) ಒಂದೇ ವೇಳೆಯಲ್ಲಿ ಸಾಡೇಸಾತಿ, ಪಂಚಮಾಷ್ಟಮ, ಶನಿ ಹಾಗೂ ಅಶುಭ ಗೋಚರೀ ಗುರು ಹೀಗೆ ಪರೀಕ್ಷೆ ಸಮಯದಲ್ಲಿ ಅಶುಭ ಗ್ರಹಗಳ ಗೋಚರೀಯ ಗ್ರಹಗಳ ಪರಿಭ್ರಮಣದ ಮೂಲಕ ಇವರು ಅನುತ್ತೀರ್ಣರಾಗುತ್ತಾರೆ. ಇಲ್ಲದಿದ್ದರೆ ಇವರು ಜನ್ಮತಃ ಬುದ್ಧಿವಿಗಳಿರುತ್ತಾರೆ.

## ೧೧. ಕಡ್ಡಾಯ ವಿಷಯಗಳ ಪ್ರಭಾವ

ಕೆಲವು ವಿದ್ಯಾರ್ಥಿಗಳಿಗೆ ಯಾವ ವಿಷಯಗಳಲ್ಲಿ ಆಸಕ್ತಿ, ಅಭಿರುಚಿ, ಇರುವದಿಲ್ಲವೋ ಅವೇ ವಿಷಯಗಳು ಪರೀಕ್ಷೆಯಲ್ಲಿ ಕಡ್ಡಾಯ ವಿಷಯಗಳಾಗಿ

ರುವ ಮೂಲಕ ಅನೇಕ ಸಲ ಅನುತ್ತೀರ್ಣರಾದವರ ಸಂಖ್ಯೆಯೂ ಬಹಳಷ್ಟಿವೆ. ನಮ್ಮೊರ್ವ ಮಿತ್ರನಿಗೆ ಗಣಿತವೆಂದರೆ ತಲೆಬೇಸರ. ಅದೊಂದೇ ವಿಷಯದಿಂದಾಗಿಯೇ ಅವನು ಎಸ್. ಎಸ್. ಎಲ್. ಸಿ.ಯಲ್ಲಿ ನಾಲ್ಕು ಬಾರಿ ಅನುತ್ತೀರ್ಣನಾದ. ಮಿಕ್ಕ ವಿಷಯಗಳಲ್ಲಿ ಅಧಿಕ ಗುಣಗಳನ್ನು ಸಂಪಾದಿಸುತ್ತಿದ್ದರೂ ಗಣಿತವು ಕಡ್ಡಾಯದ ವಿಷಯವಾಗಿದ್ದರಿಂದ ಈ ವಿಷಯದಲ್ಲಿ ತೇರ್ಗಡೆಯಾಗದೆ ಶಿಕ್ಷಣವನ್ನು ಮುಂದುವರಿಸುವಂತಿದ್ದಿಲ್ಲ. ಮುಂದೆ ಕಾಲೇಜ ಶಿಕ್ಷಣದಲ್ಲಿಯೂ ಸ್ನಾತಕೋತ್ತರ ಪದವಿ ಶಿಕ್ಷಣದಲ್ಲಿಯೂ ಇವನು ಉತ್ತಮ ರೀತಿಯಲ್ಲಿ ತೇರ್ಗಡೆಯಾದನೆಂಬುದನ್ನು ಗಮನಿಸಬೇಕು. ಹೀಗೆ ಕಡ್ಡಾಯ ವಿಷಯಗಳ ಪ್ರಭಾವದಿಂದ ಅನೇಕರು ಪರೀಕ್ಷೆಯಲ್ಲಿ ಅನುತ್ತೀರ್ಣರಾಗುವರಲ್ಲದೆ ಶಿಕ್ಷಣವನ್ನು ಅರ್ಧಕ್ಕೇ ನಿಲ್ಲಿಸುತ್ತಾರೆ. ಈ ವರ್ಗದ ವಿದ್ಯಾರ್ಥಿಗಳ ಜಾತಕದಲ್ಲಿ ಎಂಥ ಯೋಗಗಳಿರುತ್ತವೆಂಬುದನ್ನು ಪರಿಶೀಲಿಸುವಾ.

ಜ್ಯೋತಿಷ್ಯ ದೃಷ್ಟಿಯಿಂದ ಪರಿಶೀಲಿಸಿದರೆ ಜಾತಕದ ಯಾವ ಯಾವ ಗ್ರಹಗಳು ಯಾವ ಯಾವ ಸ್ಥಾನದಲ್ಲಿದ್ದರೆ ಯಾವ ಯಾವ ವಿಷಯಗಳಲ್ಲಿ ಅಭಿರುಚಿ, ಆಸಕ್ತಿ, ಪ್ರತಿಭೆ ಇರುವವೆಂಬುದನ್ನು ಇದೇ ಪುಸ್ತಕದ ಎರಡನೆಯ ಹಾಗೂ ಮೂರನೆಯ ಪ್ರಕರಣಗಳಲ್ಲಿ ವಿವರಿಸಲಾಗಿದೆ. ಇನ್ನು ಕಡ್ಡಾಯ ವಿಷಯಗಳಲ್ಲಿಯೂ ತೇರ್ಗಡೆಯಾಗಿ ಶಿಕ್ಷಣವನ್ನು ಮುಂದುವರಿಸಲು ಪರೀಕ್ಷಾ ಸಮಯದಲ್ಲಿ ಗೋಚರೀಗ್ರಹಗಳ ಬೆಂಬಲ ಬೇಕು.

## ೧೨. ಕಡು ದಾರಿದ್ರ್ಯದ ದುಷ್ಪರಿಣಾಮಗಳು

ಕೆಲವು ಬುದ್ಧಿವಂತ ವಿದ್ಯಾರ್ಥಿಗಳು ಬಡತನದ ಮೂಲಕ ಶಿಕ್ಷಣವನ್ನು ಅರ್ಧಕ್ಕೇ ನಿಲ್ಲಿಸಿದ ಅನೇಕ ಉದಾಹರಣೆಗಳಿವೆ. ಅಷ್ಟೇ ಏಕೆ, ಬಡತನದ ಬವಣೆಗಳಿಂದಾಗಿ ಅನೇಕ ಪ್ರತಿಭಾವಂತ ವಿದ್ಯಾರ್ಥಿಗಳು ಪರೀಕ್ಷಾ ಶುಲ್ಕವನ್ನೂ ಕಟ್ಟಲಾಗದೆ ಪರೀಕ್ಷೆಗಳನ್ನು ಕಳೆದುಕೊಂಡ ನಿದರ್ಶನಗಳೂ ಬೇಕಾದಷ್ಟಿವೆ. ಆದುದರಿಂದ ಇಂಥ ವಿದ್ಯಾರ್ಥಿಗಳ ಜಾತಕದಲ್ಲಿ ಎಂಥ ದುರ್ದೈವೀ ಯೋಗಗಳಿರುತ್ತವೆಂಬುದನ್ನು ಪರಿಶೀಲಿಸುವಾ.

೧) ಸಾಮಾನ್ಯವಾಗಿ ಇಂಥ ವಿದ್ಯಾರ್ಥಿಗಳ ಜಾತಕದಲ್ಲಿ ಪಂಚಮ ಸ್ಥಾನ ಹಾಗೂ ಪಂಚಮೇಶ ಬಲಾಢ್ಯರಿರುವರಲ್ಲದೆ ಬುಧ, ಗುರುಗಳು ರಾಶಿ ಬಲವುಳ್ಳವರಿದ್ದು ಸ್ಥಾನಬಲದವರಿರುವದಿಲ್ಲ.

೨) ಇಂಥ ವಿದ್ಯಾರ್ಥಿಗಳ ಜಾತಕದಲ್ಲಿ ಹೆಚ್ಚಾಗಿ ಅನೇಕ ಗ್ರಹಗಳು ಅನುದಿತ ಗೋಲಾರ್ಧದಲ್ಲಿರುತ್ತವೆ.

೩) ಇವರು ಹೆಚ್ಚಾಗಿ ಮೇಷ, ಮಿಥುನ, ತುಲಾ, ಕುಂಭ ಈ ರಾಶಿಯವರಿರುತ್ತಾರೆ.

೪) ಇಂಥ ವಿದ್ಯಾರ್ಥಿಗಳ ಜಾತಕದಲ್ಲಿ ಭಾಗ್ಯ, ಭಾಗ್ಯಸ್ಥಾನ, ದ್ವಿತೀಯಸ್ಥಾನ, ಚತುರ್ಥಸ್ಥಾನ, ತನುಸ್ಥಾನ, ಲಗ್ನೇಶ, ದ್ವಿತೀಯೇಶ, ಭಾಗ್ಯೇಶ ಇವರು ದುರ್ಬಲರೂ, ದೂಷಿತರೂ ಇರುತ್ತಾರೆ.

೫) ಇಂಥ ವಿದ್ಯಾರ್ಥಿಗಳ ಜಾತಕದ ಯೋಗಕಾರಕ ಗ್ರಹಗಳು ದುರ್ಬಲವಿರುತ್ತವೆ.

ಹೀಗೆ ಮೇಲ್ಕಾಣಿಸಿದ ಐದು ಯೋಗಗಳಲ್ಲಿ ಜನಿಸಿದ ವಿದ್ಯಾರ್ಥಿಗಳಿಗೆ ಕಡು ದಾರಿದ್ರ್ಯದ ಮೂಲಕ ಶಿಕ್ಷಣಕ್ಕೆ ತೊಂದರೆ ಉದ್ಭವಿಸುತ್ತದೆ. ಆದರೆ ಶಿಕ್ಷಣಾವಧಿಯಲ್ಲಿ ಗೋಚರೀಗ್ರಹಗಳು ಅನುಕೂಲವಿದ್ದರೆ ಮಾತ್ರ ಇಂಥವರು ಹೇಗೋ ಶಿಕ್ಷಣ ಮುಗಿಸುತ್ತಾರೆ.

### ೧೩. ಸರಕಾರದ ಧೋರಣೆಯ ಪ್ರಭಾವ

ವಿದ್ಯಾರ್ಥಿಗಳ ಶಿಕ್ಷಣದ ಸುಗಮತೆಗೆ ಸರಕಾರದ ಧೋರಣೆಗಳೂ ಕೆಲವೊಮ್ಮೆ ಕಾರಣಗಳಾಗಿ ಪರಿಣಮಿಸುತ್ತವೆ. ಶಿಕ್ಷಣಕ್ಷೇತ್ರದಲ್ಲಿ ಸರಕಾರವು ನಡೆಸುತ್ತಿರುವ ಪ್ರಯೋಗ, ಶಿಕ್ಷಣದ ನೀತಿ ಕೆಲವು ಸಲ ವಿದ್ಯಾರ್ಥಿಗಳಿಗೆ ಅನುಕೂಲವಾಗಿದ್ದರೆ ಮತ್ತೆ ಕೆಲವು ಸಲ ಅನಿಷ್ಟಕಾರಿಯಾಗುತ್ತದೆ. ಶಿಕ್ಷಣದ ಯೋಜನೆಗಳ ನಿರೂಪಣೆಯಲ್ಲಿ ಸರಕಾರವು ಇತ್ತೀಚೆಗೆ ಮಹತ್ವದ ಪಾತ್ರವನ್ನು ವಹಿಸುತ್ತಿರುವದು. ಈ ಅಂಶವನ್ನು ಕಡೆಗಣಿಸುವಂತಿಲ್ಲ. ಅಂತೆಯೇ "ರಾಜಾ ಕಾಲಸ್ಯ ಕಾರಣಂ" ಎಂಬ ಉಕ್ತಿ ಯಥಾರ್ಥವಾಗಿದೆ. ಶಿಕ್ಷಣದ ಅಡೆತಡೆಗೆ ಸರಕಾರದ ಧೋರಣೆಗಳು ಹೇಗೆ ಕಾರಣವಾಗುತ್ತವೆ ಎಂಬುದರ ವಿಷಯವಾಗಿ ಐದು ಉದಾಹರಣೆಗಳನ್ನು ಇಲ್ಲಿ ವಿವರಿಸಲಾಗಿದೆ. ಇದರಿಂದ ಈ ಅಂಶದ ಮಹತ್ವದ ಕಲ್ಪನೆ ಬರದೆ ಇರಲಾರದು.

೧) ಮೈಸೂರು ಸರಕಾರವು ೧೯೬೩ ಜೂನ್ ತಿಂಗಳಲ್ಲಿ ಮಾಧ್ಯಮಿಕ ಶಿಕ್ಷಣದಲ್ಲಿ ಏಳು ಹಾಗೂ ಎಂಟನೆಯ (ಹಳೆಯ ೭ನೆಯ ವರ್ಗ) ತರಗತಿ

ಗಳ ಸಮ್ಮೇಲನ ಮಾಡಿತು. ಇದರಿಂದ ೭ನೆಯ ತರಗತಿಯ ವಿದ್ಯಾರ್ಥಿ-ವಿದ್ಯಾರ್ಥಿನಿಯರು ಒಮ್ಮೆಲೇ ೯ನೆಯ ತರಗತಿಗೆ ಹೋದರು. ಅಂತೆಯೇ ಆ ವರ್ಷದ ೮ನೆಯ ತರಗತಿಯವರೂ ಉತ್ತೀರ್ಣರಾಗಿ ೯ನೆಯ ತರಗತಿಗೆ ಬಂದರು. ಹೀಗಾಗಿ ೭ನೆಯ ತರಗತಿಯನ್ನು ೧೯೬೩ನೆಯ ಇಸ್ವಿಯಲ್ಲಿ ಉತ್ತೀರ್ಣರಾದ ವಿದ್ಯಾರ್ಥಿಗಳು ೮ನೆಯ ತರಗತಿಯನ್ನು ಸೇರದೆ ೯ನೆಯ ತರಗತಿಗೆ ದಾಟಿದರು. ತತ್ಪರಿಣಾಮವಾಗಿ ೭ನೆಯ ತರಗತಿಯ ವಿದ್ಯಾರ್ಥಿಗಳಿಗೆ ಒಂದು ವರ್ಷ ಉಳಿತಾಯವಾಯಿತು.

೨) ೧೯೬೮ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯವು ಪಿ. ಯು. ಸಿ. ವಿದ್ಯಾರ್ಥಿಗಳಿಗೆ ಎ. ಟಿ. ಕೆ. ಟಿ. ಸೌಲಭ್ಯವನ್ನು ಕೊಟ್ಟಿತು. ಆ ಮೊದಲು ಪಿ. ಯು. ಸಿ. ನಪಾಸಾದವರು ಮುಂದಿನ ತರಗತಿಗೆ ಶಿಕ್ಷಣವನ್ನು ಮುಂದುವರಿಸುತ್ತಿರಲಿಲ್ಲ. ಆದರೆ ೧೯೬೮ನೆಯ ಇಸ್ವಿಯಲ್ಲಿ ವಿಶ್ವವಿದ್ಯಾಲಯದವರು ತಳೆದ ಧೋರಣೆಯಿಂದ ಎರಡು ವಿಷಯಗಳಲ್ಲಿ ನಪಾಸಾದ ವಿದ್ಯಾರ್ಥಿಗಳನೇಕರಿಗೆ ಮುಂದಿನ ತರಗತಿಗೆ ಹೋಗುವ ಸೌಲಭ್ಯ ದೊರೆಯಿತು. ಇದು ವಿದ್ಯಾರ್ಥಿಗಳ ಸಾಮೂಹಿಕ ಸೌಲಭ್ಯದ ಯೋಗಾಯೋಗವಲ್ಲದೆ ಮತ್ತೇನಾ ?

೩) ಇಂದಿನ ಶಿಕ್ಷಣಕ್ರಮದಲ್ಲಿ ಇನ್ನೊಂದು ಮೂಲಭೂತ ದೋಷ ಸರಕಾರದ ಧೋರಣೆಯಿಂದಾಗಿದೆ. ವಿದ್ಯಾರ್ಥಿಗಳು ಮಾಧ್ಯಮಿಕ ಶಿಕ್ಷಣದ ಪ್ರಾರಂಭದ ಹಂತದಲ್ಲಿ ಅರ್ಥಾತ್ ೮ನೆಯ ತರಗತಿಯಲ್ಲಿ ಐಚ್ಛಿಕ ವಿಷಯಗಳಲ್ಲಿ ಆರಿಸಿಕೊಳ್ಳಬೇಕೆಂಬ ಕಡ್ಡಾಯವಿರುತ್ತದೆ. ವಿದ್ಯಾರ್ಥಿ-ವಿದ್ಯಾರ್ಥಿನಿಯರು ತಮ್ಮ ೧೨-೧೩ ವರ್ಷಗಳ ಪ್ರಾಯದವರಿರುವಾಗಲೆ ಐಚ್ಛಿಕ ವಿಷಯಗಳನ್ನು ಆರಿಸಬೇಕು. ಅಂದರೆ ತಮಗೆ ಬೌದ್ಧಿಕ ಪರಿಪಕ್ವತೆ ಬರುವ ಮೊದಲೇ ವಿಷಯಗಳನ್ನಾರಿಸಬೇಕಾಗುತ್ತದೆ. ಆಗ ಆರಿಸಿದ ವಿಷಯಗಳು ಅವರ ಮುಂದಿನ ಉಚ್ಚ ಶಿಕ್ಷಣಕ್ಕೆ ಕಾರಣವಾಗುತ್ತವೆ. ಉದಾಹರಣೆಗೆ ಯಾವನೊಬ್ಬ ವಿದ್ಯಾರ್ಥಿಯು ೮ನೆಯ ತರಗತಿಯಲ್ಲಿ ಆರ್ಟ್ಸ ಕೋರ್ಸು ತೆಗೆದುಕೊಂಡಲ್ಲಿ ಅವನು ಎಸ್. ಎಸ್. ಎಲ್. ಸಿ. ಗೂ ಹಾಗೂ ಅದರ ಮುಂದಿನ ಕೋರ್ಸುಗಳಿಗೂ ಸೈನ್ಸ ಕೋರ್ಸ ತೆಗೆದುಕೊಳ್ಳುವಂತಿಲ್ಲ. ಇದು ವಿವಂಚನೆಯ ವಿಷಯವಲ್ಲವೆ? ಸರಕಾರದ ಈ ಶಿಕ್ಷಣನೀತಿ ಬದಲಾಗಬೇಕು. ವಿದ್ಯಾರ್ಥಿಗಳಿಗೆ ಬೌದ್ಧಿಕ ಪರಿಪಕ್ವತೆ ಬಂದಮೇಲೆಯೇ

ಅವರವರು ತಮತಮಗೆ ಆಸಕ್ತಿಯುಳ್ಳ ವಿಷಯಗಳನ್ನು ಆರಿಸಿಕೊಳ್ಳುವಂತೆ ಶಿಕ್ಷಣನೀತಿ ರೂಪಿತವಾಗಬೇಕು. ಸರಕಾರದ ಈ ದೋಷದಿಂದ ಅನೇಕ ವಿದ್ಯಾರ್ಥಿಗಳು ಪರೀಕ್ಷೆಗಳಲ್ಲಿ ನಪಾಸಾಗುತ್ತಾರೆ ಮಾತ್ರವಲ್ಲ, ಅವರ ಭವಿತವ್ಯದ ಮೇಲೆಯೆ ಅನಿಷ್ಟ ಪರಿಣಾಮವುಂಟಾಗಬಹುದಾಗಿದೆ.

೪) ಸರಕಾರದ ಅಸ್ಥಿರ ಧೋರಣೆಗಳು ವಿದ್ಯಾರ್ಥಿಗಳ ಶಿಕ್ಷಣಕ್ಕೆ ಅಡೆ-ತಡೆ ತರುವ ಪ್ರಸಂಗಗಳಿಗೇನೂ ಕೊರತೆಯಿಲ್ಲ. ಕೆಲವು ವರ್ಷಗಳ ಹಿಂದೆ ಮುಂಬಯಿ ರಾಜ್ಯದಲ್ಲಿ ದಿ. ಬಾಳಾಸಾಹೇಬ ಖೇರರು ಶಿಕ್ಷಣಮಂತ್ರಿಗಳಿದ್ದಾಗ ಎಸ್ ಎಸ್. ಸಿ. ಗೆ ಹಿಂದೀ ವಿಷಯವನ್ನು ತೆಗೆದುಕೊಂಡು ಉತ್ತೀರ್ಣರಾದರೆ ಉಚ್ಚ ಶಿಕ್ಷಣದ ಸೌಲಭ್ಯ ದೊರೆಯುತ್ತದೆ ಎಂದು ಘೋಷಿಸಿದ್ದರು. ಆದರೆ ಬಾಳಾಸಾಹೇಬರು ದಿವಂಗತರಾದ ಮೇಲೆ ಅವರ ಧೋರಣೆ ಮಣ್ಣುಪಾಲಾಯಿತು. ಅರ್ಥಾತ್ ಇಂಗ್ಲಿಷ್ ಕಡ್ಡಾಯವಾಗಿ ತೆಗೆದುಕೊಳ್ಳದಿದ್ದರೆ ಉಚ್ಚ ಶಿಕ್ಷಣದ ಸೌಲಭ್ಯವಿಲ್ಲವೆಂಬ ಬದಲಾವಣೆ ಬಂದಿತು. ಹಿಂದಿಯ ಆಶ್ರಯದ ಮೇಲೆ ಆಶೆ ಇರಿಸಿದ ವಿದ್ಯಾರ್ಥಿಗಳ ಶಿಕ್ಷಣಕ್ಕೆ ಕೊಡಲಿ ಪೆಟ್ಟು ಬಿದ್ದಿತು.

೫) ಸರಕಾರದ ಅಸ್ಥಿರ ಧೋರಣೆಗಳಿಂದ ವಿದ್ಯಾರ್ಥಿಗಳ ಶಿಕ್ಷಣಕ್ಕೆ ಆತಂಕ ತರುವ ಇನ್ನೊಂದು ನಿದರ್ಶನ. ೧೯೬೦-೬೧ರಲ್ಲಿ ಶ್ರೀ ಜತ್ತಿಯವರು ರಾಜ್ಯದ ಮುಖ್ಯಮಂತ್ರಿಗಳಿದ್ದಾಗ ವಿಜಾಪುರ ಹಾಗೂ ಬಳ್ಳಾರಿಗಳಲ್ಲಿ ಮೆಡಿಕಲ್ ಸ್ಕೂಲ್‌ಗಳನ್ನು ಪ್ರಾರಂಭಿಸಿದ್ದರು. ಆದರೆ ೧೯೬೩ರಲ್ಲಿ ರಾಜ್ಯದ ಹೊಸ ಮಂತ್ರಿಮಂಡಲ ಅಸ್ತಿತ್ವಕ್ಕೆ ಬಂದಾಗ ಆ ಮೆಡಿಕಲ್ ಸ್ಕೂಲ್‌ಗಳನ್ನು ಮುಚ್ಚಲಾಯಿತು. ಇದರ ಪರಿಣಾಮ ವಿದ್ಯಾರ್ಥಿಗಳ ಮೇಲೆಯೂ ಆಯಿತು. ಅಂದರೆ ಆ ಸ್ಕೂಲಿನಲ್ಲಿ ಸೇರಿಕೊಂಡ ಅನೇಕ ವಿದ್ಯಾರ್ಥಿಗಳನ್ನು ಮೆಡಿಕಲ್ ಕಾಲೇಜುಗಳ ಕೋರ್ಸಿಗೆ ಭರ್ತಿ ಮಾಡಲಾಯಿತು. ೧೯೬೨-೬೩ ಸಾಲಿನ ಕ್ಯಾಪಿಟೇಶನ್ ಶುಲ್ಕ ಕೊಟ್ಟರೂ ಮೆಡಿಕಲ್ ಕಾಲೇಜಿಗೆ ಪ್ರವೇಶ ದೊರೆಯದಿದ್ದ ಆ ಕಾಲದಲ್ಲಿ ಈ ಮೆಡಿಕಲ್ ಸ್ಕೂಲ್‌ಗಳ ವಿದ್ಯಾರ್ಥಿಗಳಿಗೆ ಸರಕಾರದ ಧೋರಣೆಯ ಪರಿಣಾಮವಾಗಿ ಪ್ರವೇಶ ದೊರೆಯಿತು. ಇದರ ಫಲಸ್ವರೂಪ ಅನೇಕ ಪ್ರತಿಭಾವಂತ ವಿದ್ಯಾರ್ಥಿ

ಗಳಿಗೆ ಪ್ರವೇಶ ನಿರಾಕರಣೆಯಾಯಿತು – ಕಾರಣ ಮೆಡಿಕಲ್ ಕಾಲೇಜು ಗಳಲ್ಲಿ ಪ್ರವೇಶಕ್ಕಿರುವ ಪರಿಮಿತಿ.

ಹೀಗೆ ಸರಕಾರದ ಶಿಕ್ಷಣದ ನೀತಿ ಬದಲಾದಂತೆ ಕೆಲವೊಮ್ಮೆ ಅನೇಕ ವಿದ್ಯಾರ್ಥಿಗಳಿಗೆ ವರದಾನವಾದರೆ ಮತ್ತೆ ಕೆಲವು ಸಲ ಶಾಪವಾಗಿ ಪರಿಣಮಿಸುತ್ತದೆ.

ಇನ್ನು ಫಲಜ್ಯೋತಿಷ್ಯದಲ್ಲಿ ಈ ವಿಚಾರಗಳಿಗೆ ಉತ್ತರ ಕೊಡಬೇಕಾದರೆ ನಾವು ಎರಡು ಸಂಗತಿಗಳನ್ನು ಪರಿಶೀಲಿಸಬೇಕಾಗುತ್ತದೆ. ೧) ಜಾತಕನ ಮೂಲ ಜಾತಕದಲ್ಲಿಯ ಶಿಕ್ಷಣಯೋಗ, ೨) ಗೋಚರೀಗ್ರಹಗಳ ಪರಿಭ್ರಮಣದ ಪ್ರಭಾವ ಈ ಎರಡು ಸಂಗತಿಗಳನ್ನು ಕೂಲಂಕಷವಾಗಿ ಪರಿಶೀಲಿಸಬೇಕು. ಏಕೆಂದರೆ ಜಾತಕನ ಜಾತಕದಲ್ಲಿ ಶಿಕ್ಷಣಯೋಗಗಳು ಪೋಷಕವಿದ್ದರೆ ಅವರಲ್ಲಿಯೂ ಪಂಚಮಸ್ಥಾನ, ಪಂಚಮೇಶ ಹಾಗೂ ಗುರು ಬಲಿಷ್ಠರಿದ್ದರೆ ಸರಕಾರದ ಯಾವದೇ ಧೋರಣೆಗಳು ಅನುಕೂಲವಾಗಿ ಪರಿಣಮಿಸುತ್ತವೆ. ಜಾತಕನ ಜಾತಕದಲ್ಲಿ ಶಿಕ್ಷಣಕ್ಕೆ ವ್ಯತ್ಯಯವನ್ನುಂಟು ಮಾಡುವ ಕುಯೋಗಗಳಿದ್ದರೆ ಸರಕಾರದ ಧೋರಣೆಗಳು ನೈಮಿತ್ತಿಕವಾಗಿ ಶಿಕ್ಷಣಕ್ಕೆ ಅಡೆತಡೆಗಳು ಬರುತ್ತವೆ. ಇವರಲ್ಲಿಯೇ ವಿದ್ಯಾರ್ಥಿದೆಶೆಯಲ್ಲಿ ಅರ್ಥಾತ್ ವಿದ್ಯಾರ್ಜನೆಯ ಅವಧಿಯಲ್ಲಿ ಶುಭ ಹಾಗೂ ಅನುಕೂಲ ದೆಶೆ–ಅಂತರ್ದೆಶೆಗಳಿದ್ದು ಗೋಚರೀಗ್ರಹಗಳ ಪರಿಭ್ರಮಣವು ಅನುಕೂಲವಾಗಿದ್ದರೆ ಸರಕಾರದ ಯಾವುದೇ ಧೋರಣೆಗಳು ಪ್ರತಿಕೂಲವಾಗಲಾರವು.

## ೧೪. ವಿವಾಹದ ಪ್ರಭಾವ

ಎಷ್ಟೋ ಜನ ಬುದ್ಧಿವಂತರಿದ್ದೂ ಅನುಕೂಲ ಹಾಗೂ ಸರಿಯಾದ ಕೋರ್ಸುಗಳನ್ನು ಆಯ್ದುಕೊಂಡಿದ್ದರೂ ಶಿಕ್ಷಣಾವಧಿಯಲ್ಲಿ ವಿವಾಹವಾಗುವುದರಿಂದ ಅನೇಕ ವಿದ್ಯಾರ್ಥಿಗಳು ಪರೀಕ್ಷೆಗಳಲ್ಲಿ ಅನುತ್ತೀರ್ಣರಾಗುತ್ತಾರೆ. ಅಷ್ಟೇ ಅಲ್ಲದೆ ಈ ಕಾರಣದಿಂದಾಗಿಯೇ ಶಿಕ್ಷಣವನ್ನು ಅರ್ಧಕ್ಕೇ ನಿಲ್ಲಿಸಿದ ವಿದ್ಯಾರ್ಥಿಗಳ ಜಾತಕವನ್ನು ನೋಡಿದ ಅನುಭವವಿದೆ. ಆದರೆ ಇದು ವಿದ್ಯಾರ್ಥಿಗಳಿಗಿಂತ ವಿದ್ಯಾರ್ಥಿನಿಯರಲ್ಲಿ ಹೆಚ್ಚಾಗಿರುವುದು ಕಂಡುಬರುತ್ತದೆ. ಇಂಥ ವಿದ್ಯಾರ್ಥಿಗಳ ಜಾತಕದಲ್ಲಿ ಈ ಕೆಳಗಿನಂತೆ ಯೋಗಗಳು ಇರುತ್ತವೆ:

೧) ಗುರು, ಶುಕ್ರ, ಚಂದ್ರ ಈ ಗ್ರಹಗಳಲ್ಲಿ ಯಾರೊಬ್ಬರು ಬಲಾಢ್ಯ ರಾಗಿ ಸಪ್ತಮದಲ್ಲಿರುತ್ತಾರೆ.

೨) ಸಪ್ತಮೇಶನು ಬಲಾಢ್ಯನಿರುತ್ತಾನೆ.

೩) ಸಪ್ತಮಸ್ಥಾನದಲ್ಲಿಯಾಗಲಿ, ಸಪ್ತಮದ ಮೇಲಾಗಲಿ ಶನಿ, ಮಂಗಳ, ರಾಹು, ಕೇತುಗಳ ದೃಷ್ಟಿಯೋಗ-ಯುತಿಯೋಗ ಮೊದಲಾದ ಅನಿಷ್ಟ ಯೋಗಗಳಿರುವದಿಲ್ಲ.

೪) ವಿದ್ಯಾರ್ಜನೆಯ ಅವಧಿಯಲ್ಲಿಯೇ ವಿವಾಹಯೋಗ ಬಲ ವತ್ತರವಿರುತ್ತದೆ.

ಹೀಗೆ ಮೇಲ್ಕಾಣಿಸಿದ ನಾಲ್ಕು ಯೋಗಗಳಲ್ಲಿ ಜನಿಸಿದ ವಿದ್ಯಾರ್ಥಿ-ವಿದ್ಯಾರ್ಥಿನಿಯರಿಗೆ ವಿವಾಹವಾಗುವುದರ ಮೂಲಕ ಶಿಕ್ಷಣವನ್ನು ಅರ್ಧಕ್ಕೇ ನಿಲ್ಲಿಸಬೇಕಾದ ಸಂದರ್ಭ ಒದಗುತ್ತದೆ.

## ೧೫. ಕೆಲವು ವಿಚಿತ್ರ ಯೋಗಗಳು

ಕೆಲವು ವಿದ್ಯಾರ್ಥಿಗಳು ಮಾಧ್ಯಮಿಕ ಶಿಕ್ಷಣದ ವರೆಗೆ ಉತ್ತಮ ಶ್ರೇಣಿಯಲ್ಲಿ ತೇರ್ಗಡೆಯಾಗುತ್ತಿದ್ದು ಬುದ್ಧಿವಂತರೆನಿಸಿಕೊಂಡಿದ್ದರೂ ಉಚ್ಚ (ಕಾಲೇಜ್) ಶಿಕ್ಷಣದ ಅಧ್ಯಯನದಲ್ಲಿ ಇವರ ಪ್ರಗತಿ ಇಳಿಮುಖ ವಾಗುವದಲ್ಲದೆ ಜಡಮತಿಗಳೆನಿಸಿಕೊಂಡು ಶಿಕ್ಷಣವನ್ನು ಅರ್ಧಕ್ಕೇ ನಿಲ್ಲಿಸು ತ್ತಾರೆ. ತದ್ವಿರುದ್ಧ ಅನೇಕ ವಿದ್ಯಾರ್ಥಿಗಳು ಮಾಧ್ಯಮಿಕ ಶಿಕ್ಷಣದ ವರೆಗೆ ಮಂದಮತಿಗಳೆಂದು ಹೆಸರಾಗಿದ್ದರೂ ಉಚ್ಚ ಶಿಕ್ಷಣದಲ್ಲಿ ಒಮ್ಮೆಲೇ ಪ್ರತಿಭಾ ವಂತರೆನಿಸುತ್ತಾರೆ. ಆದರೆ ತಮ್ಮ ಮಾಧ್ಯಮಿಕ ಶಿಕ್ಷಣದ ಅವಧಿಯಲ್ಲಿ ಇವರು ಮಂದಬುದ್ಧಿಯವರೆಂದು ಕಂಡುಬಂದಿದ್ದರ ಪರಿಣಾಮದಿಂದಾಗಿ ಉಚ್ಚ ಶಿಕ್ಷಣವನ್ನು ಮುಂದುವರಿಸದವರಾಗಿರುತ್ತಾರೆ. ವಿಶ್ವವಿದ್ಯಾಲಯ ಗಳು ತಳೆದ ಧೋರಣೆಯ ಪರಿಣಾಮದಿಂದಾಗಿ ಇವರಿಗೆ ಕಾಲೇಜ್ ಪ್ರವೇಶ ಲಭಿಸುವದಿಲ್ಲ. ಉದಾಹರಣೆ : ಯಾವನೊಬ್ಬ ವಿದ್ಯಾರ್ಥಿಯು ಎಸ್. ಎಸ್. ಎಲ್. ಸಿ. ಯಲ್ಲಿ ನೂರಕ್ಕೆ ನಾಲ್ವತ್ತಕ್ಕಿಂತಲೂ ಕಡಿಮೆ ಗುಣಗಳನ್ನು ಪಡೆದವನಾದರೆ ಅವನಿಗೆ ಕಾಲೇಜ್ ಶಿಕ್ಷಣದ ಪ್ರವೇಶಕ್ಕೆ ಅವಕಾಶವಿಲ್ಲ.

ವಿಶ್ವವಿದ್ಯಾಲಯಗಳ ಈ ಧೋರಣೆಗಳ ಪರಿಣಾಮವಾಗಿ ಅನೇಕ ವಿದ್ಯಾರ್ಥಿಗಳು ಶಿಕ್ಷಣದಲ್ಲಿ ಹಾಸಿಗೊಳಗಾಗುತ್ತಾರೆ.

ವಿದ್ಯಾರ್ಥಿಗಳ ಮಾಧ್ಯಮಿಕ ಶಿಕ್ಷಣದಲ್ಲಿಯ ಮಂದಪ್ರಗತಿಗೆ ಅನೇಕ ಕಾರಣಗಳಿವೆ. ಮೊದಲನೆಯದಾಗಿ ವಿದ್ಯಾರ್ಥಿಗಳ ಶಿಕ್ಷಣವು ಹಳ್ಳಿ, ಗ್ರಾಮಗಳಲ್ಲಿ ಆಗುವುದರ ಮೂಲಕ ಶಹರಗಳಲ್ಲಿ ಶಿಕ್ಷಣವನ್ನು ಪಡೆಯುವ ವಿದ್ಯಾರ್ಥಿಗಳಿಗಿರುವ ಉತ್ತಮ ವಾತಾವರಣ ಹಾಗೂ ಸೌಲಭ್ಯಗಳು ಅವರಿಗೆ ಲಭಿಸುವದಿಲ್ಲ. ಎರಡನೆಯದಾಗಿ ಶಹರದಲ್ಲಿರುವ ಸುಶಿಕ್ಷಿತ, ವಿದ್ಯಾವಂತ ಪಾಲಕರ ಮೇಲ್ವಿಚಾರಣೆಯು ಗ್ರಾಮದಲ್ಲಿರುವ ಪಾಲಕರಲ್ಲಿ ಇರುವದಿಲ್ಲ. ಆದರೆ ಒಂದು ಸಂಗತಿ ನಿಜ. ಶಹರದಲ್ಲಿರುವ ವಿದ್ಯಾರ್ಥಿಗಳೆಲ್ಲ ಬುದ್ಧಿವಂತರಿರುತ್ತಾರೆ ಎಂದು ಹೇಳಲು ಬಾರದು. ಇದರಂತೆ ಸುಶಿಕ್ಷಿತ, ಉತ್ತಮ ವಾತಾವರಣವಿದ್ದ ಮನೆಗಳಲ್ಲಿ ಕೂಡ ಮಂದಬುದ್ಧಿಯ ವಿದ್ಯಾರ್ಥಿಗಳು ನೋಡಲು ಸಿಗುತ್ತಾರೆ. ಇದಲ್ಲದೆ ಹಳ್ಳಿಯ ವಿಷಮ ವಾತಾವರಣಗಳಲ್ಲಿಯೂ ಸೌಲಭ್ಯಗಳಿಲ್ಲದಾಗ್ಯೂ ಬುದ್ಧಿವಂತ ವಿದ್ಯಾರ್ಥಿಗಳ ಜಾತಕವನ್ನು ನೋಡಿದ ಅನುಭವವಿದೆ. ಆದುದರಿಂದ ಜ್ಯೋತಿಷ್ಯದ ದೃಷ್ಟಿಯಿಂದ ಪರಿಶೀಲಿಸಿದರೆ ವಿದ್ಯಾ-ಬುದ್ಧಿಯ ಯೋಗವು ಅವರವರ ದೈವವನ್ನು ಅವಲಂಬಿಸಿರುತ್ತದೆ. ಕೇವಲ ಶಹರದಲ್ಲಿ ಮಾಧ್ಯಮಿಕ ಶಿಕ್ಷಣವನ್ನು ಮುಂದುವರಿಸಿದವರು ಬುದ್ಧಿವಂತರು ಹಾಗೂ ಮನೆಯಲ್ಲಿ ಸುಶಿಕ್ಷಿತ ಪಾಲಕರಿದ್ದವರಷ್ಟೇ ಬುದ್ಧಿವಂತರಾಗುತ್ತಾರೆಂದು ಹೇಳಲು ಬಾರದು. ಇದರಂತೆಯೇ ಜಾತಕನ ಜಾತಕದಲ್ಲಿ ಶಿಕ್ಷಣಯೋಗವು ಪೋಷಕವೂ, ಪೂರಕವೂ ಇದ್ದು, ವಿದ್ಯಾರ್ಥಿದೆಶೆಯಲ್ಲಿ ಶುಭ ಹಾಗೂ ಅನುಕೂಲ ದಶೆ-ಅಂತರ್ದಶೆಗಳಿದ್ದು, ಗೋಚರೀ ಗ್ರಹಗಳ ಪರಿಭ್ರಮಣವು ಅನುಕೂಲವಾಗಿದ್ದರೆ ಉಚ್ಚ ಶಿಕ್ಷಣದ ಪ್ರವೇಶಕ್ಕೆ ಯಾವ ಬಾಧೆಯೂ ಬಾರದು.

---

# ೨. ಗ್ರಹ-ಲಗ್ನ-ಸ್ಥಾನಾದಿಗಳ ಮೇಲಿಂದ ಶಿಕ್ಷಣದ ವಿಚಾರ

ಶಿಕ್ಷಣ ಜ್ಯೋತಿಷ್ಯದ ವಿಸ್ತೃತ ವಿವೇಚನೆಯಲ್ಲಿ ಪ್ರಪ್ರಥಮವಾಗಿ ಶಿಕ್ಷಣದಲ್ಲಿಯ ಅಡೆತಡೆಗಳ ವಿಶ್ಲೇಷಣೆಯನ್ನು ಮಾಡಿದ ನಂತರ ಜ್ಯೋತಿಷ್ಯ ಶಾಸ್ತ್ರದ ದೃಷ್ಟಿಯಲ್ಲಿ ಜಾತಕನ ಮೂಲ ಜಾತಕದಲ್ಲಿ ಯಾವ ಯಾವ ಗ್ರಹಗಳು ಯಾವ ಯಾವ ಸ್ಥಾನಗಳು, ಯಾವ ಯಾವ ಲಗ್ನಗಳು ಪೋಷಕ, ಪೂರಕವಿದ್ದರೆ ಯಾವ ಪ್ರಕಾರ ಶಿಕ್ಷಣ ಕೋರ್ಸುಗಳಲ್ಲಿ ಜ್ಞಾನ ಲಭಿಸುತ್ತದೆ ಎಂಬುದನ್ನು ಕುರಿತು ಈ ಪ್ರಕರಣದಲ್ಲಿ ಸವಿಸ್ತಾರವಾಗಿ ವಿವೇಚಿಸಲಾಗಿದೆ.

## ಸ್ಥಾನಗಳ ಮೇಲಿಂದ ಶಿಕ್ಷಣದ ವಿಚಾರ

ಯಾವನೊಬ್ಬ ವಿದ್ಯಾರ್ಥಿಯು ಜಾತಕವನ್ನು ತೋರಿಸಿ ತನ್ನ ಶಿಕ್ಷಣ ಎಲ್ಲಿಯವರೆಗಿದೆ ಎಂದು ಪ್ರಶ್ನಿಸಿದರೆ ಇದಕ್ಕೆ ಉತ್ತರ ಕೊಡುವುದು ಕಠಿಣ. ಏಕೆಂದರೆ ಶಾಲೆ-ಕಾಲೇಜುಗಳ ಶಿಕ್ಷಣವೇ ಶಿಕ್ಷಣವೊ ಹೇಗೆ? ಶಾಲೆ-ಕಾಲೇಜುಗಳಲ್ಲಿ ಶಿಕ್ಷಣ ಮುಗಿಸಿದವರಷ್ಟೇ ಬುದ್ಧಿವಂತರೆ? ಹಾಗಾದರೆ ದಿ. ರವೀಂದ್ರನಾಥ ಟಾಗೋರರ ಶಿಕ್ಷಣ ಎಲ್ಲಿಯ ವರೆಗೆ ಆಗಿತ್ತು? ಆದರೂ ಅವರು ಪ್ರತಿಭಾವಂತ ವ್ಯಕ್ತಿಗಳಾಗಿರಲಿಲ್ಲವೇ? ಈ ಮೊದಲಾದ ನೂರಾರು ಸಮಸ್ಯೆಗಳು ಉದ್ಭವಿಸುವವು. ಆದರೆ ಜಾತಕದ ಮೇಲಿಂದ ಯಾವನೊಬ್ಬ ವಿದ್ಯಾರ್ಥಿಯ ಜ್ಞಾನ, ಬುದ್ಧಿಯಮಟ್ಟ ಮಾತ್ರ ಹೇಳಲು ಬರುತ್ತದೆ. ಆದರೆ ಇಂದಿನ ಶೈಕ್ಷಣಿಕ ಕ್ರಮದಲ್ಲಿ ಇಷ್ಟರಿಂದಲೇ ಸಾಲದು. ಅನೇಕ ವಿದ್ಯಾರ್ಥಿಗಳು, ತಾವು ಪದವೀಧರರಾಗುವರೇ ಹೇಗೆ? ಈ ಮೊದಲಾಗಿ ಆಧುನಿಕ ಶಿಕ್ಷಣ ಕ್ರಮದಂತೆ ವಿಚಾರಿಸುತ್ತಾರೆ. ಪ್ರಸ್ತುತ ಪ್ರಕರಣದಲ್ಲಿ ಶಿಕ್ಷಣಕ್ಕಾಗಿ, ಕೋರ್ಸುಗಳಿಗಾಗಿ ಯಾವ ಯಾವ ಸ್ಥಾನಗಳನ್ನು ಪರಿಶೀಲಿಸಬೇಕು ಎಂಬುದನ್ನು ಈ ಕೆಳಗೆ ಕೊಡಲಾಗಿದೆ.

ಯಾವನೊಬ್ಬ ಜಾತಕನ ಶಿಕ್ಷಣದ ಅರ್ಥಾತ್ ವಿದ್ಯೆ-ಬುದ್ಧಿಯ ವಿಷಯವಾಗಿ ಪಂಚಮಸ್ಥಾನವನ್ನು ಪ್ರಾಮುಖ್ಯವಾಗಿಟ್ಟುಕೊಂಡು ಶಿಕ್ಷಣದ ವಿಷಯವಾಗಿ ನಿರ್ಣಯಿಸಬೇಕೆಂದು ಅನೇಕ ಜ್ಯೋತಿಷಿಗಳ ಅಭಿಪ್ರಾಯ ಇದೆ. ಆದರೆ ನಮ್ಮ ಅಭಿಪ್ರಾಯದಲ್ಲಿ ಎಲ್ಲ ಪ್ರಕಾರದ ಶಿಕ್ಷಣಗಳಿಗೆ ಪಂಚಮ ಸ್ಥಾನವನ್ನೇ ಪರಿಶೀಲಿಸಬೇಕೆಂದು ಅನಿಸುವುದಿಲ್ಲ. ಏಕೆಂದರೆ ಪಂಚಮ ಸ್ಥಾನ ಹಾಗೂ ಪಂಚಮೇಶ ದೂಷಿತರಿದ್ದು ಶಿಕ್ಷಣ ಮುಗಿಸಿದ ಅರ್ಥಾತ್ ಕೋರ್ಸುಗಳನ್ನು ಮುಗಿಸಿದ ಸಾಕಷ್ಟು ಉದಾಹರಣೆಗಳಿವೆ. ಇದೂ ಅಲ್ಲದ ಪಂಚಮಸ್ಥಾನ, ಪಂಚಮೇಶ ಬಲಾಢ್ಯರಿದ್ದು ಶಿಕ್ಷಣದಲ್ಲಿ (ಕೋರ್ಸುಗಳಲ್ಲಿ) ಹಾನಿಗೊಂಡಂಥ ಉದಾಹರಣೆಗಳೂ ಸಾಕಷ್ಟಿವೆ. ಉದಾಹರಣೆಗಾಗಿ : ದಶಮ ದಲ್ಲಿ ಶನಿ, ಚತುರ್ಥದಲ್ಲಿ ಮಂಗಳ ಇದ್ದು ಬಾಲ್ಯದಲ್ಲಿಯೇ ಸಾಡೇಸಾತಿಯ ದುಷ್ಪರಿಣಾಮದಿಂದ ತಂದೆ-ತಾಯಿಗಳನ್ನು ಕಳೆದುಕೊಂಡು ಶಿಕ್ಷಣವನ್ನು ನಿಲ್ಲಿಸಿದ ಉದಾಹರಣೆಯಿವೆ. ಇದರಂತೆಯೇ ನಮ್ಮೊರ್ವ ಮಿತ್ರನು ಬಿ. ಇ. ಪರೀಕ್ಷೆಯಲ್ಲಿ ವಿಶ್ವವಿದ್ಯಾಲಯಕ್ಕೆ ಪ್ರಪ್ರಥಮನಾಗಿ ತೇರ್ಗಡೆಯಾಗಿದ್ದನು. ಇದೂ ಅಲ್ಲದೆ ಅವನು ಎಲ್ಲ ಪರೀಕ್ಷೆಗಳಲ್ಲಿಯೂ ಮೇಲಿನ ಶ್ರೇಣಿಯಲ್ಲಿಯೇ ಪಾಸಾಗುತ್ತಿದ್ದನು. ಆದರೆ ಅವನ ಜಾತಕದಲ್ಲಿ ಲಗ್ನ, ಷಷ್ಠ, ಅಷ್ಟಮ ಸ್ಥಾನಗಳು ದೂಷಿತವಿದ್ದ ಕಾರಣ ಪ್ರತಿ ಪರೀಕ್ಷೆಗಳಲ್ಲಿಯೂ ಪರೀಕ್ಷೆಗ ಕೂಡ್ರಲಾರದಂಥ ಬೇನೆಗಳಿಂದ ಜರ್ಜರಿತನಾಗುತ್ತಿದ್ದನು. ಆದುದರಿಂದ ಕೇವಲ ಪಂಚಮ ಸ್ಥಾನವನ್ನಷ್ಟೇ ಪರಿಶೀಲಿಸದೆ ಇತರ ಸ್ಥಾನಗಳನ್ನೂ ಪರಿಶೀಲಿಸಬೇಕು.

ಪಂಚಮಸ್ಥಾನವೇನೋ ವಿದ್ಯೆಯ ಸ್ಥಾನ ನಿಜ. ಆದರೆ ಶಿಕ್ಷಣ ಪೂರ್ತಿಯಾಗಲು ಕೇವಲ ವಿದ್ಯೆ-ಬುದ್ಧಿಯಿದ್ದರೆ ಸಾಲದು. ಅವನ ಏಳ್ಗೆಗೆ ಅವಕಾಶ-ಸುಸಂಧಿಗಳೂ ಬೇಕಾಗುತ್ತವೆ. ಇದಕ್ಕಾಗಿ ಭಾಗ್ಯಸ್ಥಾನ ವನ್ನು ಪರಿಶೀಲಿಸಬೇಕಾಗುತ್ತದೆ. ಇದೂ ಅಲ್ಲದೆ ಶಿಕ್ಷಣ-ಕೋರ್ಸುಗಳಲ್ಲ ಕೂಡ ಅನೇಕ ಪ್ರಕಾರಗಳಿದ್ದು ಭಿನ್ನ ಭಿನ್ನ ಪ್ರಕಾರದ ಶಿಕ್ಷಣ-ಕೋರ್ಸು ಗಳಿಗೆ ಭಿನ್ನ ಭಿನ್ನ ಸ್ಥಾನಗಳೂ ಕಾರಕವಿರುತ್ತವೆ. ಉದಾಹರಣೆಗಾಗಿ, ವೃತ್ತಿಶಿಕ್ಷಣಕ್ಕಾಗಿ ಷಷ್ಠಸ್ಥಾನವನ್ನೂ, ತಾಂತ್ರಿಕಶಿಕ್ಷಣಕ್ಕಾಗಿ ತೃತೀಯ ಸ್ಥಾನವನ್ನೂ, ಐ.ಎ.ಎಸ್, ಪಬ್ಲಿಕ್ ಸರ್ವಿಸ್ ಕಮೀಶನ್ ಪರೀಕ್ಷೆಗಳು

ಮೊದಲಾದ ಸ್ಪರ್ಧಾತ್ಮಕ ಪರೀಕ್ಷೆಗಳಿಗಾಗಿ ಭಾಗ್ಯಸ್ಥಾನವನ್ನೂ, ಟೀಚರ್ಸ್ ಟ್ರೇನಿಂಗ್ ಶಿಕ್ಷಣಕ್ಕಾಗಿ ದ್ವಿತೀಯ ಸ್ಥಾನವನ್ನೂ ಪರಿಶೀಲಿಸಬೇಕಾಗುತ್ತದೆ. ಆದುದರಿಂದ ಭಿನ್ನ ಭಿನ್ನ ಕೋರ್ಸುಗಳ ಶಿಕ್ಷಣಕ್ಕಾಗಿ ಯಾವ ಯಾವ ಸ್ಥಾನಗಳನ್ನು ಪರಿಶೀಲಿಸಬೇಕೆಂಬುದನ್ನು ಈ ಕೆಳಗಿನಂತೆ ಕೊಡಲಾಗಿದೆ :

• ತನುಸ್ಥಾನ :— ಜಾತಕದ ಪ್ರಥಮ ಸ್ಥಾನದಿಂದ ಶಿಕ್ಷಣದ ವಿಷಯವಾಗಿ ನೇರವಾದ ಸಂಬಂಧ ಇರುವದಿಲ್ಲವಾದರೂ ಕೆಲವು ಕೋರ್ಸುಗಳ ವಿಷಯವಾಗಿ ಈ ಸ್ಥಾನವನ್ನು ಪರಿಶೀಲಿಸಬೇಕಾಗುತ್ತದೆ. ಸೈನಿಕ ಶಿಕ್ಷಣ, ಕೃಷಿವಿಜ್ಞಾನ, ಸೂಕ್ಷ್ಮಯಂತ್ರೋಪಕರಣಗಳ ತರಬೇತಿ ಕೋರ್ಸುಗಳು. ಉದಾಹರಣಾರ್ಥವಾಗಿ: ರೆಫ್ರಿಜರೇಟರ್ ಮೆಕ್ಯಾನಿಕ್, ಟ್ರ್ಯಾಕ್ಟರ್ ಟ್ರೇನಿಂಗ್, ಡಾಯಲರ್ಸ್ ಇಂಜನಿಯರಿಂಗ್. ಡಿಪ್ಲೋಮಾ, ಸ್ಯಾನಿಟರಿ ಇನ್‌ಸ್ಪೆಕ್ಟರ್ ಕೋರ್ಸ, ಫಿಜಿಕಲ್ ಎಜ್ಯುಕೇಶನ್, ವಿಮಾನ ಪರಿಚಾರಿಕೆಯ ಕೋರ್ಸ್, ಸ್ಪರ್ಧಾತ್ಮಕ ಪರೀಕ್ಷೆಗಳ ಕೋರ್ಸುಗಳು— ಈ ಮೊದಲಾದ ಕೋರ್ಸು ಹಾಗೂ ವಿಷಯಗಳನ್ನು ಈ ಸ್ಥಾನದಿಂದಲೇ ಪರಿಶೀಲಿಸಬೇಕಾಗುತ್ತದೆ.

ದ್ವಿತೀಯ ಸ್ಥಾನ:— ಶಿಕ್ಷಣದ ವಿಷಯವಾಗಿ ಪಂಚಮಸ್ಥಾನದ ನಂತರ ದ್ವಿತೀಯ ಸ್ಥಾನಕ್ಕೆ ಬಹಳೇ ಮಹತ್ವವಿದೆ. ಏಕೆಂದರೆ ಈ ಸ್ಥಾನಕ್ಕೆ ವಾಕ್‌ಸ್ಥಾನವೆನ್ನುತ್ತಾರೆ. ವಾಗೇಶ ದುರ್ಬಲನಿದ್ದರೆ ಶಿಕ್ಷಣಕ್ಕೆ ತಡೆತಡೆಗಳು ಬಹಳ ಬರುತ್ತವೆ. ಶಿಕ್ಷಕ ತರಬೇತಿಗಳ ಕೋರ್ಸುಗಳಿಗಾಗಿ ಅಂದರೆ ಡಿ. ಟಿ. ಸಿ., ಬಿ. ಇಡಿ., ಎಮ್. ಇಡಿ., ಸಿ. ಪಿ. ಇಡಿ., ಡಿ. ಪಿ. ಇಡಿ., ಟೇಲರಿಂಗ್ ಕೋರ್ಸ ಮೊದಲಾದ ಕೋರ್ಸುಗಳಿಗಾಗಿ ಹಾಗೂ ಸಂಗೀತ-ಕಾವ್ಯದ ಮೊದಲಾದ ವಿಷಯಗಳಿಗಾಗಿ ಈ ಸ್ಥಾನದಿಂದಲೇ ಪರಿಶೀಲಿಸಬೇಕಾಗುತ್ತದೆ.

**ತೃತೀಯ ಸ್ಥಾನ:**— ತೃತೀಯ ಸ್ಥಾನವು ಶಿಕ್ಷಣದ ವಿಷಯವಾಗಿ ಬಹಳೇ ಮಹತ್ವದ್ದಿದೆ. ಅದರಲ್ಲಿಯೂ ಪುಸ್ತಕೀಯ ಶಿಕ್ಷಣಕ್ಕಿಂತ ಪ್ರಯೋಗ ಶಾಲೆಯಲ್ಲಿಯ ಪ್ರಾತ್ಯಕ್ಷಿಕೆಯ ಜ್ಞಾನವನ್ನು ಪಡೆಯುವ (Practicals) ಸ್ಥಾನವೆಂದರೆ ತೃತೀಯಸ್ಥಾನವು. ತೃತೀಯಸ್ಥಾನ ದೂಷಿತವಿದ್ದ ವಿದ್ಯಾರ್ಥಿ

ಗಳು ಪರೀಕ್ಷೆಗಳಲ್ಲಿ ಅನುತ್ತೀರ್ಣರಾದ ಸಂಖ್ಯೆಗೇನೂ ಕಡಿಮೆಯಿಲ್ಲ. ಇದೂ ಅಲ್ಲದೆ ಡ್ರಾಯಿಂಗ್, ಪೇಂಟಿಂಗ್ ಕೋರ್ಸುಗಳು, ತಾಂತ್ರಿಕ ಶಿಕ್ಷಣದ ಕೋರ್ಸುಗಳಾದ ವೆಲ್ಡಿಂಗ್, ಟರ್ನಿಂಗ್, ಲೇಥ್, ಗ್ರೈಂಡಿಂಗ್, ಟೂಲ್ ಮೇಕಿಂಗ್, ಫೌಂಡ್ರಿ, ಪ್ಯಾಟರ್ನ್, ಮೌಲ್ಡಿಂಗ್, ಪ್ಲಂಬಿಂಗ್, ಶೀಟ್ ಮೆಟಲ್, ಕೇಬಲ್ ಜಾಯಿಂಟ್, ಡ್ರೈವಿಂಗ್, ಆಪರೇಟಿಂಗ್, ವೆಲ್ಡರ್, ಫಿಟರ್, ಫೋರಮನ್, ಇಲೆಕ್ಟ್ರಿಶಿಯನ್, ವೈರಿಂಗ್, ಮೆಕ್ಯಾನಿಕ್ ಈ ಮೊದಲಾದ ಕೋರ್ಸುಗಳಿಗೂ ಡ್ರಾಫ್ಟ್ಸ್‌ಮನ್, ಸಿವಿಲ್ ಇಂಜನಿಯರಿಂಗ್, ಮೆಕ್ಯಾನಿಕಲ್ ಇಂಜನಿಯರಿಂಗ್, ಆಟೋಮೋಬಾಯಿಲ್ ಇಂಜನಿಯರಿಂಗ್ ಈ ಮೊದಲಾದ ಇಂಜನಿಯರಿಂಗ ಕೋರ್ಸುಗಳಿಗೂ ಟೈಪಿಂಗ್, ಶಾರ್ಟ ಹ್ಯಾಂಡ್, ಸೆಕ್ರೆಟರಿಯಲ್ ಈ ಮೊದಲಾದ ವಾಣಿಜ್ಯ ಕೋರ್ಸುಗಳಿಗೂ, ಲೈಬ್ರರೀ ಸೈನ್ಸ, ನರ್ಸಿಂಗ್, ಮಿಡ್‌ವೈಫರೀ, ಕಾಂಪೌಂಡರ್ ಕೋರ್ಸ, ಸಾಯಿಲ್ ಕನ್ಸರ್ವೇಶನ್, ಟ್ರಾಕ್ಟರ್ ಟ್ರೇನಿಂಗ್, ಶಿಲ್ಪಕಲೆ, ಸ್ಥಾಪತ್ಯಶಾಸ್ತ್ರ, ಡಿಪ್ಲೋಮಾ ಇನ್ ಸಿರೆಮಿಕ್ಸ್, ಡೆಂಟಲ್ ಮೆಕ್ಯಾನಿಕ್, ಫೋಟೋಗ್ರಾಫಿ, ಲೆಬೊರೇಟರೀ ಟೆಕ್ನಿಶಿಯನ್, ಬಾಯಲರ್ಸ್ ಮೇಕ್ಯಾನಿಕ್, ರೆಫ್ರಿಜರೇಟರ್ ಮೆಕ್ಯಾನಿಕ್, ಪ್ರಾಯೋಗಿಕ ಹಾಗೂ ಪ್ರಾತ್ಯಕ್ಷಿಕ ಪರೀಕ್ಷೆಗಳ ವಿಚಾರ— ಈ ಮೊದಲಾದ ಕೋರ್ಸ ಹಾಗೂ ವಿಷಯಗಳಿಗಾಗಿ ತೃತೀಯ ಸ್ಥಾನವನ್ನು ಪರಿಶೀಲಿಸಬೇಕಾಗುತ್ತದೆ.

ಪಂಚಮ ಸ್ಥಾನ:— ಯಾವುದೇ ಕೋರ್ಸ್ ವಿಷಯಗಳ ಶಿಕ್ಷಣಕ್ಕಾಗಿ ಪ್ರಮುಖ ಸ್ಥಾನವೆಂದರೆ ಪಂಚಮ ಸ್ಥಾನವು. ಈ ಸ್ಥಾನದಿಂದ ವಿದ್ಯೆಗಿಂತ ಜ್ಞಾನ, ಬುದ್ಧಿಗಳ ವಿಷಯವಾಗಿ ಹೆಚ್ಚು ವಿವರಿಸಲಾಗುತ್ತದೆ. ಬುದ್ಧಿಯ ಆಳ, ಎತ್ತರ, ವೈಶಾಲ್ಯಗಳ ಕಲ್ಪನೆ ಈ ಸ್ಥಾನದಿಂದಲೇ ಬರುತ್ತದೆ. ಆಧುನಿಕ ಶಿಕ್ಷಣ ಕ್ರಮದಂತೆ ಯಾವುದೇ ವಿಷಯಗಳಲ್ಲಿ ಪದವಿ (Degree) ಇಲ್ಲವೆ ಅನೇಕ ಪದವಿ ಪಡೆಯುವ ಯೋಗಗಳು ಈ ಸ್ಥಾನದಿಂದಲೇ ಪರಿಶೀಲಿಸಲ್ಪಡಬೇಕಾಗುವವು. ಇದಲ್ಲದೆ ಪಾಂಡಿತ್ಯ, ಪ್ರತಿಭೆ, ಥೇರಿ ಪರೀಕ್ಷೆ ಈ ಮೊದಲಾದ ಗುಣಗಳಿಗಾಗಿಯೂ ಈ ಸ್ಥಾನವನ್ನೆ ಪರಿಶೀಲಿಸಬೇಕಾಗುತ್ತದೆ. ವಿದ್ಯಾರ್ಥಿಯ ಪರೀಕ್ಷೆಗಳಲ್ಲಿಯ ತರಗತಿ, ವರ್ಗ,

ಶ್ರೇಣಿ, ರ್‍ಯಾಂಕ ಇವನ್ನು ಪಡೆಯಲೂ ಕೂಡ ಜಾತಕದ ಪಂಚಮಸ್ಥಾನ ಬಲಾಢ್ಯವಿರಬೇಕು. ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಲು ಪಂಚಮ ಸ್ಥಾನವೇ ಪೂರಕವಿರಬೇಕು. ಈ ಮೊದಲಾದ ವಿಷಯಗಳಿಗಾಗಿ ಈ ಸ್ಥಾನದಿಂದಲೇ ಪರಿಶೀಲಿಸಬೇಕಾಗುತ್ತದೆ.

ಷಷ್ಠ ಸ್ಥಾನ:— ಷಷ್ಠ ಸ್ಥಾನವನ್ನು ವೃತ್ತಿ ಶಿಕ್ಷಣಗಳಾದ ವೈದ್ಯಕೀಯ (Medical Education). ಕಾಯದೆ ಶಿಕ್ಷಣ, ಚಾರ್ಟರ್ಡ್ ಅಕೌಂಟಂಟ್ಸ್, ಮೊದಲಾದ ವೃತ್ತಿ ಶಿಕ್ಷಣಗಳಿಗೂ, ತಾಂತ್ರಿಕ ಹಾಗೂ ಇಂಜನಿಯರಿಂಗ ಗಳ ವೃತ್ತಿ ಶಿಕ್ಷಣಗಳಿಗೂ ಈ ಸ್ಥಾನದಿಂದಲೇ ಪರಿಶೀಲಿಸಬೇಕಾಗುತ್ತದೆ. ಈ ಮೊದಲಾದ ಶಿಕ್ಷಣ ಹಾಗೂ ವಿಷಯಗಳಿಗಾಗಿ ಈ ಸ್ಥಾನದಿಂದಲೇ ಪರಿಶೀಲಿಸಬೇಕಾಗುತ್ತದೆ.

ಭಾಗ್ಯಸ್ಥಾನ :— ಶಿಕ್ಷಣದ ವಿಷಯವಾಗಿ ಜಾತಕದ ಭಾಗ್ಯ ಸ್ಥಾನದ ಮಹತ್ವ ಬಹಳವಿದೆ. ಅದರಲ್ಲಿಯೂ ಯೂನಿಯನ್ ಪಬ್ಲಿಕ್ ಸರ್ವಿಸ್ ಕಮಿಶನ್, ರಾಜ್ಯಗಳ ಸರ್ವಿಸ್ ಕಮಿಶನ್, ರೇಲ್ವೇ ಸರ್ವಿಸ್ ಕಮಿಶನ್ ಮೊದಲಾದವುಗಳು ನಡೆಯಿಸುವ ವಿವಿಧ ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಲು ಜಾತಕದ ಭಾಗ್ಯ ಸ್ಥಾನ ಹಾಗೂ ಭಾಗ್ಯೇಶನನ್ನು ಪರಿಶೀಲಿಸಲೇಬೇಕಾಗುತ್ತದೆ. ಈ ಸ್ಥಾನ ಹಾಗೂ ಸ್ಥಾನಾಧೀಶ ದುರ್ಬಲರಿದ್ದ ಜಾತಕನು ಮೇಲ್ಕಂಡ ಪರೀಕ್ಷೆಗಳಲ್ಲಿ ಯಶಸ್ವಿಯಾಗುವದೇ ದುರ್ಲಭ. ಇದೂ ಅಲ್ಲದೆ ಹೆಚ್ಚಿನ ಶಿಕ್ಷಣಕ್ಕಾಗಿ ಪರದೇಶ ಪರ್ಯಟನ ಯೋಗವನ್ನು ಕೂಡ ಈ ಸ್ಥಾನದಿಂದಲೇ ಪರಿಶೀಲಿಸಬೇಕಾಗುತ್ತದೆ. ಇದೂ ಅಲ್ಲದೆ ಬೋರ್ಡ ಹಾಗೂ ವಿಶ್ವವಿದ್ಯಾಲಯಗಳ ಪರೀಕ್ಷೆಗಳಲ್ಲಿ ಪ್ರಥಮ ಶ್ರೇಣಿ, ಪ್ರಥಮಾಂಕ ಪಡೆಯುವದು ಮೊದಲಾದ ಗೌರವಪೂರ್ಣ ಯಶಸ್ಸು ಪಡೆಯಲು ಈ ಸ್ಥಾನವೇ ಕಾರಣವು.

### ಗ್ರಹಗಳ ಮೇಲಿಂದ ಶಿಕ್ಷಣದ ವಿಚಾರ

ಯಾವನೊಬ್ಬ ವಿದ್ಯಾರ್ಥಿಯ ಶಿಕ್ಷಣ, ವಿದ್ಯೆ ಪೂರ್ತಿಯಾಗಬೇಕಾದರೆ ಜಾತಕದಲ್ಲಿ ಗುರುವು ಬಲಾಢ್ಯನಿರಬೇಕು. ಗುರು ಬಲಾಢ್ಯನಿರದೆ ಯಾರಿಗೂ ವಿದ್ಯೆ ಪ್ರಾಪ್ತವಾಗುವದಿಲ್ಲ, ವಿದ್ಯೆ ಪೂರ್ತಿಯಾಗುವದಿಲ್ಲ ಎಂದು ನಮ್ಮ

ಪುರಾತನ ಜ್ಯೋತಿಷಿಗಳ ಅಭಿಪ್ರಾಯವಿದೆ. ಇದರಂತೆಯೇ ಅನೇಕ ಲೇಖಕರೂ, ಜ್ಯೋತಿಷಿಗಳೂ ಇದನ್ನೇ ಬೆಂಬಲಿಸಿದ್ದಾರೆ.

ಆದರೆ ನಮ್ಮ ಅಭಿಪ್ರಾಯದಂತೆ ಎಲ್ಲ ಪ್ರಕಾರದ ಆಧುನಿಕ ಕೋರ್ಸು ಗಳಿಗೆ ಗುರುವು ಬಲಾಢ್ಯನಿರಬೇಕೆಂದು ಅನಿಸುವದಿಲ್ಲ. ಜಾತಕದಲ್ಲಿ ಗುರುವು ದುರ್ಬಲನಿದ್ದಾಗ್ಯೂ ಉಚ್ಚಶ್ರೇಣಿಯಲ್ಲಿ ಉಚ್ಚ ಶಿಕ್ಷಣ ಪಡೆದ ಅನೇಕ ಜಾತಕಗಳನ್ನು ನೋಡಿದ ಅನುಭವವಿದೆ. ಉದಾಹರಣೆಗೆ: ಧನು ಲಗ್ನದ ದ್ವಿತೀಯದಲ್ಲಿ ನೀಚರಾಶಿಯ ಗುರುವಿದ್ದು, ಪಂಚಮದಲ್ಲಿ ಉಚ್ಚರಾಶಿಯ ರವಿಯೂ, ಭಾಗ್ಯದಲ್ಲಿ ಕುಜನೂ ಇದ್ದು ಗೋಚರೀ ಗ್ರಹಗಳು ಅನುಕೂಲ ವಿದ್ದು ಶಿಕ್ಷಣ ಕೋರ್ಸುಗಳನ್ನು ಪೂರ್ತಿಗೊಳಿಸಿದ ಅನೇಕ ಉದಾಹರಣೆ ಗಳಿವೆ. ಇದೂ ಅಲ್ಲದೆ ಕೇವಲ ಪಂಚಮೇಶ ಬಲಾಢ್ಯನಿದ್ದು ಕೋರ್ಸು ಗಳನ್ನು ಮುಗಿಸಿದ ಅನೇಕ ಉದಾಹರಣೆಗಳೂ ಸಿಗುತ್ತವೆ.

ಗುರುವು ವಿದ್ಯೆಯ–ಜ್ಞಾನದ ಅಧಿಪತಿಯೇನೋ ನಿಜ. ಜಾತಕದಲ್ಲಿ ಗುರು ಬಲಾಢ್ಯನಿದ್ದರೆ ಜಾತಕನು ತೀಕ್ಷ್ಣ–ಕುಶಾಗ್ರಮತಿಯೂ ಜ್ಞಾನ ವಂತನೂ ಇರುತ್ತಾನೆ. ಆದರೆ ಆತ ವಿದ್ಯಾವಂತನಾಗುತ್ತಾನೆಂದು ಹೇಳಲು ಬಾರದು. ವಿದ್ಯೆ, ಬುದ್ಧಿ, ಜ್ಞಾನ ಈ ಎಲ್ಲ ಶಬ್ದಗಳಿಗೆ ವಿಶಿಷ್ಟ ಅರ್ಥವಿರು ತ್ತದೆ. ಜ್ಞಾನವಂತ ಬೇರೆ, ವಿದ್ಯಾವಂತ ಬೇರೆ. ಜ್ಞಾನವಂತನು ವಿದ್ಯಾ ವಂತನಿರಲಿಕ್ಕಿಲ್ಲ, ಇರಬಹುದು. ಇದರಂತೆಯೇ ವಿದ್ಯಾವಂತನು ಜ್ಞಾನ ವಂತನಿರಲಿಕ್ಕಿಲ್ಲ ಅಥವಾ ಇರಬಹುದು. ಜಾತಕದಲ್ಲಿ ಗುರುವು ಬಲಾಢ್ಯ ನಿದ್ದರೆ ಜಾತಕನು ಜ್ಞಾನವಂತನಿರುತ್ತಾನೆ. ಆದರೆ ವಿದ್ಯಾವಂತನಾಗಲು ಅನೇಕ ಸಂಗತಿಗಳನ್ನು ಪರಿಶೀಲಿಸಬೇಕಾಗುತ್ತದೆ. ಉದಾಹರಣೆಗೆ: ಜಾತಕ ದಲ್ಲಿ ರವಿಯು ಬಲಾಢ್ಯನಿದ್ದರೆ ಆ ಜಾತಕನಿಗೆ ತಕ್ಕ ಅವಕಾಶ (Oppertunity) ಸೌಲಭ್ಯ, ಸುಸಂಧಿ ಸಕಾಲದಲ್ಲಿ ದೊರೆತು ಶಿಕ್ಷಣ, ಕೋರ್ಸು ಸರಿ ಯಾಗಿ ಮುಗಿಸುವ ಸುದೈವೀ ವಿದ್ಯಾರ್ಥಿಯಿರುತ್ತಾನೆ. ಇದರಂತೆಯೇ ಜಾತಕದಲ್ಲಿ ಕುಜನು ಬಲಾಢ್ಯನಿದ್ದರೆ ಕಠಿಣ ಪರಿಶ್ರಮಿಯೂ ಇರುತ್ತಾನೆ. ಇದೂ ಅಲ್ಲದೆ ಆಧುನಿಕ ಶಿಕ್ಷಣ ಕ್ರಮದಲ್ಲಿ ಅನೇಕ ವಿಷಯಗಳೂ, ವಿವಿಧ ಕೋರ್ಸುಗಳೂ ಇದ್ದು ಭಿನ್ನ ಭಿನ್ನ ಪ್ರಕಾರದ ಕೋರ್ಸು ವಿಷಯಗಳಿಗೆ

ಭಿನ್ನ ಭಿನ್ನ ಗ್ರಹಗಳು ಕಾರಕವಿರುತ್ತವೆ. ಉದಾಹರಣೆಗೆ: ಅರ್ಥಶಾಸ್ತ್ರ-ವಾಣಿಜ್ಯ ವಿಷಯದ ಕೋರ್ಸುಗಳಿಗೆ ಬುಧನೂ, ಜೀವಶಾಸ್ತ್ರ ಹಾಗೂ ವೈದ್ಯಕೀಯ ಶಾಸ್ತ್ರಗಳಿಗೆ ರವಿಯೂ, ಭೌತಶಾಸ್ತ್ರ ಹಾಗೂ ಇಂಜನಿಯರಿಂಗ ಕೋರ್ಸುಗಳಿಗೆ ಕುಜನೂ ಕಾರಕರಿರುತ್ತಾರೆ. ಆದುದರಿಂದ ಭಿನ್ನ ಭಿನ್ನ ವಿಷಯ ಕೋರ್ಸುಗಳ ಶಿಕ್ಷಣಕ್ಕಾಗಿ ಯಾವ ಯಾವ ಗ್ರಹಗಳನ್ನು ಪರಿಶೀಲಿಸಬೇಕು ಮತ್ತು ಶಿಕ್ಷಣಕ್ಕಾಗಿ ವಿವಿಧ ಗ್ರಹಗಳ ವೈವಿಧ್ಯವೇನು ಎಂಬುದನ್ನು ಈ ಕೆಳಗೆ ಕೊಡಲಾಗಿದೆ.

ರವಿ:— ಭೌತಶಾಸ್ತ್ರ (Physics), ಜೀವಶಾಸ್ತ್ರ (Biology), ಪ್ರಾಣಿಶಾಸ್ತ್ರ (Zoology), ಸೈನಿಕಶಾಸ್ತ್ರ, ಶರೀರಶಾಸ್ತ್ರ (Anotomy-Physiology) ಆರೋಗ್ಯಶಾಸ್ತ್ರ (Hygiene), ಶಾರೀರಿಕ ಶಿಕ್ಷಣ(Physical Education), ವೈದ್ಯಕೀಯ ಶಿಕ್ಷಣ (Medical Course), ಸೈನಿಕ ಶಿಕ್ಷಣ (Defence and Military Eucation). ಈ ಮೊದಲಾದ ವಿಷಯಗಳ ಶಿಕ್ಷಣ ಕೋರ್ಸುಗಳಿಗೆ ರವಿಯು ಕಾರಕನಿರುತ್ತಾನೆ. ಜಾತಕದಲ್ಲಿ ರವಿಯು ಬಲಾಢ್ಯನಿದ್ದರೆ ಆ ಜಾತಕನು ಮೇಲ್ಕಂಡ ವಿಷಯ-ಕೋರ್ಸುಗಳಲ್ಲಿ ಜ್ಞಾನ ಪಡೆಯುತ್ತಾನೆ.

ಚಂದ್ರ :— ಭೂಗರ್ಭಶಾಸ್ತ್ರ (Geology), ಮಾನಸ ಶಾಸ್ತ್ರ (Psychology), ಸಸ್ಯಶಾಸ್ತ್ರ (Botany), ಔಷಧೀಶಾಸ್ತ್ರ (Pharmacology) ರಸಾಯನಶಾಸ್ತ್ರ (Chemistry), ಭೂಮಿತಿ (Geometry), ಭೂಗೋಲ (Geography), ಗೃಹವಿಜ್ಞಾನ (Home-Science), ಆಹಾರ ವಿಜ್ಞಾನ (Food Technology), ರಬ್ಬರ್ ಟೆಕ್ನಾಲಜಿ, ಮರೀನ್ ಇಂಜನಿಯರಿಂಗ್ (Marine Engineering), ಮರೀನ್ ಇಂಜನಿಯರಿಂಗ್ ಕೋರ್ಸ್, ನೇವಿ ಕೋರ್ಸ್, ಮೆಡಿಕಲ್ ಕೋರ್ಸ್, ಗೃಹವಿಜ್ಞಾನ ಕೋರ್ಸ್, ಪಶು ಸಂಗೋಪನಶಾಸ್ತ್ರ, ಪಶುಸ್ತ್ರೀರೋಗಶಾಸ್ತ್ರ, ತೋಟಗಾರಿಕೆಯ ಶಾಸ್ತ್ರ, ಕೃಷಿ-ರಸಾಯನಶಾಸ್ತ್ರ, ಹಯನುವಿಜ್ಞಾನ (Dairy).

ಮಂಗಳ :— ಭೌತಶಾಸ್ತ್ರ (Physics), ಕ್ರಿಮಿನಾಲಜಿ, ಯಾವುದೇ ಇಂಜನಿಯರಿಂಗ್ ಹಾಗೂ ಯಾವುದೇ ವಿಜ್ಞಾನದ ವಿಷಯ, ಮೆಕ್ಯಾನಿಕಲ್

ಇಂಜನಿಯರಿಂಗ್, ಇಲೆಕ್ಟ್ರಿಕಲ್ ಇಂಜನಿಯರಿಂಗ್, ಆಟೋಮೋಬಾಯಿಲ್ ಇಂಜನಿಯರಿಂಗ್, ಮೆಟಲಜಿ ಕಲ್ ಇಂಜನಿಯರಿಂಗ್, ತಾಂತ್ರಿಕ ಶಿಕ್ಷಣ, ಟೆಲಿಕಮ್ಯುನಿಕೇಶನ್ ಇಂಜನಿಯರಿಂಗ್, ರೇಡಿಯೋ ಇಂಜನಿಯರಿಂಗ್, ಕೆಮಿಕಲ್ ಟೆಕ್ನಾಲಜಿ, ಶಸ್ತ್ರಕ್ರಿಯಾಶಾಸ್ತ್ರ, ಸೈನಿಕ ಶಿಕ್ಷಣ, ಭೂಗರ್ಭಶಾಸ್ತ್ರ, ಭೂಗೋಲ, ಭೂಮಿತಿ, ಸೈನ್ಸ್ ಕೋರ್ಸ, ಇಂಜನಿಯರಿಂಗ್ ಕೋರ್ಸ, ವೈದ್ಯಕೀಯ ಕೋರ್ಸ.

ಬುಧ :— ಯಾವುದೇ ಭಾಷಾ-ಶಿಕ್ಷಣ, ಸಾಹಿತ್ಯ-ಶಿಕ್ಷಣ, ಪತ್ರಿಕೋದ್ಯಮದ ಶಿಕ್ಷಣ, ಅಂಕಿ-ಸಂಖ್ಯೆಗಳ ಶಾಸ್ತ್ರ, ವಾಣಿಜ್ಯಶಾಸ್ತ್ರ, ಅರ್ಥಶಾಸ್ತ್ರ, ಬೀಜಗಣಿತ, ವಾಚನಾಲಯ ವಿಜ್ಞಾನ (Library Science), ಎಪಿಗ್ರಾಫಿ (Epigraphy).ಗಣಿತಶಾಸ, ಟೆಲಿಕಮ್ಯುನಿಕೇಶನ್, ಪೇಪರ ಟೆಕ್ನಾಲಜಿ, ರೇಡಿಯೋ ಇಂಜನಿಯರಿಂಗ್, ಟೈಪಿಂಗ್, ಶೀಘ್ರಲಿಪಿಯ ಕೋರ್ಸ, ಯಾವುದೇ ವಾಣಿಜ್ಯ ಕೋರ್ಸ (Commerce Course).

ಗುರು :— ಆತ್ಮಜ್ಞಾನ, ವೇದಾಂತ, ತತ್ತ್ವಜ್ಞಾನ, ಕಾಯಿದೆಶಾಸ್ತ್ರ, ಆಯುರ್ವೇದ ಶಿಕ್ಷಣ, ವೈದಿಕ ಶಿಕ್ಷಣ, ಸಂಸ್ಕೃತ, ಪರ್ಶಿಯನ್, ಜರ್ಮನ್, ಅರೇಬಿಕ್, ತರ್ಕಶಾಸ್ತ್ರ, ರಾಜಕಾರಣ ಶಾಸ್ತ್ರ (Political Science) ಶುಗರ್ ಟೆಕ್ನಾಲಜಿ (Sugar Technology), ಅಂಕಗಣಿತ, ಯಾವುದೇ ಶಿಕ್ಷಕರ ಟ್ರೇನಿಂಗ್ ಕೋರ್ಸ. ಉದಾಹರಣೆ:— ಟೀಚರ್ಸ ಟ್ರೇನಿಂಗ್ ಕೋರ್ಸು, ಬಿ.. ಇಡಿ., ಎಮ್. ಇಡಿ., ಎಸ್. ಟಿ. ಸಿ., ಡಿ. ಟಿ. ಸಿ., ಕ್ರಾಫ್ಟ್ ಟೀಚರ್ಸ ಟ್ರೇನಿಂಗ್ ಕೋರ್ಸ, ಸಿ. ಪಿ. ಇಡಿ., ಡಿ. ಪಿ. ಇಡಿ., ಬಿ. ಪಿ. ಇಡಿ. ಮೊದಲಾದ ಕೋರ್ಸುಗಳು.

ಶುಕ್ರ :— ಸಂಗೀತಶಾಸ್ತ್ರ, ನೃತ್ಯಶಾಸ್ತ್ರ, ವಾದನಶಾಸ್ತ್ರ, ಚಿತ್ರಕಲಾಶಾಸ್ತ್ರ, ಪೇಂಟಿಂಗ್, ಫೋಟೋಗ್ರಾಫಿ, ಯಾವುದೇ ಲಲಿತಕಲಾಶಾಸ್ತ್ರ, ಪ್ರಸೂತಿಶಾಸ್ತ್ರ, ಗೈನೋಕಾಲಜಿ, ಸಮಾಜಶಾಸ್ತ್ರ (Sociology). ರಾಜಕಾರಣಶಾಸ್ತ್ರ, ಫ್ರೆಂಚ್, ಜರ್ಮನ್, ಭೂಮಿತಿ, ಗೃಹವಿಜ್ಞಾನ, ಪತ್ರಿಕೋದ್ಯಮಶಾಸ್ತ್ರ, ಟೆಕ್ಸ್‌ಟೈಲ್‌ಟೆಕ್ನಾಲಜಿ, ರಬ್ಬರ್ ಟೆಕ್ನಾಲಜಿ, ಪೇಂಟಿಂಗ್ ಟೆಕ್ನಾಲಜಿ.

ಶನಿ :— ರಸಾಯನಶಾಸ್ತ್ರ, ಸ್ಯಾನಿಟರಿಶಾಸ್ತ್ರ, ಇತಿಹಾಸ, ಹೋಮಿಯೋಪತಿ, ಮಾನವಶಾಸ್ತ್ರ, (Anthropology), ತತ್ತ್ವಜ್ಞಾನ, ಸಮಾಜ ಕಲ್ಯಾಣ, ಕೃಷಿವಿಜ್ಞಾನ, ಪಶುವಿಜ್ಞಾನ (Veterinary and Animal Husbandary), ಹೈನಶಾಸ್ತ್ರ, ಪ್ರಾಚ್ಯವಸ್ತು ಸಂಶೋಧನಾಶಾಸ್ತ್ರ, ಎಪಿಗ್ರಾಫಿ, ಮೆಕ್ಯಾನಿಕಲ್, ಆಟೋಮೊಬಾಯಿಲ್, ಕೆಮಿಕಲ್ ಇಂಜನಿಯರಿಂಗ್, ತಾಂತ್ರಿಕ ಶಿಕ್ಷಣ.

ರಾಹು:— ತಾಂತ್ರಿಕ ಶಿಕ್ಷಣ, ಪೇಂಟಿಂಗ್, ಡ್ರಾಯಿಂಗ್ ಶಿಕ್ಷಣ, ಮಂಗಳನ ಗುಣಧರ್ಮಕ್ಕೆ ಸಂಬಂಧಿಸಿದ ಕೋರ್ಸುಗಳು, ಯುನಾನಿ, ಸಸ್ಯ ರೋಗಶಾಸ್ತ್ರ, ಕೀಟಶಾಸ್ತ್ರ.

ಕೇತು :— ತತ್ತ್ವಜ್ಞಾನ, ಶನಿಯ ಗುಣಧರ್ಮದಂತೆ ಇರುವ ಕೋರ್ಸುಗಳು.

## ಲಗ್ನಗಳ ಮೇಲಿಂದ ಶಿಕ್ಷಣದ ವಿಚಾರ

ಯಾವನೊಬ್ಬ ವಿದ್ಯಾರ್ಥಿಯ ಶಿಕ್ಷಣದ ವಿಷಯವಾಗಿ ಜಾತಕವನ್ನು ಪರಿಶೀಲಿಸುವಾಗ ಆ ಜಾತಕನ ಜಾತಕದಲ್ಲಿ ಶಿಕ್ಷಣಕಾರಕ ಅಥವಾ ವಿದ್ಯಾಕಾರಕ ಗ್ರಹಗಳ ಬಲಾಬಲ ಹೇಗಿದೆಯೆಂಬುದನ್ನು ಮೊದಲು ಪರೀಕ್ಷಿಸಬೇಕಾಗುತ್ತದೆ. ಈ ಶಿಕ್ಷಣಕಾರಕ ಗ್ರಹಗಳು ಭಿನ್ನ ಭಿನ್ನ ಲಗ್ನಗಳಿಗೆ ಬೇರೆ ಬೇರೆಯಿರುತ್ತವೆ. ಈ ಶಿಕ್ಷಣಕಾರಕ ಗ್ರಹಗಳು ಮಾತ್ರ ಜಾತಕದಲ್ಲಿ ಬಲಾಢ್ಯವಿದ್ದರೆ ಸಾಕು, ಆ ಜಾತಕನ ಶಿಕ್ಷಣ ಪೂರ್ತಿಯಾಗುತ್ತದೆ. ಉದಾಹರಣೆಗೆ: ವೃಷಭ ಲಗ್ನದ ಜಾತಕನಿಗೆ ಬುಧನು ಶಿಕ್ಷಣಕಾರಕ ಗ್ರಹವಾಗುತ್ತಾನೆ. ಬುಧನು ಬಲಾಢ್ಯನಿದ್ದು ಮಿಕ್ಕ ಯಾವುದೇ ಗ್ರಹವು ದುರ್ಬಲವಿದ್ದಾಗ್ಯೂ ಆ ಜಾತಕನ ಶಿಕ್ಷಣ ಪೂರ್ತಿಯಾಗುತ್ತದೆ. ಪ್ರಸ್ತುತ ಪ್ರಕರಣದಲ್ಲಿ ವಿಭಿನ್ನ ಲಗ್ನಗಳಿಗೆ ಶಿಕ್ಷಣಕಾರಕ ಗ್ರಹಗಳಾಗುವವು ಎಂಬುದನ್ನು ಈ ಕೆಳಗಿನಂತೆ ಕೊಡಲಾಗಿದೆ :

೧) ಮೇಷ ಲಗ್ನಕ್ಕೆ ರವಿ–ಶುಕ್ರರು ಶಿಕ್ಷಣಕಾರಕ ಗ್ರಹಗಳಾಗಿರು

ತ್ತಾರೆ. ಈ ಎರಡೂ ಗ್ರಹಗಳು ಜಾತಕದಲ್ಲಿ ಬಲಿಷ್ಠವಿದ್ದರೆ ಆ ಜಾತಕನ ಶಿಕ್ಷಣ ಪೂರ್ತಿಯಾಗುತ್ತದೆ.

೨) ವೃಷಭ ಲಗ್ನಕ್ಕೆ ಬುಧನೋರ್ವನೇ ಶಿಕ್ಷಣಕಾರಕ ಗ್ರಹವಾಗಿದ್ದಾನೆ. ಜಾತಕದಲ್ಲಿ ಬುಧನು ಬಲಿಷ್ಠನಿದ್ದರೆ ಆ ಜಾತಕನ ಶಿಕ್ಷಣವು ಪೂರ್ತಿಯಾಗುತ್ತದೆ.

೩) ಮಿಥುನ ಲಗ್ನಕ್ಕೆ ಶುಕ್ರ-ಚಂದ್ರರು ಶಿಕ್ಷಣಕಾರಕ ಗ್ರಹಗಳಾಗಿರುತ್ತಾರೆ. ಈ ಎರಡೂ ಗ್ರಹಗಳು ಜಾತಕದಲ್ಲಿ ಬಲಿಷ್ಠವಿದ್ದರೆ ಆ ಜಾತಕನ ಶಿಕ್ಷಣ ಪೂರ್ತಿಯಾಗುತ್ತದೆ.

೪) ಕರ್ಕ ಲಗ್ನಕ್ಕೆ ಕುಜ-ರವಿಯರು ಶಿಕ್ಷಣಕಾರಕ ಗ್ರಹಗಳಿರುತ್ತಾರೆ. ಈ ಎರಡೂ ಗ್ರಹಗಳು ಜಾತಕದಲ್ಲಿ ಬಲಿಷ್ಠವಿದ್ದ ಜಾತಕನ ಶಿಕ್ಷಣ ಪೂರ್ತಿಯಾಗುತ್ತದೆ.

೫) ಸಿಂಹ ಹಾಗೂ ಕುಂಭ ಲಗ್ನಗಳಿಗೆ ಬುಧ-ಗುರುಗಳು ಶಿಕ್ಷಣ ಕಾರಕ ಗ್ರಹಗಳಿರುತ್ತಾರೆ. ಈ ಎರಡೂ ಗ್ರಹಗಳು ಜಾತಕದಲ್ಲಿ ಬಲಾಢ್ಯ ವಿದ್ದರೆ ಜಾತಕನ ಶಿಕ್ಷಣವು ಪೂರ್ತಿಯಾಗುತ್ತದೆ.

೬) ಕನ್ಯಾ ಹಾಗೂ ಮಕರ ಈ ಲಗ್ನಗಳಿಗೆ ಶುಕ್ರ-ಶನಿಯರು ವಿದ್ಯಾ ಯೋಗಕಾರಕ ಗ್ರಹಗಳಿದ್ದು ಜಾತಕದಲ್ಲಿ ಈ ಎರಡೂ ಗ್ರಹಗಳು ಬಲಾಢ್ಯ ವಿದ್ದ ಜಾತಕನ ಶಿಕ್ಷಣ ಪೂರ್ತಿಯಾಗುತ್ತದೆ.

೭) ತುಲಾ ಹಾಗೂ ಧನು ಈ ಲಗ್ನಗಳಿಗೆ ಶನಿ-ಮಂಗಳರು ವಿದ್ಯಾ ಯೋಗಕಾರಕ ಗ್ರಹಗಳಿರುತ್ತಾರೆ. ಈ ಎರಡೂ ಗ್ರಹಗಳು ಜಾತಕದಲ್ಲಿ ಬಲಾಢ್ಯವಿದ್ದರೆ ಆ ಜಾತಕನ ಶಿಕ್ಷಣ ಪೂರ್ತಿಯಾಗುತ್ತದೆ.

೮) ವೃಶ್ಚಿಕ ಲಗ್ನಕ್ಕೆ ಗುರು ಒಬ್ಬನೇ ವಿದ್ಯಾಯೋಗಕಾರಕ ಗ್ರಹ ವಾಗಿರುತ್ತಾನೆ. ಜಾತಕದಲ್ಲಿ ಗುರುವು ಬಲಿಷ್ಠನಿದ್ದರೆ ಆ ಜಾತಕನ ಶಿಕ್ಷಣವು ಪೂರ್ತಿಯಾಗುತ್ತದೆ.

೯) ಮೀನ ಲಗ್ನಕ್ಕೆ ಶಶಿ-ಅಂಗಾರಕರು ವಿದ್ಯಾಯೋಗಕಾರಕ ಗ್ರಹ ಗಳಾಗಿರುತ್ತಾರೆ. ಈ ಎರಡೂ ಗ್ರಹಗಳು ಜಾತಕದಲ್ಲಿ ಬಲಿಷ್ಠವಾಗಿದ್ದರೆ ಆ ಜಾತಕನ ಶಿಕ್ಷಣ ಪೂರ್ತಿಯಾಗುತ್ತದೆ.

ಹೀಗೆ ಭಿನ್ನ ಭಿನ್ನ ಲಗ್ನಗಳಿಗೆ ವಿದ್ಯಾಕಾರಕ ಗ್ರಹಗಳಾಗಿದ್ದು ಆಯಾ ಲಗ್ನದ ಜಾತಕನಿಗೆ ಆಯಾ ವಿದ್ಯೆಗೆ ಕಾರಕಗ್ರಹಗಳು ಬಲಿಷ್ಠವಿದ್ದರೆ ಆ ಜಾತಕನ ಶಿಕ್ಷಣ ಪೂರ್ತಿಯಾಗುತ್ತದೆ.

## ಸ್ಥಾನವಲ್ಲಿರುವ ಗ್ರಹಗಳ ಮೇಲಿಂದ ಶಿಕ್ಷಣದ ವಿಚಾರ

ಯಾವದೇ ವಿದ್ಯಾರ್ಥಿಯ ಶಿಕ್ಷಣದ ವಿಷಯವಾಗಿ ಪರಿಶೀಲಿಸುವಾಗ ಸ್ಥಾನದಲ್ಲಿರುವ ಗ್ರಹಗಳ ಬಲಾಬಲವನ್ನು ಕುರಿತು ಪರಿಶೀಲಿಸುವದು ಮಹತ್ವದ ಸಂಗತಿಯಾಗಿದೆ. ಏಕೆಂದರೆ ಸ್ಥಾನಾಧೀಶನು ಎಷ್ಟೇ ಬಲಾಢ್ಯನಿದ್ದರೂ ಕೂಡ ಸ್ಥಾನದಲ್ಲಿರುವ ಗ್ರಹಗಳ ಪರಿಣಾಮವು ಕೂಡ ಅನೇಕ ಸಲ ಪರಿಣಾಮನ್ನುಂಟುಮಾಡುತ್ತದೆ. ಉದಾಹರಣೆಗೆ: ಮೇಷ ಲಗ್ನದ ಲಗ್ನದಲ್ಲಿ ಉಚ್ಚರಾಶಿಯ ರವಿಯಿದ್ದು ಪಂಚಮದಲ್ಲಿ ಸಿಂಹರಾಶಿಯ ಶನಿಯಿರುವ ಜಾತಕವಿದೆಯೆಂದು ತಿಳಿಯಿರಿ. ಇಲ್ಲಿ ಪಂಚಮಾಧೀಶನಾದ ರವಿಯು ಬಲಾಢ್ಯನಾಗಿ ಲಗ್ನದಲ್ಲಿರುವ ಕಾರಣ ಈ ಜಾತಕನ ಶಿಕ್ಷಣವೇನೋ ಪೂರ್ತಿಯಾಗುತ್ತದೆ ನಿಜ. ಆದರೆ ಪಂಚಮದಲ್ಲಿ ನೀಚರಾಶಿಯ ಶತ್ರುಕ್ಷೇತ್ರಿ ಶನಿಯಿರುವ ಕಾರಣ ಜಾತಕನ ಶಿಕ್ಷಣ–ಕೋರ್ಸುಗಳಿಗೆ ಅಡೆ–ತಡೆಗಳು ಬಹಳ. ಆದುದರಿಂದ ಈ ಪ್ರಕರಣದಲ್ಲಿ ಯಾವ ಗ್ರಹಗಳು ಯಾವ ಸ್ಥಾನದಲ್ಲಿದ್ದರೆ ಏನು ಫಲ ಕೊಡುವವೆಂಬುದನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

ರವಿ :— ಸ್ವಕ್ಷೇತ್ರೀಯ ಉಚ್ಚರಾಶಿಯ ಮಿತ್ರಕ್ಷೇತ್ರೀಯ ರವಿಯು ಪಂಚಮದಲ್ಲಿದ್ದರೆ ನಿರ್ವಿಘ್ನದಿಂದ ಶಿಕ್ಷಣವು ಪೂರ್ತಿಯಾಗುತ್ತದೆ. ಇದರಂತೆ ಉಚ್ಚ ಇಲ್ಲವೆ ಸ್ವಕ್ಷೇತ್ರೀಯ ರವಿಯು ಲಗ್ನ, ಭಾಗ್ಯ, ದ್ವಿತೀಯ, ದಶಮ ಸ್ಥಾನದಲ್ಲಿದ್ದರೂ ಶಿಕ್ಷಣದ ಪ್ರಗತಿಗೆ ಪೋಷಕವಾಗುತ್ತದೆ. ಆದರೆ ನೀಚ, ಶತ್ರುಕ್ಷೇತ್ರಿಗಳ ರವಿಯು ಪಂಚಮ, ದ್ವಿತೀಯ, ತೃತೀಯ, ಲಾಭದಲ್ಲಿದ್ದರೆ ಶಿಕ್ಷಣದ ಪ್ರಗತಿಗೆ ಹಾನಿಕಾರಕವು.

**ಚಂದ್ರ** :— ಉಚ್ಚ, ಸ್ವಕ್ಷೇತ್ರಿ ರಾಶಿಗಳ ಚಂದ್ರನು ಪಂಚಮದಲ್ಲಿದ್ದರೆ ನಿರ್ವಿಘ್ನವಾಗಿ ಶಿಕ್ಷಣ ಪೂರ್ತಿಯಾಗುತ್ತದೆ. ಇದರಂತೆಯೇ ಉಚ್ಚ, ಸ್ವಕ್ಷೇತ್ರಿ ರಾಶಿಯ ಚಂದ್ರನು ದ್ವಿತೀಯ, ಚತುರ್ಥ, ಲಾಭಗಳಲ್ಲಿದ್ದರೂ

ಶಿಕ್ಷಣದ ಪ್ರಗತಿಗೆ ಪೋಷಕನು. ಆದರೆ ನೀಚ, ಪಾಪ ಗ್ರಹದೃಷ್ಟ, ಪಾಪ ದೃಷ್ಟ, ಪಾಪಗ್ರಹ ಮಧ್ಯ, ಶತ್ರುಕ್ಷೇತ್ರಿ, ಪಾಪಗ್ರಹಯುತಿಯಾದ ಚಂದ್ರನು ಪಂಚಮ, ದ್ವಿತೀಯ, ಲಾಭ, ತೃತೀಯ, ಚತುರ್ಥದಲ್ಲಿದ್ದರೂ ಶಿಕ್ಷಣದ ಪ್ರಗತಿಗೆ ಹಾನಿಕಾರಕವು.

ಕುಜ :— ಉಚ್ಚ, ಸ್ವಕ್ಷೇತ್ರೀಯ, ಮಿತ್ರಕ್ಷೇತ್ರೀಯ ಕುಜನು ಲಗ್ನ, ಪಂಚಮ, ದ್ವಿತೀಯ, ತೃತೀಯ, ದಶಮಗಳಲ್ಲಿದ್ದರೆ ನಿರ್ವಿಘ್ನವಾಗಿ ಶಿಕ್ಷಣ ಪೂರ್ತಿಯಾಗುತ್ತದೆ. ಆದರೆ ಅದೇ ಕುಜನು ಶತ್ರುಕ್ಷೇತ್ರೀಯ ನೀಚರಾಶಿ, ಶತ್ರುಗ್ರಹದೃಷ್ಟ, ಶತ್ರುಗ್ರಹಮಧ್ಯದವನಾಗಿ ಲಗ್ನ, ಪಂಚಮ, ದ್ವಿತೀಯ, ದಶಮ ಈ ಸ್ಥಾನಗಳಲ್ಲಿದ್ದರೆ ಶಿಕ್ಷಣದ ಪ್ರಗತಿಗೆ ಹಾನಿಕಾರಕನು.

ಬುಧ :— ಬುಧನು ಉಚ್ಚ ಸ್ವಕ್ಷೇತ್ರೀಯನಾಗಿ ಲಗ್ನ, ದ್ವಿತೀಯ, ತೃತೀಯ, ಪಂಚಮದಲ್ಲಿದ್ದರೆ ಶಿಕ್ಷಣದ ಪ್ರಗತಿಗೆ ಪೋಷಕನಿದ್ದು ಶಿಕ್ಷಣವು ಪೂರ್ತಿಯಾಗುತ್ತದೆ. ಆದರೆ ಅದೇ ಬುಧನು ಶತ್ರುಕ್ಷೇತ್ರೀಯ ನೀಚರಾಶಿ, ಪಾಪಗ್ರಹಮಧ್ಯ, ಶತ್ರುಗ್ರಹಮಧ್ಯ, ಶತ್ರುಗ್ರಹದೃಷ್ಟನಾಗಿ ಪಂಚಮ, ದ್ವಿತೀಯದಲ್ಲಿದ್ದರೆ ಶಿಕ್ಷಣಕ್ಕೆ ಹಾನಿಕಾರಕನು.

ಗುರು :— ಯಾವುದೇ ರಾಶಿಯ ಗುರುವು ಪಂಚಮದಲ್ಲಿದ್ದರೆ ವಿದ್ಯೆಗೆ ಪೋಷಕನು. ಆದರೆ ಅದೇ ಗುರುವು ಉಚ್ಚ, ಸ್ವಕ್ಷೇತ್ರ, ಮಿತ್ರಕ್ಷೇತ್ರದವನಾಗಿ ಲಗ್ನ, ಪಂಚಮ, ಭಾಗ್ಯ, ದಶಮದಲ್ಲಿದ್ದರೆ ಶಿಕ್ಷಣದ ಪ್ರಗತಿಗೆ ಪೋಷಕನಿದ್ದು ನಿರ್ವಿಘ್ನವಾಗಿ ಶಿಕ್ಷಣವು ಪೂರ್ತಿಯಾಗುತ್ತದೆ. ಆದರೆ ನೀಚ, ಶತ್ರುಕ್ಷೇತ್ರೀಯ, ಅಸ್ತಂಗತ, ವೃದ್ಧಾಪ್ಯದವನಾಗಿ ಷಷ್ಠ, ಅಷ್ಟಮ, ವ್ಯಯದಲ್ಲಿದ್ದರೆ ಶಿಕ್ಷಣಕ್ಕೆ ಹಾನಿಕಾರಕನು.

ಶುಕ್ರ :— ಬಲಾಢ್ಯ ಶುಕ್ರನು ಅಂದರೆ ಸ್ವಕ್ಷೇತ್ರೀಯ, ಉಚ್ಚ, ಮಿತ್ರಕ್ಷೇತ್ರೀಯ ಶುಕ್ರನು ದ್ವಿತೀಯ, ತೃತೀಯ, ಪಂಚಮ, ಲಾಭಗಳಲ್ಲಿದ್ದರೆ ಶಿಕ್ಷಣದ ಪ್ರಗತಿಗೆ ಪೋಷಕನು. ಆದರೆ ಶತ್ರುಕ್ಷೇತ್ರೀಯ ನೀಚ, ಪಾಪ ಗ್ರಹಮಧ್ಯ, ಪಾಪಗ್ರಹಯುತನಾಗಿ ಪಂಚಮ, ದ್ವಿತೀಯ, ಲಾಭಗಳಲ್ಲಿದ್ದರೆ ಶಿಕ್ಷಣದ ಪ್ರಗತಿಗೆ ಹಾನಿಕಾರಕನು.

ಶನಿ :— ಉಚ್ಚ, ಸ್ವಕ್ಷೇತ್ರೀಯ ಶನಿಯು ಪಂಚಮದಲ್ಲಿದ್ದರೆ ಶಿಕ್ಷಣದ ಪ್ರಗತಿಗೆ ಪೋಷಕನು. ಆದರೆ ನೀಚ, ಶತ್ರುಕ್ಷೇತ್ರೀಯ, ಶತ್ರುಗ್ರಹ ಮಧ್ಯ, ಶತ್ರುಗ್ರಹಯುತನಾಗಿ ಪಂಚಮ, ತೃತೀಯ, ಲಾಭ, ಅಷ್ಟಮದಲ್ಲಿದ್ದರೆ ಶಿಕ್ಷಣದ ಪ್ರಗತಿಗೆ ಹಾನಿಕಾರಕನು.

ರಾಹು-ಕೇತು :— ಉಚ್ಚ, ಸ್ವಕ್ಷೇತ್ರೀಯ ರಾಹು-ಕೇತು ಪಂಚಮ ಹಾಗೂ ತೃತೀಯದಲ್ಲಿದ್ದರೆ ಶಿಕ್ಷಣಕ್ಕೆ ಲಾಭದಾಯಕರು. ಆದರೆ ಉಳಿದ ಯಾವುದೇ ರಾಶಿಗಳ ರಾಹು-ಕೇತು ಪಂಚಮದಲ್ಲಿದ್ದರೆ ಶಿಕ್ಷಣದ ಪ್ರಗತಿಗೆ ಹಾನಿಕಾರಕರು.

ಶನಿ-ಮಂಗಳ, ರವಿ-ಶನಿ, ಚಂದ್ರ-ಶನಿ, ರಾಹು-ಚಂದ್ರ, ರವಿ-ಕೇತು ಈ ಗ್ರಹಗಳ ಯುತಿಯೋಗವಾಗಲಿ, ಪ್ರತಿಯೋಗವಾಗಲಿ ಪಂಚಮ, ದ್ವಿತೀಯ, ತೃತೀಯ ಸ್ಥಾನಗಳಲ್ಲಿದ್ದರೆ ಶಿಕ್ಷಣಕ್ಕೆ ಹಾನಿಕಾರಕರು. ಅನೇಕ ಗ್ರಹಗಳ ದೃಷ್ಟಿ ಪಂಚಮ, ದ್ವಿತೀಯ, ತೃತೀಯದಲ್ಲಿದ್ದರೂ ಹಾನಿಕಾರಕವು.

ಚತುರ್ಗ್ರಹ, ಪಂಚಗ್ರಹ ಮೊದಲಾದ ಅನೇಕ ಗ್ರಹಗಳ ಯುತಿಯೋಗವು ಪಂಚಮ, ದ್ವಿತೀಯ, ತೃತೀಯದಲ್ಲಿದ್ದರೆ ಶಿಕ್ಷಣಕ್ಕೆ ಹಾನಿಕಾರಕವು.

ಗುರು-ಚಂದ್ರರ ಯುತಿಯೋಗವಾಗಲಿ, ಗುರು-ಮಂಗಳರ, ಬುಧ-ಶುಕ್ರರ ಯುತಿಯೋಗವಾಗಲಿ, ಗುರು-ರವಿಯರ ಗ್ರಹಯೋಗವಾಗಲಿ ಬಲಾಢ್ಯ ರಾಶಿಯವರಾಗಿ, ಲಗ್ನ, ದ್ವಿತೀಯ, ಪಂಚಮ, ಭಾಗ್ಯದಲ್ಲಿದ್ದರೆ ಶಿಕ್ಷಣ ಪ್ರಗತಿಗೆ ಪೋಷಕವು.

## ಭಾವೇಶನ ಮೇಲಿಂದ ಶಿಕ್ಷಣದ ವಿಚಾರ

ಸ್ಥಾನದಲ್ಲಿರುವ ಗ್ರಹಗಳಿಗಿಂತ ಸ್ಥಾನಾಧೀಶನ ಬಲಾಬಲವು ಹೆಚ್ಚು ಪರಿಣಾಮವನ್ನುಂಟುಮಾಡುತ್ತದೆ. ಈ ಮಾತು ಶಾಲೆ-ಕಾಲೇಜುಗಳ ಕೋರ್ಸುಗಳ ಅಥವಾ ಶಿಕ್ಷಣಕ್ಕೆ ಹೆಚ್ಚು ಅನ್ವಯಿಸುತ್ತದೆ. ಅದರಲ್ಲಿಯೂ ಪಂಚಮಾಧೀಶನ ಬಲಾಬಲದ ಪರಿಣಾಮವು ಶಿಕ್ಷಣ ಪೂರ್ತಿಯಾಗಲು ಹೆಚ್ಚು ಪ್ರಭಾವವನ್ನು ಬೀರುತ್ತದೆ. ಉದಾಹರಣೆಗೆ: ಸಿಂಹಲಗ್ನದ ಪಂಚಮ

ದಲ್ಲಿ ಕುಜನೂ, ಷಷ್ಠದಲ್ಲಿ ನೀಚರಾಶಿಯ ಗುರುವೂ ಇರುವ ಜಾತಕವಿದೆ ಯೆಂದು ತಿಳಿಯಿರಿ. ಇಲ್ಲಿ ಪಂಚಮಾಧೀಶನಾದ ಗುರುವು ದುರ್ಬಲನಾಗಿ ನೀಚ ರಾಶಿಯವನಾಗಿ ಷಷ್ಠದಲ್ಲಿರುವ ಕಾರಣ ಶಿಕ್ಷಣಕ್ಕೆ ಹಾನಿಕಾರಕನಿರುತ್ತಾನೆ. ಪಂಚಮಸ್ಥಾನದಲ್ಲಿ ಯೋಗಕಾರಕನೂ, ಮಿತ್ರಕ್ಷೇತ್ರೀಯನೂ, ಬಲಾಢ್ಯನೂ ಆದ ಕುಜನೂ ಇದ್ದರೂ ಕೂಡ ದುರ್ಬಲ ಪಂಚಮೇಶನ ಕಾರಣ ಶಿಕ್ಷಣಕ್ಕೆ ವಿಘ್ನಗಳು ಬಹಳ. ಪ್ರಸ್ತುತ ಪ್ರಕರಣದಲ್ಲಿ ಪಂಚಮಾಧೀಶನ ಬಲಾಬಲದ ವಿಷಯವಾಗಿ ಪರಿಶೀಲಿಸೋಣ.

೧) ಪಂಚಮೇಶನು ದುರ್ಬಲನಾಗಿ ೬, ೮, ೧೨ ಈ ಸ್ಥಾನಗಳಲ್ಲಿದ್ದರೆ ಶಿಕ್ಷಣಕ್ಕೆ ಹಾನಿಕಾರಕನು.

೨) ಪಂಚಮೇಶನು ಬಲಾಢ್ಯನಾಗಿ ೧, ೨, ೫, ೯, ೧೧ ಈ ಸ್ಥಾನಗಳಲ್ಲಿದ್ದರೆ ಶಿಕ್ಷಣಕ್ಕೆ ಪೋಷಕನು.

೩) ಪಂಚಮೇಶನು ತೃತೀಯ, ಚತುರ್ಥ, ಸಪ್ತಮ, ದಶಮದಲ್ಲಿದ್ದರೆ ಶಿಕ್ಷಣಕ್ಕೆ ಮಧ್ಯಮನು.

೪) ಪಂಚಮೇಶನು ಶುಭಗ್ರಹವಾಗಿದ್ದರೆ ಹೆಚ್ಚು ಶುಭದಾಯಕನು. ಪಾಪಗ್ರಹವಾಗಿದ್ದರೆ ಮಧ್ಯಮನು. ಆದರೆ ಅದೇ ಪಾಪಗ್ರಹ ರಾಶಿಬಲದವನಿದ್ದರೆ ಶುಭದಾಯಕನು.

೫) ಪಂಚಮೇಶನು ಸ್ಥಾನಬಲದವನೂ, ರಾಶಿಬಲದವನೂ ಇದ್ದರೆ ಶಿಕ್ಷಣ ನಿರ್ವಿಘ್ನವಾಗಿ ಪೂರ್ತಿಯಾಗುತ್ತದೆ. ಆದರೆ ಪಂಚಮೇಶನು ರಾಶಿ ಬಲದವನಿದ್ದು ಸ್ಥಾನಬಲದವನಾಗಿಲ್ಲದಿದ್ದರೆ ಶಿಕ್ಷಣ ಕೋರ್ಸ ಅರ್ಧಕ್ಕೆ ನಿಂತು ಕೆಲವು ವರ್ಷಗಳ ನಂತರ ಪೂರ್ತಿಯಾಗುತ್ತದೆ. ಮತ್ತು ಪಂಚ ಮೇಶನು ಸ್ಥಾನಬಲದವನಿದ್ದು ರಾಶಿಬಲದವನಿಲ್ಲದಿದ್ದರೆ ಅನೇಕ ವಿಘ್ನಗಳಿಂದ ಶಿಕ್ಷಣ ಪೂರ್ತಿಯಾಗುತ್ತದೆ.

೬) ಪಂಚಮೇಶನು ಪಾಪಗ್ರಹಮಧ್ಯ, ಪಾಪಗ್ರಹದೃಷ್ಟನಿದ್ದರೆ ಶಿಕ್ಷಣಕ್ಕೆ ವಿಘ್ನಗಳು ಬಹಳ.

---

# ೩. ಶಿಕ್ಷಣದಲ್ಲಿಯ ವಿವಿಧ ಕೋರ್ಸುಗಳು

ಶಿಕ್ಷಣಾರ್ಥಿಗೆ ತನ್ನ ಶಿಕ್ಷಣ (ವಿದ್ಯಾಭ್ಯಾಸ)ದಲ್ಲಿ ಬರುವ ವಿವಿಧ ಅಡೆ-ತಡೆಗಳ ವಿಶ್ಲೇಷಣೆ ಹಾಗೂ ಶಿಕ್ಷಣ ಪಡೆಯಲು ಅನುಕೂಲ ಜಾತಕದಲ್ಲಿಯ ಗ್ರಹ, ಲಗ್ನ, ಸ್ಥಾನಗಳು ಹೇಗಿರಬೇಕು ಎಂಬುದರ ವಿವೇಚನೆ ಮಾಡಿದ ನಂತರ ಈ ಪ್ರಕರಣದಲ್ಲಿ ಶಿಕ್ಷಣದಲ್ಲಿ ಯಾವ ಯಾವ ಕೋರ್ಸುಗಳಿವೆ, ವಿವಿಧ ಹಾಗೂ ವಿಶಿಷ್ಟ ಕೋರ್ಸುಗಳ ಶಿಕ್ಷಣದ ಜ್ಞಾನ ಪಡೆಯಬೇಕಾದರೆ ಜಾತಕವೆಂತಿರಬೇಕು, ಗ್ರಹ, ಲಗ್ನ, ಸ್ಥಾನಗಳು ಎಂತಿರಬೇಕು ಈ ಮೊದಲಾದ ವಿಷಯಗಳನ್ನು ಕುರಿತು ಸುದೀರ್ಘ ವಿವರಣೆಯನ್ನು ಈ ಪ್ರಕರಣದಲ್ಲಿ ಕೊಡಲಾಗಿದೆ.

**ಕೋರ್ಸುಗಳಲ್ಲಿಯ ವೈವಿಧ್ಯತೆ :—** ಯಾವುದೇ ವಿಷಯ ತೆಗೆದು ಕೊಳ್ಳಲಿ ಅಥವಾ ಯಾವುದೇ ಶಿಕ್ಷಣವಿರಲಿ ಸಾಮಾನ್ಯವಾಗಿ ನಾವು ಮೂರು ರೀತಿಯಿಂದ ವಿಂಗಡಿಸಬಹುದು:—೧) ಪದವೀ ಕೋರ್ಸು, ೨) ಡಿಪ್ಲೋಮಾ ಕೋರ್ಸು, ೩) ಅಲ್ಪಾವಧಿಯ ಸರ್ಟಿಫಿಕೇಟ್ ಕೋರ್ಸು, ಈ ಮೂರೂ ಪ್ರಕಾರದ ಕೋರ್ಸುಗಳ ಜ್ಞಾನ ಪಡೆಯಲು ಜಾತಕದಲ್ಲಿ ಇರಬೇಕಾದುದೇನು ಎಂಬುದನ್ನು ವಿವೇಚಿಸುವಾ.

### ೧. ಪದವೀ ಕೋರ್ಸುಗಳನ್ನು ಪಡೆಯುವ ಯೋಗಗಳು

ಪದವಿ ಹಾಗೂ ಸ್ನಾತಕೋತ್ತರ ಪದವಿ ಪಡೆಯುವ ವಿದ್ಯಾರ್ಥಿಗಳ ಜಾತಕದಲ್ಲಿ ಈ ಕೆಳಗಿನ ಸಂಗತಿಗಳ ಅನುಕೂಲವಿರಬೇಕು.

೧) ಪಂಚಮಸ್ಥಾನ-ಪಂಚಮೇಶ ಮತ್ತು ದ್ವಿತೀಯ ಸ್ಥಾನ-ದ್ವಿತೀಯೇಶರು ಪೂರಕರೂ, ಪೋಷಕರೂ ಇದ್ದು ಬಲಾಢ್ಯರಿರಬೇಕು.

೨) ವಿದ್ಯಾಧಿಪತಿಯಾದ ಗುರುವೂ ಬುದ್ಧಿಯ ಅಧಿಪತಿಯಾದ ಬುಧನೂ ಜಾತಕದಲ್ಲಿ ಬಲಾಢ್ಯರಿರಬೇಕು.

೩) ವಿದ್ಯಾರ್ಥಿ ಆಯ್ದುಕೊಂಡ ವಿಷಯದ ಹಾಗೂ ಕೋರ್ಸಿನ ಕಾರಕಗ್ರಹಗಳು ಬಲಾಢ್ಯವಿರಬೇಕು.

೪) ಪಂಚಮ ಸ್ಥಾನದಲ್ಲಿ ದುರ್ಬಲ ಹಾಗೂ ಪಂಚಮೇಶನ ಶತ್ರು ಗ್ರಹವಿರಕೂಡದು.

೫) ಜಾತಕದಲ್ಲಿಯ ಯೋಗಕಾರಕ ಗ್ರಹಗಳು ಬಲಾಢ್ಯವಿರಬೇಕು.

೬) ಲಗ್ನೇಶನು ದುರ್ಬಲನಿರಕೂಡದು.

೭) ವಿದ್ಯಾರ್ಥಿದಶೆಯಲ್ಲಿ ಅರ್ಥಾತ್ ಆತನ ಕೋರ್ಸು ಮುಗಿಯುವ ಅವಧಿಯ ವರೆಗೆ ಗೋಚರೀ ಗ್ರಹಗಳು ಹಾಗೂ ಯೋಗಕಾರಕ ಗ್ರಹಗಳ ದೆಶೆ-ಅಂತರ್ದೆಶೆಗಳು ಶುಭವಿರಬೇಕು.

೮) ಸಾಡೇಸಾತಿ ಮೊದಲಾದ ಅನಿಷ್ಟ ಕಾಲವಿರಕೂಡದು.

ಹೀಗೆ ಮೇಲ್ಕಂಡ ಎಂಟು ಸಂಗತಿಗಳು ಪೋಷಕವಿದ್ದ ಯಾವುದೇ ವಿದ್ಯಾರ್ಥಿಯು ಯಾವದೆ ಪದವಿಯನ್ನು ಪಡೆಯಬಹುದು.

## ೨. ಡಿಪ್ಲೋಮಾ ಕೋರ್ಸು ಪಡೆಯುವ ಯೋಗಗಳು

ಡಿಪ್ಲೋಮಾ ಶಿಕ್ಷಣ ಹಾಗೂ ಪದವೀ ಕೋರ್ಸುಗಳಲ್ಲಿಯ ಮುಖ್ಯ ಭೇದವೆಂದರೆ ಕೋರ್ಸುಗಳಲ್ಲಿರುವ ಅವಧಿಯ ಅಂತರ. ಐದಾರು ವರ್ಷಣದ ಯಾವುದೊಂದು ವಿಷಯದ ಜ್ಞಾನವನ್ನು ಪಡೆಯುವ ಅವಧಿಗೆ ಪದವೀ ಕೋರ್ಸು ಎಂತಲೂ ಎರಡು–ಮೂರು ವರ್ಷದ ಶಿಕ್ಷಣದ ಯಾವುದೊಂದು ವಿಷಯದ ಜ್ಞಾನವನ್ನು ಪಡೆಯುವ ಅವಧಿಗೆ ಡಿಪ್ಲೋಮಾ ಕೋರ್ಸು ಎಂತಲೂ ಎನ್ನಬಹುದು. ಜ್ಯೋತಿಷ್ಯ ದೃಷ್ಟಿಯಲ್ಲಿ ಜಾತಕದಲ್ಲಿ ವಿಶೇಷ ಅಂತರವಾಗಲೀ ಗ್ರಹಮಾನಗಳಲ್ಲಿಯ ವಿಶೇಷ ಭಿನ್ನತೆಯಾಗಲೀ ಇರುವುದಿಲ್ಲ. ಆದರೆ ಕೆಲವು ವಿಶಿಷ್ಟ ಯೋಗಗಳು ಇರುವುದು ಕಂಡುಬರುತ್ತದೆ.

೧) ಗುರು ರಾಶಿಬಲದವನಿದ್ದರೂ ಸ್ಥಾನಬಲದವನಿರುವದಿಲ್ಲ. ಆದರೆ ಬುಧನು ರಾಶಿಬಲದವನೂ, ಸ್ಥಾನಬಲದವನೂ ಇರುತ್ತಾನೆ.

೨) ಪಂಚಮೇಶನು ಬಲಾಢ್ಯನಿದ್ದು ಪಂಚಮಸ್ಥಾನದಲ್ಲಿ ದುರ್ಬಲ ಗ್ರಹವಿರಬಹುದು. ಉದಾಹರಣೆಗೆ:— ವೃಶ್ಚಿಕಲಗ್ನದ ಪಂಚಮದಲ್ಲಿ ಶನಿ, ರಾಹು ಇದ್ದು ಪಂಚಮೇಶನಾದ ಗುರುವು ಬಲಾಢ್ಯನಾಗಿ ಭಾಗ್ಯದಲ್ಲಿರು

ವಮ ಅಥವಾ ಪಂಚಮದಲ್ಲಿ ಬಲಾಢ್ಯ ಗ್ರಹವಿದ್ದು ಪಂಚಮೇಶ ದುರ್ಬಲನಿರುವದು. ಧನುಲಗ್ನದ ಪಂಚಮದಲ್ಲಿ ಬಲಾಢ್ಯ ಗುರುವಿದು ಪಂಚಮೇಶನಾದ ಕುಜನು ನೀಚರಾಶಿಯವನಾಗಿ ಅಷ್ಟಮದಲ್ಲಿರುವನು.

೩) ಗೋಚಾರೀಗ್ರಹಗಳು ವಿದ್ಯಾರ್ಥಿ ದೆಶೆಯಲ್ಲಿ ಪ್ರತಿಕೂಲವಿರ್ಬವರು.

೪) ತಾನು ಆಯ್ದುಕೊಂಡ ವಿಷಯದ ಅಥವಾ ಕೋರ್ಸಿನ ಕಾರಕ ಗ್ರಹಗಳು ಬಲಾಢ್ಯವಿರಬೇಕು.

ಹೀಗೆ ಮೇಲ್ಕಂಡ ನಾಲ್ಕು ಸಂಗತಿಗಳು ಅನುಕೂಲವಿದ್ದ ಯಾವುದೇ ವಿದ್ಯಾರ್ಥಿಯು ಡಿಪ್ಲೋಮಾ ಕೋರ್ಸನ್ನು ಮುಗಿಸಬಹುದು.

## ೩. ಅಲ್ಪಾವಧಿ ಸರ್ಟಿಫಿಕೇಟ್ ಕೋರ್ಸ್ ಪಡೆಯುವ ಯೋಗಗಳು

ಆರು ತಿಂಗಳುಗಳಿಂದ ಹದಿನೆಂಟು ತಿಂಗಳವರೆಗಿನ ಯಾವುದಾದರೊಂದು ಅಲ್ಪಾವಧಿಯ ಸರ್ಟಿಫಿಕೇಟ್ ಕೋರ್ಸುಗಳನ್ನು ಮುಗಿಸಲು ನಿರ್ದಿಷ್ಟ ಯೋಗವುಳ್ಳ ಜಾತಕವೇ ಇರಬೇಕೆಂಬ ನಿಯಮವಿಲ್ಲ. ಕೇವಲ ಎರಡೇ ಎರಡು ಸಂಗತಿಗಳು ಪೂರಕವಿದ್ದರೆ ಸಾಕಾಗುತ್ತದೆ. ೧) ಯಾವ ಕೋರ್ಸು ಅಥವಾ ಯಾವ ವಿಷಯದಲ್ಲಿ ಜ್ಞಾನಾರ್ಜನೆ ಪಡೆಯಬೇಕಾಗಿದೆಯೋ ಆ ಕೋರ್ಸಿನ ಆ ವಿಷಯದ ಕಾರಕಗ್ರಹವು ಜಾತಕದಲ್ಲಿ ಅನು-ಕೂಲವಿರಬೇಕು. ಆ ಕಾರಕಗ್ರಹ ಕೇವಲ ರಾಶಿಬಲದ್ದಿದ್ದರೂ ನಡೆದೀತು. ೨) ಎರಡನೆಯದಾಗಿ ಕೋರ್ಸು ಮುಗಿಯುವ ಅವಧಿಯ ವರೆಗೆ ಗೋಚಾರೀಗ್ರಹವು ಅನುಕೂಲವಿರಬೇಕು. ಅದರಲ್ಲಿಯೂ ಗೋಚಾರಿಯಿಂದ ಗುರುವು ಅನುಕೂಲವಿರಬೇಕು.

ಹೀಗೆ ಪದವಿ, ಡಿಪ್ಲೋಮಾ, ಸರ್ಟಿಫಿಕೇಟ್ ಕೋರ್ಸುಗಳನ್ನು ಪಡೆಯಲು ಜಾತಕ ಎಂತಿರಬೇಕು, ಗ್ರಹಮಾನ ಹೇಗಿರಬೇಕು ಎಂಬುದರ ವಿವರಣೆ ಈ ವರೆಗೆ ವಿವರಿಸಿದ್ದಾಯಿತು. ಆದರೆ ನಮ್ಮ ಪೃಚ್ಛಕರ ಪ್ರಶ್ನೆಗಳು, ಸಮಸ್ಯೆಗಳು ಬಹಳ ಸೂಕ್ಷ್ಮವಿರುತ್ತವೆ. ಅವರ ಪ್ರಶ್ನೆಗಳೆಂದರೆ, "ಯಾವ ಯಾವ ಕೋರ್ಸುಗಳನ್ನು ಆಯ್ದುಕೊಳ್ಳಬೇಕು, ಯಾವ ವಿಷಯಗಳನ್ನು ತೆಗೆದುಕೊಳ್ಳಬೇಕು ಎಂಬಿತ್ತೆ ಮೊದಲಾದವು.

ಇವುಗಳಿಗೆ ಉತ್ತರ ಕೊಡುವದು ನಿಜವಾಗಿಯೂ ಕ್ಲಿಷ್ಟವಾಗಿರುತ್ತದೆ. ಏಕೆಂದರೆ ಜಾತಕದಲ್ಲಿ ಯಾವುದೊಂದು ಗ್ರಹ ಬಲಾಢ್ಯವಿದ್ದರೆ ನಿರ್ದಿಷ್ಟವಾದ ವಿಷಯಗಳಲ್ಲಿ ಮಾತ್ರ ಜ್ಞಾನ ಲಭಿಸುತ್ತದೆ ಎಂದು ಹೇಳುದದು ಕಠಿಣವಿರುತ್ತದೆ. ಏಕೆಂದರೆ ಒಂದೊಂದು ಗ್ರಹಕ್ಕೆ ಅನೇಕ ವಿಷಯಗಳು, ಅನೇಕ ಕೋರ್ಸುಗಳು ಕಾರಕವಿರುತ್ತವೆ. ಅರ್ಥಾತ್ ಯಾವುದಾದರೊಂದು ಗ್ರಹವು ಅನೇಕ ವಿಷಯುಗಳಿಗೆ ಕಾರಕವಿರುತ್ತದೆ. ಉದಾಹರಣೆಗೆ: ಜಾತಕದಲ್ಲಿ ಬುಧನು ಬಲಾಢ್ಯನಿದ್ದರೆ ಮ್ಯಾಥಮ್ಯಾಟಿಕ್ಸ್, ಭಾಷಾಶಾಸ್ತ್ರ, ಅರ್ಥಶಾಸ್ತ್ರ, ಪೇಪರ ಟೆಕ್ನಾಲಜಿ, ಬ್ಯಾಂಕಿಂಗ್, ಅಕೌಂಟನ್ಸಿ, ಸಂಖ್ಯಾಶಾಸ್ತ್ರ ಮೊದಲಾದ ವಿಷಯಗಳಲ್ಲಿಯೂ ಆರ್ಟ್ಸ್, ಕಾಮರ್ಸ ಮೊದಲಾದ ಕೋರ್ಸುಗಳಲ್ಲಿಯೂ ಜ್ಞಾನಪಡೆಯಬಹುದೆಂದು ಹೇಳಬಹುದು. ಇದೂ ಅಲ್ಲದೆ ಯಾವುದೊಂದು ಕೋರ್ಸಿಗೆ ಅನೇಕ ಗ್ರಹಗಳು ಕಾರಕವಿರುತ್ತವೆ. ಉದಾಹರಣೆಗೆ:— ಅಲೋಪಥಿಯ ವೈದ್ಯಕೀಯ ಶಿಕ್ಷಣವನ್ನೇ ತೆಗೆದುಕೊಳ್ಳಿ. ಇಲ್ಲಿ ಜೀವ ಶಾಸ್ತ್ರಕ್ಕೆ ರವಿಯೂ, ಸಸ್ಯಶಾಸ್ತ್ರಕ್ಕೆ ಚಂದ್ರನೂ, ಶಸ್ತ್ರಚಿಕಿತ್ಸಾ ಶಾಸ್ತ್ರಕ್ಕೆ ಕುಜನೂ, ಗೈನಾಕಾಲಜಿಗೆ ಶುಕ್ರನೂ, ರಸಾಯನ ಶಾಸ್ತ್ರಕ್ಕೆ ಶಾಸ್ತ್ರಕ್ಕೆ ಶನಿಯೂ, ಔಷಧಿಗೆ ಚಂದ್ರನೂ ಕಾರಕರಿರುತ್ತಾರೆ. ಹೀಗೆ ಯಾವುದೊಂದು ಕೋರ್ಸಿಗೆ ಅನೇಕ ಗ್ರಹಗಳು ಕಾರಕವಿರುತ್ತವೆ. ಆದುದರಿಂದ ಯಾವ ಯಾವ ಕೋರ್ಸುಗಳನ್ನು ಆಯ್ದುಕೊಳ್ಳಬೇಕು ಹಾಗೂ ಯಾವ ವಿಷಯಗಳನ್ನು ಆಯ್ದುಕೊಳ್ಳಬೇಕು ಎಂಬ ಪ್ರಶ್ನೆಗಳಿಗೆ ಉತ್ತರಿಸದೆ ನಿರ್ದಿಷ್ಟ ಕೋರ್ಸುಗಳ ನಿರ್ದಿಷ್ಟ ವಿಷಯಗಳ ಜ್ಞಾನ ಲಭಿಸುವದೋ ಹೇಗೆ ಎಂಬುದನ್ನು ಹೇಳಬಹುದು. ಇದೂ ಅಲ್ಲದೆ ಯಾವ ಯಾವ ಕೋರ್ಸುಗಳನ್ನು ಆಯ್ದುಕೊಳ್ಳಲು ಜಾತಕ ಹೇಗಿರಬೇಕು, ಕಾರಕಗ್ರಹ, ಲಗ್ನ, ಸ್ಥಾನ, ರಾಶಿ ಎಂತಿರಬೇಕು, ಯಾವ ಜಾತಕನು ಯಾವ ಯಾವ ಕೋರ್ಸ ತೆಗೆದುಕೊಳ್ಳಬೇಕಾದರೆ ಯಾವ ಯಾವ ಯೋಗವಿರಬೇಕು ಮೊದಲಾದ ವಿಷಯಗಳನ್ನು ಕುರಿತು ಇಲ್ಲಿ ವಿವೇಚಿಸಲಾಗಿದೆ.

### ಕೋರ್ಸುಗಳಲ್ಲಿಯ ಪ್ರಕಾರಗಳು

ಕೋರ್ಸುಗಳಲ್ಲಿ ಅನೇಕ ಪ್ರಕಾರಗಳಿದ್ದರೂ ನಾವು ಅವುಗಳನ್ನು ಹದಿನಾರು ವರ್ಗಗಳನ್ನಾಗಿ ವಿಂಗಡಿಸಬಹುದು.

೧) ಆರ್ಟ್ಸ್ ಕೋರ್ಸ್, ೨) ಸೈನ್ಸ ಕೋರ್ಸ್, ೩) ವಾಣಿಜ್ಯ ಕೋರ್ಸ್, ೪) ಕಾಯ್ದೆ ಕೋರ್ಸ್, ೫) ಇಂಜನಿಯರಿಂಗ ಕೋರ್ಸ (ತಾಂತ್ರಿಕ ಶಿಕ್ಷಣ ಕೋರ್ಸ), ೬) ವೈದ್ಯಕೀಯ ಕೋರ್ಸ್, ೭) ಕೃಷಿ ಕೋರ್ಸ್, ೮) ಪಶುವೈದ್ಯ ಹಾಗೂ ಸಂಗೋಪನ ಕೋರ್ಸ್, ೯) ಶಿಕ್ಷಕರ ತರಬೇತಿ ಕೋರ್ಸ್, ೧೦) ಶಾರೀರಿಕ ಶಿಕ್ಷಣದ ಕೋರ್ಸ್, ೧೧) ಸೈನಿಕ ಶಿಕ್ಷಣ ಕೋರ್ಸ್, ೧೨) ಸ್ಥಾನಿಕ ಸಂಸ್ಥೆಯ ನೌಕರಿಯ ಶಿಕ್ಷಣ, ೧೩) ಲಲಿತಕಲಾ ಶಿಕ್ಷಣ, ೧೪) ವೈದಿಕ ಶಿಕ್ಷಣ, ೧೫) ಗೃಹ ವಿಜ್ಞಾನ, ೧೬) ಕ್ರಾಫ್ಟ ಶಿಕ್ಷಣ.

ಈ ಪ್ರತಿಯೊಂದು ಕೋರ್ಸಿನ ಬಗೆಗೂ ವಿವರಗಳು ಮುಂದಿನಂತಿವೆ.

೧. ಬಿ. ಎ., ಎಂ. ಎ. ಮೊದಲಾದ ಆರ್ಟ್ಸ ಕೋರ್ಸಗಳು

ಶಿಕ್ಷಣ ಕ್ರಮದಲ್ಲಿ ಬಿ. ಎ. ಮತ್ತು ಎಂ. ಎ. ಪದವಿಗಳು ಆರ್ಟ್ಸ ಕೋರ್ಸ ಎಂದು ಪರಿಗಣಿಸಲ್ಪಡುತ್ತವೆ. ಈ ಪದವಿಗಳಿಗೆ ಅಭ್ಯಾಸಮಾಡ ಬೇಕೆಂಬ ವಿದ್ಯಾರ್ಥಿಗಳು ಕಾಲೇಜಿನ ಮೂಲಕ ವಿದ್ಯಾರ್ಜನೆ ಮಾಡಿ ಕಲಿಯಬಹುದು ಅಥವಾ ಬಾಹ್ಯ ವಿದ್ಯಾರ್ಥಿಗಳಾಗಿ ಕಲಿಯಬಹುದು. ಆದರೆ ಈ ಪದವಿಗೆ ಮೂಲತಃ ಎಸ್. ಎಸ್. ಎಲ್. ಸಿ. ಯಲ್ಲಿ ಉತ್ತೀರ್ಣ ನಾಗಿರಬೇಕು ನಂತರ ಬಾಹ್ಯವಾಗಿ ಅಥವಾ ಕಾಲೇಜಿನ ಮೂಲಕ ಕಲಿಯಬಯಸುವ ವಿದ್ಯಾರ್ಥಿಗಳು ಪಿ. ಯು. ಸಿ. (ಆರ್ಟ್ಸ ಅಥವಾ ಸೈನ್ಸ) ಯಲ್ಲಿ ಕಡ್ಡಾಯವಾಗಿ ಅಂತರಿಕವಾಗಿ ಕಾಲೇಜಿನ ಮುಖಾಂತರವಾಗಿಯೇ ಉತ್ತೀರ್ಣರಾಗಬೇಕಾಗುತ್ತದೆ. ಇಲ್ಲಿ ಒಂದು ಮಹತ್ವದ ಅಂಶವನ್ನು ನಾವು ಮರೆಯುವಂತಿಲ್ಲ. ಎಸ್. ಎಸ್. ಎಲ್. ಸಿ. ಪಾಸಾದ ವಿದ್ಯಾರ್ಥಿಗೆ ಹದಿನಾರು ವರ್ಷ ಮುಗಿಯದೆ ಹಾಗೂ ಕನಿಷ್ಠ ಪ್ರತಿ ಶತ ೪೦ ಗುಣಗಳನ್ನು ಪಡೆಯದ ಆ ವಿದ್ಯಾರ್ಥಿಯು ಪಿ. ಯು. ಸಿ. ಗೆ ಪ್ರವೇಶ ದೊರಕಿಸಲಾರನು. (ಕೆಲವು ವಿಶ್ವವಿದ್ಯಾಲಯಗಳಲ್ಲಿ ಈ ವಯೋಮಿತಿಗೆ ಇರುವ ನಿರ್ಬಂಧವನ್ನು ಕೆಲವು ಸಮಯಗಳಲ್ಲಿ ಸಡಲಿಸಲಾಗುವದು.) ಆದರೆ ಎಸ್. ಎಸ್. ಎಲ್. ಸಿ. ಯಲ್ಲಿ ವಿಜ್ಞಾನ ವಿಷಯಗಳನ್ನು ತೆಗೆದುಕೊಂಡ

ವರು ಹಾಗೂ ವಾಣಿಜ್ಯ ವಿಷಯಗಳನ್ನು ತೆಗೆದುಕೊಂಡವರು ಕೂಡ ಆರ್ಟ್ಸ್ ಕೋರ್ಸಿಗೆ ಪ್ರವೇಶದನ್ನು ಪಡೆಯಬಹುದು. ಅಂತೆಯೇ ಪಿ. ಯು. ಸಿ. ವಿಜ್ಞಾನ, ವಾಣಿಜ್ಯ ತೆಗೆದುಕೊಂಡವನು ಬಿ. ಎ. ಶಿಕ್ಷಣಕ್ಕೂ, ಬಿ. ಎಸ್ ಸಿ. ಪದವಿ ಪಡೆದವರು ಎಮ್. ಎ. ಪದವಿ ಶಿಕ್ಷಣಕ್ಕೂ ಅರ್ಹತೆಯುಳ್ಳವರಾಗುತ್ತಾರೆ. ಸಾಮಾನ್ಯವಾಗಿ ಆರ್ಟ್ಸ್ ಕೋರ್ಸುಗಳ ಬಿ. ಎ., ಎಂ. ಎ. ಪದವಿ ವ್ಯಾಸಂಗಕ್ಕೆ ಅರ್ಥಶಾಸ್ತ್ರ, ಚರಿತ್ರೆ (ಇತಿಹಾಸ), ರಾಜಕೀಯಶಾಸ್ತ್ರ, ಸಮಾಜಶಾಸ್ತ್ರ, ಮಾನನಶಾಸ್ತ್ರ, ಮಾನಸರಾಸ್ತ್ರ, ಸಮಾಜ–ಮಾನವ ಶಾಸ್ತ್ರ, ಪ್ರಾಚ್ಯವಸ್ತು ಸಂಶೋಧನಾಶಾಸ್ತ್ರ, ತತ್ತ್ವಜ್ಞಾನಶಾಸ್ತ್ರ, ಭಾಷಾ ಶಾಸ್ತ್ರ, ಪ್ರತಿಕೋದ್ಯಮಶಾಸ್ತ್ರ, ಭೂಗೋಲಶಾಸ್ತ್ರ, ಗಣಿತಶಾಸ್ತ್ರ, ಸಂಗೀತ ಶಾಸ್ತ್ರ, ಅಂಕಿ-ಸಂಖ್ಯಾಶಾಸ್ತ್ರ, ಆಡಳಿತಶಾಸ್ತ್ರ ಮುಂತಾದ ವಿಷಯಗಳನ್ನು ಆಯ್ದುಕೊಳ್ಳಬೇಕಾಗುತ್ತದೆ. ಇದಲ್ಲದೆ ಹಿಂದಿ, ಸಂಸ್ಕೃತ, ಪ್ರಾದೇಶಿಕ ಭಾಷಾ (ಕನ್ನಡ) ಮುಂತಾದ ವಿಷಯಗಳನ್ನೂ ಮೇಲ್ಕಾಣಿಸಿದ ವಿಷಯ ಗಳೊಡನೆ ಸಂಯೋಜಿತಗೊಳಿಸಿಕೊಂಡು (Combination) ಅಭ್ಯಾಸ ಮಾಡಬಹುದು. ಪಿ. ಯು. ಸಿ. ಮಟ್ಟದಲ್ಲಿ ಕಡ್ಡಾಯ ವಿಷಯಗಳಾದ ಇಂಗ್ಲಿಷ್ ಮತ್ತು ಇತರ ಭಾರತೀಯ ವಿಷಯಗಳನ್ನು ಕಲಿಯುವದರೊಡನೆ ಯಾವುದಾದರೂ ನಾಲ್ಕು ವಿಷಯಗಳು ಆಯ್ದುಕೊಳ್ಳಬೇಕಾಗುತ್ತದೆ. ಬಿ. ಎ. ಮಟ್ಟದಲ್ಲಿ ಪ್ರಥಮ ವರ್ಷ ಕಡ್ಡಾಯ ವಿಷಯಗಳನ್ನು ಬಿಟ್ಟು ಮೂರು ಆರ್ಟ್ಸ್ ವಿಷಯಗಳನ್ನು ಆಯ್ದುಕೊಳ್ಳಬೇಕು. ನಂತರ ಎರಡು ವರ್ಷಗಳು ಎರಡೇ ವಿಷಯಗಳನ್ನು ಆಯ್ದುಕೊಳ್ಳಬೇಕಾಗುತ್ತದೆ. ಆದರೆ ಎಮ್. ಎ. ಶಿಕ್ಷಣಕ್ಕೆ ಯಾವುದಾದರೂ ಒಂದು ಮುಖ್ಯ ವಿಷಯವಾಗಿ ಅಥವಾ ಒಂದು ಮುಖ್ಯ ವಿಷಯ ಇನ್ನೊಂದು ಉಪಮುಖ್ಯ ವಿಷಯವಾಗಿ ಆಯ್ದುಕೊಂಡು ಅಭ್ಯಾಸ ಮಾಡಬಹುದು. ಕಾಲೇಜಿನ ಮೂಲಕ ಅಭ್ಯಾಸ ಮಾಡುವ ವಿದ್ಯಾರ್ಥಿಗಳಿಗೆ ಬಿ. ಎ. ಪದವಿಯ ಪರೀಕ್ಷೆ ಎಸ್.ಎಸ್.ಎಲ್.ಸಿ. ಆದ ಬಳಿಕ ನಾಲ್ಕು ವರ್ಷಗಳೂ ಎಮ್. ಎ. ಪರೀಕ್ಷೆಗೆ ಆರು ವರ್ಷಗಳಾಗುತ್ತವೆ. ಆದರೆ ಬಾಹ್ಯ ವಿದ್ಯಾರ್ಥಿಗಳಿಗೆ ಎಸ್. ಎಸ್. ಎಲ್. ಸಿ. ಆದ ನಂತರ ಬಿ. ಎ. ಕೋರ್ಸಿಗೆ ನಾಲ್ಕು ವರ್ಷಗಳಾದರೆ ಎಮ್. ಎ. ಕೋರ್ಸಿಗೆ ಏಳು ವರ್ಷಗಳಾಗುತ್ತವೆ.

ಹೀಗೆ ಬಿ. ಎ., ಎಮ್. ಎ. ಮೊದಲಾದ ಆರ್ಟ್ಸ ಕೋರ್ಸಿನ ಪದವಿಗಳ ಇಷ್ಟೊಂದು ಹಿನ್ನೆಲೆಯಲ್ಲಿ ಈ ಕೋರ್ಸಿನ ವಿಷಯವಾಗಿ ಜ್ಯೋತಿಷ್ಯದ ಕೂಲಂಕಷ ವಿಚಾರವೇನು, ಈ ಕೋರ್ಸಿನ ಶಿಕ್ಷಣ ಪಡೆಯಲು ಜಾತಕದ ಯಾವ ಗ್ರಹ, ಸ್ಥಾನ, ಲಗ್ನಾದಿಗಳು ಜ್ಯೋತಿಷ್ಯದ ಆಧಾರದ ಮೇಲಿಂದ ಕಾರಕಗ್ರಹಗಳಾಗಿ ಪ್ರಭಾವ ಬೀರಬಲ್ಲವು ಮೊದಲಾದವುಗಳನ್ನು ಪರಿಶೀಲಿಸೋಣ.

**ಕಾರಕಗ್ರಹ:—** ಆರ್ಟ್ಸ ಕೋರ್ಸಗಳಾದ ಬಿ. ಎ., ಎಮ್. ಎ. ಶಿಕ್ಷಣ ಪಡೆಯಲು ಕಾರಕಗ್ರಹಗಳಾಗುವವು ಎಂದು ಪ್ರಶ್ನಿಸಿದರೆ ಉತ್ತರ ಕೊಡುವದು ತುಂಬ ಕ್ಲಿಷ್ಟಕರವಾದ ಸಂಗತಿ. ಏಕೆಂದರೆ ಈ ಕೋರ್ಸಿನಲ್ಲಿ ಅನೇಕ ವಿಷಯಗಳಿದ್ದು ಭಿನ್ನ ಭಿನ್ನ ವಿಷಯಗಳಿಗೆ ಭಿನ್ನ ಭಿನ್ನ ಗ್ರಹಗಳು ಕಾರಕಗ್ರಹಗಳಿರುವದರಿಂದ ಅನೇಕ ಗ್ರಹಗಳು ಕಾರಕವಿರುತ್ತವೆ. ಆದುದರಿಂದ ಈ ಕೋರ್ಸಿನ ವಿಷಯವಾಗಿ ಸಂಕ್ಷಿಪ್ತವಾಗಿ ವಿವೇಚಿಸಲು ಬಾರದೆ ಇದೊಂದೇ ಕೋರ್ಸಿನ ವಿಷಯವಾಗಿ ಪ್ರತ್ಯೇಕವಾಗಿ ಸ್ವತಂತ್ರ ಪುಸ್ತಕ ಬರೆಯುವಷ್ಟು ಇದರ ವ್ಯಾಪ್ತಿಯಿರುವದರಿಂದ ನಾವು ಸ್ಥೂಲವಾಗಿ ಪರಿಶೀಲಿಸೋಣ.

ಅರ್ಥಶಾಸ್ತ್ರ, ಅಂಕಿ-ಸಂಖ್ಯಾಶಾಸ್ತ್ರ, ಪತ್ರಿಕೋದ್ಯಮ, ಭಾಷಾಶಾಸ್ತ್ರ ಮೊದಲಾದವುಗಳಿಗೆ ಬುಧನೂ, ಇತಿಹಾಸ, ಪ್ರಾಚ್ಯವಸ್ತು ಸಂಶೋಧನಾ ಶಾಸ್ತ್ರ, ತತ್ತ್ವಜ್ಞಾನ, ಸಮಾಜ-ಮಾನವಶಾಸ್ತ್ರ ಮೊದಲಾದವುಗಳಿಗೆ ಶನಿಯೂ, ಸಮಾಜಶಾಸ್ತ್ರ, ಸಂಗೀತ, ಪತ್ರಿಕೋದ್ಯಮ ಮೊದಲಾದವುಗಳಿಗೆ ಶುಕ್ರನೂ, ಮಾನವಶಾಸ್ತ್ರ, ಆಡಳಿತಶಾಸ್ತ್ರ ಮೊದಲಾದವುಗಳಿಗೆ ಚಂದ್ರನೂ, ಆಡಳಿತಶಾಸ್ತ್ರಕ್ಕೆ ರವಿಯೂ, ಸಂಸ್ಕೃತ, ಇಂಗ್ಲಿಷ, ತತ್ತ್ವಜ್ಞಾನ, ರಾಜಕೀಯ ಶಾಸ್ತ್ರಗಳಿಗೆ ಗುರುವೂ ಹೀಗೆ ಭಿನ್ನ ಭಿನ್ನ ವಿಷಯಗಳಿಗೆ ಭಿನ್ನ ಭಿನ್ನ ಗ್ರಹಗಳು ಅಥವಾ ಯಾವುದೊಂದು ವಿಷಯಕ್ಕೆ ಅನೇಕ ಗ್ರಹಗಳು ಕಾರಕವಿರುವದರಿಂದ ನಿರ್ದಿಷ್ಟ ವಿಷಯಗಳಿಗೆ ಕಾರಕಗ್ರಹ ಯಾವುವೆಂಬುದನ್ನು ಮಾತ್ರ ಹೇಳಲು ಬರುತ್ತದೆ. ನಿರ್ದಿಷ್ಟ ಗ್ರಹವೇ ಬಲಾಢ್ಯವಿದ್ದರೆ ಆರ್ಟ್ಸ ಕೋರ್ಸಿನ ಜ್ಞಾನ ಪಡೆಯಬಹುದೆಂದು ಹೇಳಲು ಬಾರದು. ಆದರೆ ಒಂದು ಸಂಗತಿ ನಿಜವಿರುತ್ತದೆ. ಆರ್ಟ್ಸ ಪದವಿಯನ್ನು ಪಡೆಯುವ ವಿದ್ಯಾರ್ಥಿ

ಗಳ ಜಾತಕದಲ್ಲಿ ಬುಧ, ಗುರು, ಶುಕ್ರ, ಶನಿಯರು ರವಿ-ಮಂಗಳರಿಗಿಂತ ಬಲಾಢ್ಯರೂ ಯೋಗಕಾರಕರೂ ಇರುತ್ತಾರೆ.

ಸ್ಥಾನ:— ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ಈ ಕೋರ್ಸಿನಲ್ಲಿ ಥೇರಿಯೇ ಮುಖ್ಯವಿರುವದರಿಂದ ಥೇರಿಯ ಸ್ಥಾನವಾದ ಪಂಚಮಸ್ಥಾನವೇ ಕಾರಕಸ್ಥಾನವಾಗುತ್ತದೆ. ಪಂಚಮೇಶ, ಪಂಚಮಸ್ಥಾನವು ಪೂರಕ-ಪೋಷಕ ವಿರದೆ ಯಾವ ವಿದ್ಯಾರ್ಥಿಯೂ ಈ ಕೋರ್ಸು ಮುಗಿಸಲಾರ.

ಕಾರಕಲಗ್ನ:— ಲಗ್ನದ ದೃಷ್ಟಿಯಿಂದ ಪರಿಶೀಲಿಸಿದರೆ ಬಿ. ಎ., ಎಮ್. ಎ. ಕೋರ್ಸುಗಳಿಗೆ ನಿರ್ದಿಷ್ಟ ಲಗ್ನದ ವಿದ್ಯಾರ್ಥಿಗಳೇ ಈ ಕೋರ್ಸುಗಳನ್ನು ಮುಗಿಸುವರೆಂದು ಹೇಳುವದು ಕಠಿಣ. ಏಕೆಂದರೆ ಭಿನ್ನ ಭಿನ್ನ ವಿಷಯಗಳನ್ನು ಐಚ್ಛಿಕ ವಿಷಯವನ್ನಾಗಿ ತೆಗೆದುಕೊಂಡ ವಿದ್ಯಾರ್ಥಿಗಳಿಗೆ ಬೇರೆ ಬೇರೆ ಲಗ್ನಗಳು ಕಾರಕವಿದ್ದು ಅವುಗಳನ್ನು ಈ ಕೆಳಗಿನಂತೆ ಕೊಡಲಾಗಿದೆ.

ಅರ್ಥಶಾಸ್ತ್ರ, ಅಂಕಿ-ಸಂಖ್ಯಾಶಾಸ್ತ್ರ, ಭಾಷಾಶಾಸ್ತ್ರ, ಪತ್ರಿಕೋದ್ಯಮಶಾಸ್ತ್ರ ಈ ಮೊದಲಾದ ಶಾಸ್ತ್ರಗಳನ್ನು ತೆಗೆದುಕೊಂಡ ವಿದ್ಯಾರ್ಥಿಗಳಿಗೆ ವೃಷಭ, ಮಿಥುನ, ಸಿಂಹ, ಕನ್ಯಾ, ಮಕರ, ಕುಂಭ ಈ ಲಗ್ನಗಳು ಇತಿಹಾಸ, ಪ್ರಾಚ್ಯವಸ್ತುಸಂಶೋಧನಾಶಾಸ್ತ್ರ, ಸಮಾಜ-ಮಾನವಶಾಸ್ತ್ರ, ತತ್ತ್ವಜ್ಞಾನ ಈ ಮೊದಲಾದ ವಿಷಯಗಳನ್ನು ತೆಗೆದುಕೊಂಡ ವಿದ್ಯಾರ್ಥಿಗಳಿಗೆ ವೃಷಭ, ಮಿಥುನ, ಕನ್ಯಾ, ತುಲಾ ಈ ಲಗ್ನಗಳಿಗೂ; ತರ್ಕಶಾಸ್ತ್ರ, ತತ್ತ್ವಜ್ಞಾನಶಾಸ್ತ್ರ, ಗಣಿತಶಾಸ್ತ್ರ, ರಾಜಕೀಯಶಾಸ್ತ್ರ, ಸಂಸ್ಕೃತ, ಆಡಳಿತ ಈ ಮೊದಲಾದ ವಿಷಯಗಳನ್ನು ತೆಗೆದುಕೊಂಡ ವಿದ್ಯಾರ್ಥಿಗಳಿಗೆ ಮೇಷ, ಮಿಥುನ, ಸಿಂಹ, ವೃಶ್ಚಿಕ, ಧನು, ಮೀನ ಈ ಲಗ್ನಗಳೂ; ಸಮಾಜಶಾಸ್ತ್ರ, ಸಂಗೀತಶಾಸ್ತ್ರ ಈ ಮೊದಲಾದ ವಿಷಯಗಳನ್ನು ತೆಗೆದುಕೊಂಡ ವಿದ್ಯಾರ್ಥಿಗಳಿಗೆ ವೃಷಭ, ಮಿಥುನ, ತುಲಾ, ಮಕರ, ಕನ್ಯಾ, ಕುಂಭ ಈ ಲಗ್ನಗಳೂ; ಭೂಗೋಲ ತೆಗೆದುಕೊಂಡ ವಿದ್ಯಾರ್ಥಿಗಳಿಗೆ ಮೇಷ, ಕರ್ಕ, ಸಿಂಹ, ವೃಶ್ಚಿಕ, ಧನು, ಮೀನ ಈ ಲಗ್ನಗಳೂ; ಗಣಿತಶಾಸ್ತ್ರವನ್ನು ತೆಗೆದುಕೊಂಡ ವಿದ್ಯಾರ್ಥಿಗಳಿಗೆ ವೃಷಭ, ಮಿಥುನ, ಕರ್ಕ, ಸಿಂಹ, ವೃಶ್ಚಿಕ, ಧನು, ಕುಂಭ ಈ ಲಗ್ನಗಳೂ; ಮಾನಸಶಾಸ್ತ್ರ ತೆಗೆದುಕೊಂಡ ವಿದ್ಯಾರ್ಥಿಗಳಿಗೆ ಮೇಷ, ವೃಷಭ, ಮಿಥುನ, ಕರ್ಕ, ತುಲಾ, ವೃಶ್ಚಿಕ ಲಗ್ನಗಳೂ ಕಾರಕವಿರುತ್ತವೆ.

ಹೀಗೆ ಭಿನ್ನ ಭಿನ್ನ ವಿಷಯಗಳನ್ನು ಐಚ್ಛಿಕ ವಿಷಯಗಳನ್ನಾಗಿ ತೆಗೆದು ಕೊಂಡು ಬಿ. ಎ., ಎಮ್. ಎ. ಪದವೀಧರರಾಗಲು ವಿಭಿನ್ನ ಲಗ್ನಗಳು ಕಾರಕವಿರುತ್ತವೆ.

**ರಾಶಿ**:— ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ಆರ್ಟ್ಸ ಕೋರ್ಸು ಗಳಾದ ಬಿ. ಎ., ಮ್. ಎ. ಗಳಿಗೆ ನಿರ್ದಿಷ್ಟವಾದ ರಾಶಿಯವರೇ ಇರ ಬೇಕೆಂಬ ನಿಯಮವಿಲ್ಲ.

**ಮುಖ್ಯ ಹಾಗೂ ಉಪಮುಖ್ಯ ವಿಷಯಗಳನ್ನು ಹೇಗೆ ಆರಿಸಿಕೊಳ್ಳ ಬೇಕು? (How to select major and minor subjects?)**

ಈ ವರೆಗೆ ಆರ್ಟ್ಸ ಕೋರ್ಸುಗಳಾದ ಬಿ. ಎ., ಎಮ್. ಎ. ಶಿಕ್ಷಣ ಪಡೆಯಲು ಜಾತಕ ಹೇಗಿರಬೇಕು ಹಾಗು ಕಾರಕಗ್ರಹ, ಲಗ್ನ, ಸ್ಥಾನಾದಿ ಗಳಾವವು ಎಂಬುದನ್ನು ವಿವರಿಸಿದ್ದಾಯಿತು. ಆದರೆ ನಮ್ಮ ವಿದ್ಯಾರ್ಥಿಗಳ ಪ್ರಶ್ನೆಗಳೆಂದರೆ ಬಿ. ಎ., ಎಂ. ಎ, ಕೋರ್ಸುಗಳ ಮುಖ್ಯ ಹಾಗೂ ಉಪ-ಮುಖ್ಯವಿಷಯಗಳನ್ನು ಹೇಗೆ ಹಾಗೂ ಯಾವುದನ್ನು ಆರಿಸಬೇಕು.ಎಂಬುದು ಈ ಪ್ರಶ್ನೆಗಳಿಗೆ ಉತ್ತರ ಕೊಡುವ ಪೂರ್ವದಲ್ಲಿ ವಿದ್ಯಾರ್ಥಿಯ ಮೂಲ ಜಾತಕವನ್ನು ಸೂಕ್ಷ್ಮವಾಗಿ ಪರಿಶೀಲಿಸಿ ಜಾತಕದ ಯಾವ ಗ್ರಹ ಅಥವಾ ಯಾವ ಗ್ರಹಗಳು ಶಿಕ್ಷಣದ ದೃಷ್ಟಿಯಿಂದ ಪೋಷಕವೂ, ಬಲಿಷ್ಠವೂ ಇವೆ ಎಂಬುದನ್ನು ಮೊದಲು ನಿರ್ಧರಿಸಬೇಕು.

ಯಾವುದೊಂದು ಗ್ರಹ ಜಾತಕದಲ್ಲಿ ಬಲಿಷ್ಠವಿದೆ ಎಂದು ನಿರ್ಧರಿಸಲು ನಾವು ಐದು ಸಂಗತಿಗಳನ್ನು ಲಕ್ಷಿಸಬೇಕು.

೧) ಗ್ರಹವು ರಾಶಿಬಲದ್ದಿರಬೇಕು; ೨) ಗ್ರಹವು ಸ್ಥಾನಬಲದ್ದಿರ ಬೇಕು. ೩) ಯೋಗಕಾರಕವಿರಬೇಕು; ೪) ಶಿಕ್ಷಣಕಾರಕವಿರಬೇಕು; ೫) ಶತ್ರುಗ್ರಹಮಧ್ಯ, ಯುಕ್ತ, ಶತ್ರುಗ್ರಹದೃಷ್ಟಸಿರಕೂಡದು.

ಹೀಗೆ ಮೇಲೆ ಹೇಳಿದ ಐದು ಸಂಗತಿಗಳಿಂದ ಪೋಷಕವಾಗಿರುವ ಗ್ರಹದ ಕಾರಕ ವಿಷಯವನ್ನೇ ಮುಖ್ಯ ವಿಷಯವನ್ನಾಗಿ ಆಯ್ದುಕೊಳ್ಳ ಬೇಕು. ಈ ಐದು ಸಂಗತಿಗಳಲ್ಲಿ ಒಂದೆರಡು ಸಂಗತಿಗಳು ಅನುಕೂಲವಿದ್ದ

ಗ್ರಹಗಳ ಕಾರಕವಿಷಯವನ್ನು ಉಪಮುಖ್ಯ ವಿಷಯವನ್ನಾಗಿ ಆರಿಸಿಕೊಳ್ಳಬೇಕು. ಉದಾಹರಣೆಗಾಗಿ: ವೃಷಭ ಲಗ್ನವ ಕನ್ಯಾರಾಶಿಯ ಪಂಚಮಸ್ಥಾನದಲ್ಲಿ ಬುಧನೂ, ಧನುರಾಶಿಯ ಅಷ್ಟಮದಲ್ಲಿ ಗುರುವೂ ಇರುವ ಜಾತಕವಿದೆ ಎಂದು ತಿಳಿಯಿರಿ. ಇಲ್ಲಿ ಬುಧನು ಗುರುವಿಗಿಂತ ಹೆಚ್ಚು ಬಲಾಢ್ಯನೂ, ಪೋಷಕನೂ ಇರುತ್ತಾನೆ. ಏಕೆಂದರೆ ಬುಧನು ರಾಶಿಬಲದವನೂ, ಸ್ಥಾನಬಲದವನೂ ಇದ್ದು ವೃಷಭಲಗ್ನಕ್ಕೆ ಯೋಗಕಾರಕನೂ, ಶಿಕ್ಷಣಕಾರಕನೂ ಆದ ಗ್ರಹವಾಗಿದ್ದಾನೆ. ಗುರುವು ಕೇವಲ ರಾಶಿಬಲದವನಾಗಿದ್ದಾನೆ. ಅವನಿಗೆ ಸ್ಥಾನಬಲವಿಲ್ಲ; ಆತ ಯೋಗಕಾರಕನಲ್ಲ, ಶಿಕ್ಷಣಕಾರಕನೂ ಅಲ್ಲ. ಆದುದರಿಂದ ಬುಧನ ಕಾರಕವಿಷಯಗಳಾದ ಅರ್ಥಶಾಸ್ತ್ರ, ಅಂಕಿ ಸಂಖ್ಯಾಶಾಸ್ತ್ರ, ಗಣಿತಶಾಸ್ತ್ರ (ಬೀಜಗಣಿತ), ಭಾಷಾಶಾಸ್ತ್ರ, ಪ್ರತಿಕೋದ್ಯಮಶಾಸ್ತ್ರ ಈ ಮೊದಲಾದ ವಿಷಯಗಳನ್ನು ಮುಖ್ಯ ವಿಷಯವನ್ನಾಗಿ ಆಯ್ದುಕೊಂಡು ಕೇವಲ ರಾಶಿಬಲವಿರುವ ಗುರುವಿನ ಕಾರಕವಿಷಯಗಳಾದ ಸಂಸ್ಕೃತ, ತರ್ಕ-ನ್ಯಾಯ, ರಾಜಕೀಯ ಈ ಮೊದಲಾದ ಶಾಸ್ತ್ರಗಳನ್ನು ಉಪಮುಖ್ಯ ವಿಷಯವನ್ನಾಗಿ ಆರಿಸಿಕೊಳ್ಳಬೇಕು. ಇನ್ನು ಜಾತಕದಲ್ಲಿ ಶನಿ-ಶುಕ್ರರು ಗುರುವಿಗಿಂತ ಹೆಚ್ಚು ಬಲಿಷ್ಠರೂ, ಪೋಷಕರೂ ಇದ್ದರೆ ಆ ಗ್ರಹಗಳ ಕಾರಕ ವಿಷಯಗಳನ್ನೇ ಮುಖ್ಯ ಮತ್ತು ಉಪಮುಖ್ಯ ವಿಷಯಗಳನ್ನಾಗಿ ಆಯ್ದುಕೊಳ್ಳಲು ಹೆಚ್ಚು ಪ್ರಾಧಾನ್ಯವನ್ನು ಕೊಡಬೇಕು. ಏಕೆಂದರೆ ವೃಷಭ ಲಗ್ನಕ್ಕೆ ಶನಿ-ಶುಕ್ರರು ಗುರುವಿಗಿಂತ ಯೋಗಕಾರಕರಿರುತ್ತಾರೆ. ಹೀಗೆ ಗ್ರಹಗಳ ರಾಶಿಬಲ, ಸ್ಥಾನಬಲ, ಯೋಗಕಾರಕಬಲ, ಶಿಕ್ಷಣಕಾರಕ ಹಾಗೂ ಗ್ರಹಗಳ ಬಲಾಬಲವನ್ನು ಸೂಕ್ಷ್ಮವಾಗಿ ಪರಿಶೀಲಿಸಿ ಮುಖ್ಯ ಹಾಗೂ ಉಪಮುಖ್ಯ ವಿಷಯಗಳನ್ನು ಆಯ್ದುಕೊಳ್ಳಬೇಕು.

### ೨. ಡಿಪ್ಲೋಮಾ ಇನ್ ಎಪಿಗ್ರಾಫಿ
### (ಶಿಲಾಶಾಸನಗಳ ಅಭ್ಯಾಸ)

ಬಿ. ಎ. ಪದವಿ ಪಡೆದ ನಂತರ ಶಿಲಾಲೇಖಶಾಸ್ತ್ರದಲ್ಲಿ ಡಿಪ್ಲೋಮಾ ಪಡೆಯಬಹುದು. ಈ ಶಾಸ್ತ್ರವು ಇತಿಹಾಸ ಸಂಶೋಧಕರಿಗೆ ಹೆಚ್ಚು ಪ್ರಯೋಜಕವಿದೆ. ಇದು ಸ್ನಾತಕೋತ್ತರ ಡಿಪ್ಲೋಮಾ. ಹಳೆಯ ಶಿಲಾ

ಶಾಸನಗಳನ್ನು ಓದಿ ಅವುಗಳ ಕಾಲ ನಿರ್ಣಯವನ್ನು ಮಾಡುವ ಶಾಸ್ತ್ರವಾಗಿರುತ್ತದೆ. ಇದು ಅಲ್ಪಾವಧಿಯ ಡಿಪ್ಲೋಮಾ ಇದ್ದು ಒಂದು ವರ್ಷ ಮೀರಿದ ಈ ಕೋರ್ಸಿನಲ್ಲಿ ಇತಿಹಾಸ, ಪ್ರಾಚ್ಯವಸ್ತು ಸಂಶೋಧನೆಗಳಿಗೆ ಹೆಚ್ಚು ಉಪಯುಕ್ತವಾಗಿರುತ್ತದೆ. ಇನ್ನು ಈ ಕೋರ್ಸನ್ನು ತೆಗೆದುಕೊಳ್ಳಲು ಜಾತಕ ಹೇಗಿರಬೇಕೆಂಬುದನ್ನು ಫಲಜ್ಯೋತಿಷ್ಯದಲ್ಲಿ ಪರಿಶೀಲಿಸುವಾ.

ಕಾರಕಗ್ರಹ:— ಇತಿಹಾಸ ಹಾಗೂ ಪ್ರಾಚ್ಯವಸ್ತುಸಂಶೋಧನೆಯ ಗುಣಧರ್ಮವುಳ್ಳ ಗ್ರಹವೂ ಹಾಗೂ ತತ್ತ್ವಶಾಸ್ತ್ರ, ಪ್ರಾಚ್ಯಸಂಸ್ಕೃತಿ ಸಂಶೋಧನೆಯ ಗುಣಧರ್ಮವುಳ್ಳ ಶನಿಯೂ ಬಲಾಢ್ಯನಿರದೆ ಯಾರಿಗೂ ಈ ಕೋರ್ಸಿನಲ್ಲಿ ಯಶಸ್ಸು ಸಿಗಲಾರದು. ಶನಿಯ ತರುವಾಯ ಬುಧ-ಗುರುಗಳು ಈ ಕೋರ್ಸಿನ ಕಾರಕಗ್ರಹಗಳಿರುತ್ತಾರೆ. ಏಕೆಂದರೆ ಶಿಲಾಲೇಖ, ಶಾಸನಗಳ ಅಭ್ಯಾಸ, ತಾಮ್ರಪಟ, ತಾಡಓಲೆ, ನಾಣ್ಯಗಳ ಮೇಲಿನ ಅಕ್ಷರ ಮೊದಲಾದವುಗಳನ್ನು ಓದುವದು, ಅರ್ಥಹಚ್ಚುವದಾ ಮೊದಲಾದ ಗುಣಧರ್ಮಗಳ ಕಾರಕನೂ, ಭಾಷಾಶಾಸ್ತ್ರದ ಕಾರಕನೂ ಆದ ಬುಧನು ಈ ಕೋರ್ಸಿನ ಕಾರಕಗ್ರಹವಿರುತ್ತಾನೆ. ಬುಧನ ತರುವಾಯ ಗುರುವಿನ ಬಲಾಬಲವನ್ನೂ ಪರಿಶೀಲಿಸಬೇಕು. ಏಕೆಂದರೆ ಗುರುವು ಜ್ಞಾನದ ಅಧಿಪತಿಯಿರುವನಲ್ಲದೆ ತರ್ಕ ಹಾಗೂ ಸಂಸ್ಕೃತ–ಸಂಸ್ಕೃತಿಯ ಕಾರಕನೂ ಇದ್ದು ಅಧ್ಯಾಪಕವೃತ್ತಿಯ ಕಾರಕನೂ ಇದ್ದಾನೆ.

ಕಾರಕಲಗ್ನ:— ವೃಷಭ, ಮಿಥುನ, ಕನ್ಯಾ, ತುಲಾ, ವೃಶ್ಚಿಕ, ಧನು, ಮಕರ, ಮೀನ ಈ ಲಗ್ನದ ವಿದ್ಯಾರ್ಥಿಗಳು ಈ ಕೋರ್ಸಿನಲ್ಲಿ ನಿಷ್ಣಾತರಿರುವದು ಕಂಡುಬರುತ್ತದೆ.

ಸ್ಥಾನ:— ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ಪ್ರಾಚ್ಯವಸ್ತು ಸಂಶೋಧನೆ ಹಾಗೂ ಅವುಗಳನ್ನು ಓದಿ ಅರ್ಥ ಹಚ್ಚುವಮ ಇವೇ ಮುಖ್ಯ ಗುಣಧರ್ಮಗಳಿರುವದರಿಂದ ಪಂಚಮಸ್ಥಾನ, ದ್ವಿತೀಯಸ್ಥಾನ, ತೃತೀಯ ಸ್ಥಾನ ಮುಖ್ಯ ಸ್ಥಾನಗಳಿರುತ್ತವೆ. ಆದುದರಿಂದ ಈ ಸ್ಥಾನಗಳು ಹಾಗೂ

ಸ್ಥಾನಾಧೀಶರು ಪೋಷಕರಿರುವ ಜಾತಕನು ಈ ಕೋರ್ಸಿನಲ್ಲಿ ಪರಿಣತನಾಗುತ್ತಾನೆ.

ರಾಶಿ :— ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ನಿರ್ದಿಷ್ಟ ರಾಶಿಯವರೇ ಈ ಕೋರ್ಸನ್ನು ಮುಗಿಸುತ್ತಾರೆಂದು ಹೇಳಲು ಬಾರದು.

## ೩. ಬಿ. ಲಿಬ್., ಎಮ್. ಲಿಬ್. ಕೋರ್ಸುಗಳು (Library Science Courses)

ಗ್ರಂಥಾಲಯ ವಿಜ್ಞಾನದ ಅಭ್ಯಾಸವು ಒಂದು ವಿಶಿಷ್ಟತೆ ಪಡೆದಿದೆ. ಇದು ಸ್ನಾತಕೋತ್ತರ ವ್ಯಾಸಂಗವಿದ್ದು, ಯಾವುದೇ ಪದವೀಧರನು ಕೂಡ ಈ ಕೋರ್ಸಿಗೆ ಅಭ್ಯಾಸ ಮಾಡಬಹುದು. ಈ ಕೋರ್ಸಿಗೆ ಬ್ಯಾಚಿಲರ್ ಇನ್ ಲೈಬ್ರರಿ ಸೈನ್ಸ ಎನ್ನುತ್ತಾರೆ. ಪದವೀಧರರಿಗೆ ಒಂದು ವರ್ಷದ ಕೋರ್ಸ ಇದ್ದು ನಂತರ ಎಮ್. ಲಿಬ್. ಪದವಿಗೆ ಬಿ. ಲಿಬ್. ಪದವೀಧರರಿಗಷ್ಟೇ ಪ್ರವೇಶದ ಅವಕಾಶವಿದೆ. ಇತ್ತೀಂದು ಈ ಕೋರ್ಸಿ ಹಿನ್ನೆಲೆಯಲ್ಲಿ ಜೋತಿಷ್ಯದ ವಿಚಾರವೇನೆಂಬುದನ್ನು ಪರಿಶೀಲಿಸುವಾ.

ಕಾರಕಗ್ರಹ :— ಈ ಕೋರ್ಸಿನ ಮುಖ್ಯ ಕೆಲಸವೆಂದರೆ ಗ್ರಂಥಗಳ ಶಾಸ್ತ್ರೀಯ ವರ್ಗೀಕರಣ ಹಾಗೂ ಅವುಗಳನ್ನು ಸರಿಯಾಗಿಯೂ, ಓರಣದಿಂದಲೂ, ಅಚ್ಚುಕಟ್ಟುತನದಿಂದಲೂ ಜತನದಿಂದಲೂ ಇಡುವುದಲ್ಲದೆ ಹರಿದ, ಮಾಸಿದ ಗ್ರಂಥಗಳನ್ನು ಕೂಡ ಸರಿಯಾಗಿ ಕಾಪಾಡುವದೇ ಆಗಿರುತ್ತದೆ. ಆದುದರಿಂದ ಈ ಕೋರ್ಸಿನ ಕಾರಕಗ್ರಹಗಳೆಂದರೆ ಬುಧ, ಶುಕ್ರ, ಚಂದ್ರ ಇವರು. ಏಕೆಂದರ ಮೇಲಿನ ಗುಣಧರ್ಮಗಳು ಈ ಗ್ರಹಗಳಲ್ಲಿರುತ್ತವೆ.

ಸ್ಥಾನ :— ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ತೃತೀಯ ಸ್ಥಾನವೇ ಈ ಕೋರ್ಸಿನ ಕಾರಕಸ್ಥಾನವಿರುತ್ತದೆ. ಏಕೆಂದರೆ ಗ್ರಂಥಗಳನ್ನು ಸರಿಯಾಗಿ ಇಡುವದು, ಕಾಪಾಡುವದು ಮುಖ್ಯ ಗುಣಧರ್ಮವಿರುವದರಿಂದ ತೃತೀಯ ಸ್ಥಾನ, ತೃತೀಯೇಶ ಪೋಷಕರಿಂದ ಈ ಕಲೆಯು ಸಾಧಿಸದು. ತೃತೀಯದ ನಂತರ ಕೆಲಮಟ್ಟಿಗೆ ಪಂಚಮಸ್ಥಾನವನ್ನೂ ಪರಿಶೀಲಿಸಬೇಕು.

ಕಾರಕಲಗ್ನ :— ಮೇಷ, ವೃಷಭ, ಮಿಥುನ, ಕನ್ಯಾ, ಮಕರ, ಮೀನ ಈ ಲಗ್ನದ ವಿದ್ಯಾರ್ಥಿಗಳೇ ಈ ಕೋರ್ಸಿನಲ್ಲಿ ಪ್ರವೀಣರಿರುವದನ್ನು ಕಾಣುತ್ತೇವೆ.

ರಾಶಿ :— ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ವೃಷಭ, ಮಿಥುನ, ಕರ್ಕ, ಕನ್ಯಾ, ತುಲಾ, ಕುಂಭ, ಮೀನ ಈ ರಾಶಿಯವರೇ ಈ ಕೋರ್ಸ ನಲ್ಲಿ ಪಳಗಿದವರಿದ್ದದ್ದು ಕಂಡುಬರುತ್ತದೆ.

೪. ವಿದೇಶೀ ಭಾಷೆಗಳ ಡಿಪ್ಲೋಮಾ ವೊದಲಾದ ಕೋರ್ಸುಗಳು

ಸ್ನಾತಕೋತ್ತರ ವಿದೇಶೀ ಭಾಷೆಗಳ ಡಿಪ್ಲೋಮಾ ಹಾಗೂ ಸರ್ಟಿಫಿಕೇಟ್ ಕೋರ್ಸುಗಳನ್ನು ಕೆಲವು ವಿಶ್ವವಿದ್ಯಾಲಯಗಳಲ್ಲಿ ಪ್ರಾರಂಭಿಸಲಾಗಿದೆ. ಆರು ತಿಂಗಳ ಅಭ್ಯಾಸದ ಸರ್ಟಿಫಿಕೇಟ್ ಕೋರ್ಸುಗಳು ಹಾಗೂ ಒಂದು ಅಥವಾ ಎರಡು ವರ್ಷಗಳ ಡಿಪ್ಲೋಮಾ ಕೋರ್ಸುಗಳು ಇರುತ್ತವೆ. ಫ್ರೆಂಚ್, ಜರ್ಮನ್, ರಶ್ಯನ್ ಈ ವೊದಲಾದ ವಿದೇಶೀ ಭಾಷೆಗಳ ಕೋರ್ಸುಗಳೇ ಹೆಚ್ಚಾಗಿರುತ್ತವೆ.

ಭಾರತದ ಈಗಿನ ಆಗುಹೋಗುಗಳನ್ನು ಪರಿಶೀಲಿಸಿದರೆ ಇಂಗ್ಲಿಷ್ ಡಿಪ್ಲೋಮಾ ಕೂಡ ಪ್ರಾರಂಭವಾಗುವದಲ್ಲದೆ ಈ ಇಂಗ್ಲೀಷ್ ಡಿಪ್ಲೋಮಾ ಕೋರ್ಸನ್ನು ಅಭ್ಯಸಿಸಲು ಅನೇಕ ವಿದ್ಯಾರ್ಥಿಗಳು ಆತುರರಾಗುತ್ತಾರೆಂದು ಜ್ಯೋತಿಷ್ಯಶಾಸ್ತ್ರದ ಆಧಾರದ ಮೇಲಿಂದ ಹೇಳಬಹುದು. ಇಂದು ನಮ್ಮ ಶಿಕ್ಷಣವ್ಯವಸ್ಥೆಯಲ್ಲಿ ಇಂಗ್ಲೀಷಿಗಿರುವ ಸ್ಥಾನವನ್ನು ರಾಷ್ಟ್ರಭಾಷೆ ಮತ್ತು ಪ್ರಾದೇಶಿಕ ಭಾಷೆಗಳು ಪಡೆದ ನಂತರ ಅದರ ಸಾರ್ವತ್ರಿಕತೆ ಮಾಯವಾಗಿ, ಉಚ್ಚ ಶಿಕ್ಷಣ ಹೊಂದಬೇಕೆನ್ನುವವರಿಗೆ ಆಯಾ ಭಾಷೆಯ ಜ್ಞಾನ ಅವಶ್ಯವೆನಿಸ ಹತ್ತಿ ಆಯಾ ಭಾಷೆಯಲ್ಲಿಯೂ ಡಿಪ್ಲೋಮಾ ಕೋರ್ಸುಗಳನ್ನು ಪ್ರಾರಂಭಿಸಬೇಕಾಗಿ ಬಂದು ಅದಕ್ಕಾಗಿ ಬೇಡಿಕೆಯೂ ಹೆಚ್ಚುವ ಸಂಭವವಿದೆ.

ವಿದೇಶೀ ಭಾಷೆಗಳ ಡಿಪ್ಲೋಮಾವನ್ನು ಎಲ್ಲ ಪದವೀಧರರು (ಬಿ.ಎ., ಬಿ. ಎಸ್‌ಸಿ., ಬಿ. ಕಾಮ್., ಎಮ್. ಎ., ಎಮ್. ಎಸ್‌ಸಿ., ಎಮ್ ಕಾಮ್. ಮುಂ.) ಅಭ್ಯಾಸ ಮಾಡಬಹುದು. ಅದರಲ್ಲಿಯೂ ಫ್ರೆಂಚ್,

ರಶ್ಯನ್ ಭಾಷೆಗಳ ಕಡೆಗೆ ಆರ್ಟ್ಸ ಪದವೀಧರರ ಒಲವು ಹೆಚ್ಚಾಗಿದ್ದರೆ, ವಿಜ್ಞಾನ ಪದವೀಧರರು ಜರ್ಮನ್, ರಶಿಯನ್ ಕೋರ್ಸುಗಳನ್ನು ಕಲಿಯಲು ಹೆಚ್ಚಾಗಿರುವದು ಕಂಡುಬರುತ್ತದೆ. ಇನ್ನು ಜ್ಯೋತಿಷ್ಯಶಾಸ್ತ್ರದಂತೆ ಈ ವಿದೇಶೀ ಭಾಷೆಗಳ ಕೋರ್ಸುಗಳನ್ನು ಕಲಿಯಲು ಜಾತಕವೆಂತಿರಬೇಕೆಂಬು ದನ್ನು ಪರಿಶೀಲಿಸುವಾ.

**ಕಾರಕಗ್ರಹ:** ಯಾವುದೇ ಭಾಷಾಶಾಸ್ತ್ರದ ಮೇಲೆ ಪ್ರಭುತ್ವ ಪಡೆ ಯಲು ಬುಧನು ಬಲಾಢ್ಯನಿರಲೇಬೇಕು. ಆದುದರಿಂದ ಬುಧನೇ ಈ ಕೋರ್ಸಿನ ಕಾರಕಗ್ರಹವು. ಬುಧನ ತರುವಾಯ ಜ್ಞಾನಾಧಿಪತಿಯಾದ ಗುರುವನ್ನೂ ಪರಿಶೀಲಿಸಬೇಕು.

**ಸ್ಥಾನ:—** ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ಈ ಕೋರ್ಸಿನ ಕಾರಕಸ್ಥಾನಗಳೆಂದರೆ ಪಂಚಮ ಹಾಗೂ ದ್ವಿತೀಯ ಸ್ಥಾನಗಳಿರುತ್ತವೆ. ಆದುದರಿಂದ ಈ ಸ್ಥಾನಗಳು ಹಾಗೂ ಈ ಸ್ಥಾನಾಧೀಶರು ಪೋಷಕರಿರದೆ ಯಾವ ವಿದ್ಯಾರ್ಥಿಯೂ ಈ ಕೋರ್ಸಿನಲ್ಲಿ ಪ್ರಭುತ್ವ ಪಡೆಯಲಾರನು.

**ಲಗ್ನ:—** ಲಗ್ನದ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ವೃಷಭ, ಮಿಥುನ, ಸಿಂಹ, ವೃಶ್ಚಿಕ, ಕುಂಭ ಈ ಲಗ್ನಗಳ ವಿದ್ಯಾರ್ಥಿಗಳೇ ಈ ಕೋರ್ಸಿನಲ್ಲಿ ನಿಷ್ಣಾತರಿರುವದು ಕಂಡುಬರುತ್ತದೆ.

**ರಾಶಿ:—** ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ನಿರ್ದಿಷ್ಟ ರಾಶಿಯ ವಿದ್ಯಾರ್ಥಿಗಳೇ ಈ ಕೋರ್ಸನ್ನು ಮುಗಿಸುತ್ತಾರೆಂದು ಹೇಳಲು ಬಾರದು.

**೫. ಪತ್ರಿಕೋದ್ಯಮ ಕೋರ್ಸ (Diploma in Journalism**

೨೦ ನೆಯ ಶತಮಾನವು ಪ್ರಚಾರಯುಗವೆಂಬ ಅನ್ವರ್ಥಕ ನಾಮ ಧೇಯವನ್ನು ಪಡೆದಿರುತ್ತದೆ. ಪ್ರಚಾರದ ಅನೇಕ ಸಾಧನಗಳಲ್ಲಿ ಪತ್ರಿಕೋ ದ್ಯಮವು ಮುಖ್ಯ ಸಾಧನವೆನ್ನಬಹುದು. ಇಂದು ಪತ್ರಿಕೋದ್ಯಮ ಒಂದು ಶಾಸ್ತ್ರೋಕ್ತ ವಿಷಯವಾಗಿದ್ದು, ಇದರ ವೈಜ್ಞಾನಿಕ ಅಭ್ಯಾಸದ ಬಗೆಗೆ ಹೆಚ್ಚು ಲಕ್ಷ್ಯ ನೀಡಲಾಗುತ್ತದೆ. ಇದಕ್ಕಾಗಿ ಡಿಪ್ಲೋಮಾ ಇನ್ ಜರ್ನ್ಯಾ ಲಿಸಮ್ ಅರ್ಥಾತ್ ಪತ್ರಿಕೋದ್ಯಮದಲ್ಲಿ ಡಿಪ್ಲೋಮಾ ಕೋರ್ಸನ್ನು

ಪ್ರಾರಂಭಿಸಲಾಗಿದೆ. ಈ ಕೋರ್ಸಿನಲ್ಲಿ ಒಂದು ವರ್ಷ ಅವಧಿಯ ಡಿಪ್ಲೋಮಾವೂ ಹಾಗೂ ಎರಡು ವರ್ಷ ಅವಧಿಯ ಮುಂದುವರಿದ (Advanced) ಡಿಪ್ಲೋಮಾ ಹೀಗೆ ಎರಡು ಪ್ರಕಾರದ ಕೋರ್ಸುಗಳಿರುತ್ತವೆ.

ಒಂದು ವರ್ಷ ಅವಧಿಯ ಡಿಪ್ಲೋಮಾ ಕೋರ್ಸುಗಳಲ್ಲಿ ಪತ್ರಿಕೋದ್ಯಮದ ಪರಿಚಯ, ವರದಿ ತಯಾರಿಕೆಯ ರೀತಿ, ಸಂಪಾದನೆ, ಬರವಣಿಗೆ, ಪತ್ರಿಕೆಗಳ ವ್ಯವಸ್ಥಾಪನೆ ಮತ್ತು ಮುದ್ರಣ, ಭಾರತದ ಸಾಂಸ್ಕೃತಿಕ ಹಿನ್ನೆಲೆ ಹಾಗೂ ಪ್ರಚಲಿತ ವ್ಯವಹಾರ ಮೊದಲಾದ ವಿಷಯಗಳನ್ನು ಕಲಿಸಲಾಗುವದಲ್ಲದೆ ಪತ್ರಿಕೋದ್ಯಮದ ಚರಿತ್ರೆ, ಪತ್ರಿಕೆಗಳ ಉದಯ, ಪತ್ರಿಕೆಗಳಿಗೆ ಸಂಬಂಧಿಸಿದ ಕಾಯಿದೆಗಳ ಅಭ್ಯಾಸ, ವರದಿಗಾರರ ಕರ್ತವ್ಯ ಹಾಗೂ ಕಾರ್ಯನಿರ್ವಹಣೆ, ಸುದ್ದಿಗಳ ಮೂಲ, ಸುದ್ದಿಗಳನ್ನು ಬರೆಯುವ ರೀತಿ-ಶೈಲಿ, ಸುದ್ದಿಗಾರರ ಕಾರ್ಯ-ಕರ್ತವ್ಯ ಇವೇ ಪ್ರಮುಖ ವಿಷಯಗಳನ್ನು ಕಲಿಸಲಾಗುವುದು. ಇದಲ್ಲದೆ ಉಪ ಸಂಪಾದಕ, ಸುದ್ದಿ ಸಂಪಾದಕ, ಸಹಾಯಕ ಸಂಪಾದಕ, ಸಂಪಾದಕ ಇವರುಗಳ ಕರ್ತವ್ಯ, ಅರ್ಹತೆ, ಯೋಗ್ಯತೆ, ಹೊಣೆಗಾರಿಕೆ ಹಾಗೂ ಬರವಣಿಗೆಯ ಶೈಲಿ, ವಿಷಯಸಂಗ್ರಹಣಾ ಚತುರತೆ, ಪತ್ರಿಕಾಪರಿಷತ್ತುಗಳ ವರದಿ ಮಾಡುವ ರೀತಿ ಹಾಗೂ ರಾಜಕೀಯ, ಸಾಮಾಜಿಕ, ಆರ್ಥಿಕ ಮತ್ತಿತರ ವಿಷಯಗಳ ವರದಿಗಳ ವೈವಿಧ್ಯತೆ, ಅಣಕಿನ, ವಿಡಂಬನೆಯ ಹಾಸ್ಯದ ಬಳಕೆಯ ಮಹತ್ವ, ಪತ್ರಿಕೆಗಳ ವ್ಯವಸ್ಥೆ, ವ್ಯವಹಾರ ಆಡಳಿತೆ, ಸಾರ್ವಜನಿಕ ಸಂಪರ್ಕ, ಮುದ್ರಣದ ಜ್ಞಾನ ಈ ಎಲ್ಲ ವಿಷಯಗಳ ವ್ಯಾಸಂಗವನ್ನು ಈ ಕೋರ್ಸಿನಲ್ಲಿ ಮಾಡಬೇಕಾಗುತ್ತದೆ.

ಎರಡು ವರ್ಷ ಅವಧಿಯ ಮುಂದುವರಿದ ಕೋರ್ಸಿನಲ್ಲಿ ವಿಶೇಷತಃ ಮಹತ್ವದ ಘಟನೆಗಳ ವರದಿ ತಯಾರಿಸುವ ಕ್ರಮ ಹಾಗೂ ರಾಜಕೀಯ, ಸಾಮಾಜಿಕ, ಆರ್ಥಿಕ, ಕ್ರೀಡಾಕಲಾಪ ಮೊದಲಾದ ವಿಶೇಷ ವರದಿಗಳನ್ನು ತಯಾರಿಸುವ ನಾವಿನ್ಯತೆ, ಶೈಲಿಯ ಮಹತ್ವವನ್ನು ಕಲಿಯುವದರೊಡನೆ ಸಂಸತ್ತು, ವಿಧಾನಸಭೆ ವಿಧಾನಪರಿಷತ್ತು ಮೊದಲಾದ ಕಾರ್ಯಕ್ರಮಗಳ ವರದಿಗಳನ್ನು ತಯಾರುಮಾಡುವ ರೀತಿಯನ್ನೂ ಕಲಿಸಲಾಗುತ್ತದೆ.

ಉಪಸಂಪಾದಕರ ವಿಮರ್ಶಾಪ್ರಜ್ಞೆ, ಸಾರಾಸಾರ ವಿಚಾರ, ಧೋರಣೆ, ರಚನಾತ್ಮಕ ಪ್ರವೃತ್ತಿ, ಮುಖಪುಟ ಹಾಗೂ ಇತರ ಪುಟಗಳ ವಿನ್ಯಾಸ ಯೋಜನೆ, ವಿದೇಶೀಯ ಹಾಗೂ ದೇಶೀಯ ವರದಿಗಳಿಗೆ ಕೊಡಬೇಕಾದ ಪ್ರಾಮುಖ್ಯತೆ ಹಾಗೂ ಯಾವ ಯಾವ ವಿಷಯಕ್ಕೆ ಎಷ್ಟೆಷ್ಟು ಸ್ಥಳ ಹಾಗೂ ಮಹತ್ವವನ್ನು ಕೊಡಬೇಕು ಎಂಬುದರ ಕಲ್ಪನೆ ಹಾಗೂ ವಿವೇಚನೆ, ಪತ್ರಿಕೋದ್ಯಮದಲ್ಲಿ ಹಾಸ್ಯದ ಸ್ಥಾನ, ಔದ್ಯೋಗಿಕ ಪತ್ರಿಕೋದ್ಯಮ, ಚಿತ್ರ ಪತ್ರಿಕೋದ್ಯಮ ಮೊದಲಾದ ಪತ್ರಿಕಾ ವಿಭಾಗಗಳ ವೈವಿಧ್ಯತೆ, ರಾಷ್ಟ್ರೀಯ ಹಾಗೂ ಅಂತಾರಾಷ್ಟ್ರೀಯ ಸುದ್ದಿಸಂಪಾದನೆ ಇವೇ ಪ್ರಮುಖ ವಿಷಯಗಳನ್ನು ಈ ಕೋರ್ಸಿನಲ್ಲಿ ಕಲಿಸಲಾಗುತ್ತದೆ. ಇಷ್ಟೊಂದು ವ್ಯಾಪಕವಾಗಿರುವ ಈ ಕೋರ್ಸಿನ ಹಿನ್ನೆಲೆಯಲ್ಲಿ ಜ್ಯೋತಿಷ್ಯದ ವಿಚಾರವೇನು, ಕಾರಕಗ್ರಹ, ಲಗ್ನ, ಸ್ಥಾನ, ರಾಶ್ಯಾದಿಗಳಾವವು ಎಂಬುದನ್ನು ಪರಿಶೀಲಿಸುವಾ.

ಕಾರಕಗ್ರಹ :— ಫಲಜ್ಯೋತಿಷ್ಯದಲ್ಲಿ ಲೇಖನ ವ್ಯವಸಾಯದ ಬುದ್ಧಿ ಜೀವಿಗಳ ಜೀವನೋಪಾಯದ ಈ ಕೋರ್ಸಿನ ಕಾರಕಗ್ರಹವೆಂದರೆ ಬುಧನು. ಬುಧನು ಬಲಾಢ್ಯನಿರದೆ ಯಾರೂ ಈ ಕೋರ್ಸಿನಲ್ಲಿ ತಜ್ಞತೆ ಪಡೆಯಲಾರರು.

ಪತ್ರಿಕೋದ್ಯಮ ಕೋರ್ಸೆಂದರೆ ಒಂದು ಪ್ರಕಾರದ ಲಲಿತಕಲೆ ಎಂದು ಹೇಳಬಹುದು. ಇದು ಎಲ್ಲರಿಗೂ ಸಾಧಿಸದು. ಆದುದರಿಂದ ಕಲೆಯ ಕಾರಕಗ್ರಹವಾದ ಶುಕ್ರನು ಈ ಕೋರ್ಸಿನ ಕಾರಕಗ್ರಹವು. ಬುಧ-ಶುಕ್ರರ ತರುವಾಯ ಬುದ್ಧಿಜೀವಿಗಳ ಕಾರಕಗ್ರಹಗಳಾದ ಗುರು-ಚಂದ್ರರನ್ನು ಪರಿಶೀಲಿಸಬೇಕು.

ಲಗ್ನ :— ಲಗ್ನದ ದೃಷ್ಟಿಯಿಂದ ಪರಿಶೀಲಿಸಿದರೆ ವೃಷಭ, ಮಿಥುನ, ಕರ್ಕ, ಕನ್ಯಾ, ಧನು, ಮಕರ, ಕುಂಭ, ಮೀನ ಈ ಲಗ್ನದವರೇ ಹೆಚ್ಚಾಗಿರುವದು ಕಂಡುಬರುತ್ತದೆ.

ಸ್ಥಾನ :— ಸ್ಥಾನದೃಷ್ಟಿಯಿಂದ ಪರಿಶೀಲಿಸಿದರೆ ಬುದ್ಧಿಜೀವಿಗಳ ಸ್ಥಾನವಾದ ಪಂಚಮವು, ಬರವಣಿಗೆಯ ಸ್ಥಾನವಾದ ತೃತೀಯವು. ಈ

ಕೋರ್ಸಿನ ಕಾರಕಸ್ಥಾನಗಳಿರುವದರಿಂದ ಈ ಸ್ಥಾನಗಳು ಹಾಗೂ ಈ ಸ್ಥಾನಾಧೀಶರು ಪೋಷಕರಿರಬೇಕು.

ರಾಶಿ :— ರಾಶಿದೃಷ್ಟಿಯಿಂದ ಪರಿಶೀಲಿಸಿದರೆ ಮಿಥುನ, ತುಲಾ, ಕುಂಭ ಈ ರಾಶಿಯವರು ಈ ಕೋರ್ಸಿನಲ್ಲಿ ಪಳಗಿದವರಿರುತ್ತಾರೆ. ಇವುಗಳ ನಂತರ ಕರ್ಕ, ವೃಷಭ, ಕನ್ಯಾ, ಮೀನ ಈ ರಾಶಿಯವರು ಇರುವದು ಕಂಡುಬರುತ್ತದೆ.

## ೨. ಸೈನ್ಸ ಕೋರ್ಸ (Science Course)

ವೈಜ್ಞಾನಿಕ ಶಿಕ್ಷಣ ಪಡೆಯಬೇಕಾದರೆ ಬೇಕಾದ ಒಲವು, ಕುಶಲತೆಗಳೊಡನೆ ವಿಶಿಷ್ಟ ಶೈಕ್ಷಣಿಕ ಅರ್ಹತೆಯೂ ಬೇಕು. ಬಿ. ಎಸ್‌ಸಿ. ಎಮ್ ಎಸ್‌ಸಿ. ಪದವಿಗಳಿಗೆ ವ್ಯಾಸಂಗ ಮಾಡಬೇಕಾದರೆ ಪ್ರಥಮತಃ ಎಸ್. ಎಸ್. ಎಲ್. ಸಿ.ಯಲ್ಲಿ ವಿದ್ಯಾರ್ಥಿಯು ಉತ್ತೀರ್ಣನಾಗಿರಬೇಕು. ಹದಿನಾರು ವರ್ಷಗಳ ವಯೋಮಿತಿ ಮೀರಿರಬೇಕು, ಹಾಗೂ ವಿಷಯಗಳಲ್ಲಿ ಕನಿಷ್ಠ ಸರಾಸರಿ ಶೇಕಡಾ ೪೦ರಷ್ಟು ಗುಣಗಳನ್ನು ಪಡೆದಿರಬೇಕು. ಇದಲ್ಲದೆ ಎಸ್. ಎಸ್. ಎಲ್. ಸಿ.ಯಲ್ಲಿ ಸೈನ್ಸ ವಿಷಯಗಳನ್ನೇ ಐಚ್ಛಿಕ ವಿಷಯವಾಗಿ ತೆಗೆದುಕೊಂಡಿರಬೇಕು. ಆರ್ಟ್ಸ ವಿಷಯಗಳನ್ನು ಐಚ್ಛಿಕವಾಗಿ ಪಡೆದವರು ವಿಜ್ಞಾನ ವಿಷಯ ಬದಲಿಸಿಕೊಂಡು ಶಿಕ್ಷಣ ಮುಂದುವರಿಸಲು ಸಾಧ್ಯವಿಲ್ಲ. ಹೀಗೆ ಎಸ್. ಎಸ್. ಎಲ್. ಸಿ.ಯಲ್ಲಿ ಉತ್ತೀರ್ಣರಾಗಿ ಪಿ. ಯು. ಸಿ.ಯಲ್ಲಿ ಪ್ರವೇಶ ಪಡೆದು ಅಲ್ಲಿ ವಿಜ್ಞಾನದ ವಿಷಯಗಳನ್ನು ಆಯ್ದುಕೊಂಡು ಈ ಪರೀಕ್ಷೆಯಲ್ಲಿ ಉತ್ತೀರ್ಣರಾದ ನಂತರ ಬಿ. ಎಸ್‌ಸಿ.ಯಲ್ಲಿ ಮೂರು ವರ್ಷಗಳ ವ್ಯಾಸಂಗವನ್ನೂ, ಆ ಮುಂದೆ ಎಮ್. ಎಸ್‌ಸಿ. ಗೆ ೨ ವರ್ಷಗಳ ವ್ಯಾಸಂಗವನ್ನೂ ಮಾಡಬೇಕಾಗುತ್ತದೆ.

ವೈಜ್ಞಾನಿಕ ವ್ಯಾಸಂಗ ಮಾಡಬೇಕಾದರೆ ಬಾಹ್ಯಪರೀಕ್ಷೆಯ ಸೌಲಭ್ಯವನ್ನು ಯಾವ ವಿಶ್ವವಿದ್ಯಾಲಯದಲ್ಲಿಯೂ ಮಾಡಿಕೊಟ್ಟಿಲ್ಲ. ಪಿ. ಯು. ಸಿ. ವಿಜ್ಞಾನ ಕೋರ್ಸಿನ ವ್ಯಾಸಂಗ ಕಾಲದಲ್ಲಿ ಕೆಲವು ವಿಶ್ವವಿದ್ಯಾಲಯಗಳಲ್ಲಿ ಕಡ್ಡಾಯದ ವಿಷಯಗಳಾದ ಇಂಗ್ಲೀಷ್ ಮತ್ತು ಯಾವುದೊಂದು ಆಧುನಿಕ ಭಾರತೀಯ ಭಾಷೆ ಇವನ್ನು ತೆಗೆದುಕೊಳ್ಳಬೇಕಲ್ಲದೆ ವಿಜ್ಞಾನದ

ವಿಷಯಗಳಾದ ಮೂರು ವಿಷಯಗಳನ್ನು ನಿರ್ದಿಷ್ಟಗೊಳಿಸಬೇಕು. ಕೆಲವು ವಿಶ್ವವಿದ್ಯಾಲಯಗಳಲ್ಲಿ ನಾಲ್ಕು ವಿಷಯಗಳನ್ನು ನಿರ್ದಿಷ್ಟಗೊಳಿಸಲಾಗಿದೆ.

ಬಿ. ಎಸ್‌ಸಿ. ೧ ಕೋರ್ಸಿಗೆ ಕಡ್ಡಾಯ ವಿಷಯಗಳನ್ನು ಬಿಟ್ಟು ಮೂರು ವಿಷಯಗಳನ್ನು ತೆಗೆದುಕೊಳ್ಳಬೇಕಾಗುತ್ತದೆ. ಈ ಹಂತದಲ್ಲಿ ಭೌತಶಾಸ್ತ್ರ, ರಸಾಯನಶಾಸ್ತ್ರ ಹಾಗೂ ಗಣಿತಶಾಸ್ತ್ರ (ಪಿ. ಸಿ. ಎಮ್.) ವನ್ನು ಆಯ್ದುಕೊಂಡವರು ಇಂಜನಿಯರಿಂಗ್ ವ್ಯಾಸಂಗಕ್ಕೂ, ಭೌತಶಾಸ್ತ್ರ, ರಸಾಯನಶಾಸ್ತ್ರ ಹಾಗೂ ಜೀವಶಾಸ್ತ್ರ, ಅಥವಾ ರಸಾಯನಶಾಸ್ತ್ರ, ಸಸ್ಯಶಾಸ್ತ್ರ, ಪ್ರಾಣಿಶಾಸ್ತ್ರ ತೆಗೆದುಕೊಂಡವರು ವೈದ್ಯಕೀಯಶಾಸ್ತ್ರದ ಶಿಕ್ಷಣವನ್ನು ಮುಂದುವರಿಸಬಹುದು.

ರಸಾಯನಶಾಸ್ತ್ರ ಮುಖ್ಯ ವಿಷಯವಾಗಿಟ್ಟುಕೊಂಡರು ಟೆಕ್ಸ್‌ಟೈಲ್ ಟೆಕ್ನಾಲಜಿ, ಪೇಪರ್ ಟೆಕ್ನಾಲಜಿ, ಫುಡ್ ಟೆಕ್ನಾಲಜಿ, ರಬ್ಬರ್ ಟೆಕ್ನಾಲಜಿ, ಕೆಮಿಕಲ್ ಟೆಕ್ನಾಲಜಿ, ಪೇಂಟಿಂಗ್ ಟೆಕ್ನಾಲಜಿ ಮೊದಲಾದ ಬಿ.ಎಸ್‌ಸಿ. ಟೆಕ್ನಾಲಜಿ ಅಭ್ಯಾಸವನ್ನು ಮುಂದುವರಿಸಬಹುದು. ಬಿ. ಎಸ್‌ಸಿ. ೨ರಲ್ಲಿ ಭೌತಶಾಸ್ತ್ರ, ರಸಾಯನಶಾಸ್ತ್ರ, ಗಣಿತಶಾಸ್ತ್ರ, ಪ್ರಾಣಿಶಾಸ್ತ್ರ, ಸಸ್ಯಶಾಸ್ತ್ರ, ಜೀವಶಾಸ್ತ್ರ ಮೊದಲಾದ ವಿಷಯಗಳಲ್ಲಿ ಒಂದನ್ನು ಮುಖ್ಯ ವಿಷಯವನ್ನಾಗಿಯೂ ಮತ್ತೆ ಯಾವುದಾದರೊಂದನ್ನು ಉಪಮುಖ್ಯ ವಿಷಯವನ್ನಾಗಿಯೂ ಅಭ್ಯಾಸಮಾಡಬಹುದು.

ಎಮ್. ಎಸ್‌ಸಿ. ಹಂತದಲ್ಲಿ ಮುಖ್ಯವಾಗಿ ತೆಗೆದುಕೊಂಡ ವಿಷಯಗಳಲ್ಲಿ ಉಪಭಾಗಗಳನ್ನು ತೆಗೆದುಕೊಂಡು ತಜ್ಞತೆ ಪಡೆಯಲಾಗುತ್ತದೆ. ಉದಾಹರಣೆಗಾಗಿ: ಭೌತಶಾಸ್ತ್ರವನ್ನು ಮುಖ್ಯವಾದ ವಿಷಯವಾಗಿ ಆಯ್ದುಕೊಂಡ ಬಿ. ಎಸ್‌ಸಿ. ಪದವಿ ಪಡೆದವರು ಎಮ್. ಎಸ್‌ಸಿ.ಗೆ ನ್ಯೂಕ್ಲಿಯರ್ ಫಿಜಿಕ್ಸ್, ಸ್ಪೆಕ್ಟ್ರೋಸ್ಕೋಪಿ, ರೇಡಿಯೋ ಫಿಜಿಕ್ಸ್ ಮುಂತಾದ ವಿಷಯಗಳಲ್ಲಿ ತಜ್ಞತೆ ಪಡೆಯಬಹುದಾಗಿದೆ.

ಹೀಗೆ ವೈಜ್ಞಾನಿಕ ಶಿಕ್ಷಣದ ವಿಷಯಸಂಯೋಜನೆ, ವಿದ್ಯಾರ್ಹತೆ, ವಯೋಮಿತಿ ಮೊದಲಾವುಗಳಿದ್ದರೆ ಫಲಜ್ಯೋತಿಷ್ಯದ ಮೇರೆಗೆ ಈ ಕೋರ್ಸನ್ನು ಪಡೆಯಲು ಅರ್ಥಾತ್ ವೈಜ್ಞಾನಿಕ ಶಿಕ್ಷಣ ಪಡೆಯಲು

ಜಾತಕ ಎಂತಿರಬೇಕು, ಗ್ರಹ, ಲಗ್ನ, ಸ್ಥಾನಾದಿಗಳು ಯಾವವು, ಕಾರಕವಾಗಿ ಪರಿಣಾಮ ಬೀರಬಲ್ಲವುಗಳು ಯಾವವು ಎಂದುದನ್ನು ಪರಿಶೀಲಿಸುವಾ.

**ಕಾರಕ ಗ್ರಹ :—** ವಿಜ್ಞಾನ ಕೋರ್ಸುಗಳಾದ ಬಿ. ಎಸ್‌ಸಿ., ಎಮ್. ಎಸ್‌ಸಿ. ಮೊದಲಾದ ಕೋರ್ಸುಗಳ ಶಿಕ್ಷಣ ಪಡೆಯಲು ಜಾತಕದಲ್ಲಿ ಯಾವ ಗ್ರಹಗಳು ಕಾರಕವಾಗಿ ಪರಿಣಾಮ ಬೀರುತ್ತವೆ ಎಂದು ಪ್ರಶ್ನಿಸಿದರೆ ಉತ್ತರ ಕೊಡುವದು ತುಂಬ ಕ್ಲಿಷ್ಟಕರವಾದ ಸಂಗತಿ. ಏಕೆಂದರೆ ಈ ಕೋರ್ಸಿನಲ್ಲಿ ಅನೇಕ ವಿಷಯಗಳಿದ್ದು ಭಿನ್ನ ಭಿನ್ನ ವಿಷಯಗಳಿಗೆ ಭಿನ್ನ ಭಿನ್ನ ಗ್ರಹಗಳು ಕಾರಕವಾಗಿರುತ್ತವೆ. ಇದಲ್ಲದೆ ಯಾವುದೊಂದು ವಿಷಯಕ್ಕೆ ಅನೇಕ ಗ್ರಹಗಳು ಕಾರಕವಿರುತ್ತವೆ. ಅವನ್ನು ಈ ಕೆಳಗಿನಂತೆ ಕೊಡಲಾಗಿದೆ: -

ಭೌತಶಾಸ್ತ್ರಕ್ಕೆ ಕುಜನೂ, ರಸಾಯನಶಾಸ್ತ್ರಕ್ಕೆ ಶನಿ-ಚಂದ್ರರೂ ಜೀವ ಹಾಗೂ ಪ್ರಾಣಿಶಾಸ್ತ್ರಗಳಿಗೆ ರವಿಯೂ, ಸಸ್ಯಶಾಸ್ತ್ರಕ್ಕೆ ಚಂದ್ರನೂ, ಭೂಗರ್ಭಶಾಸ್ತ್ರಕ್ಕೆ ಶನಿ-ಅಂಗಾರಕರೂ, ಗಣಿತಶಾಸ್ತ್ರಕ್ಕೆ ಬುಧ, ಗುರು, ಮಂಗಳರೂ, ಅದರಲ್ಲಿಯೂ ಬೀಜಗಣಿತಕ್ಕೆ ಹಾಗೂ ಕ್ಯಾಲ್ಕ್ಯುಲಸ್‌ಗೆ ಬುಧನೂ, ಅಂಕಗಣಿತಕ್ಕೆ ಗುರು-ಮಂಗಳರೂ, ಭೂಮಿತಿ ಹಾಗೂ ತ್ರಿಕೋನಮಿತಿ ಶಾಸ್ತ್ರಗಳಿಗೆ ಶುಕ್ರ-ಚಂದ್ರರೂ ಕಾರಕಗ್ರಹಗಳಾಗಿರುತ್ತಾರೆ. ಹೀಗೆ ಭಿನ್ನ ಭಿನ್ನ ವಿಷಯಗಳಿಗೆ ಭಿನ್ನ ಭಿನ್ನ ಗ್ರಹಗಳು ಕಾರಕವಿರುವದರಿಂದ ವಿಜ್ಞಾನ ಕೋರ್ಸಿಗೆ ನಿರ್ದಿಷ್ಟ ಗ್ರಹವೇ ಕಾರಕವೆಂದು ಹೇಳಲು ಬಾರದು. ಆದರೆ ಒಂದು ಸಂಗತಿ ನಿಜ. ಈ ಕೋರ್ಸಿನ ವಿದ್ಯಾರ್ಥಿಗಳ ಜಾತಕದಲ್ಲಿ ರವಿ-ಶನಿ-ಮಂಗಳರು ಇತರ ಗ್ರಹಗಳಿಗಿಂತ ಹೆಚ್ಚು ಬಲಾಢ್ಯರಿರುವದು ಕಂಡುಬರುತ್ತದೆ.

**ಸ್ಥಾನ :—** ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ನಾಲ್ಕು ಸ್ಥಾನಗಳು ಕಾರಕವಾಗಿರುತ್ತವೆ. ಥೇರಿಗಾಗಿ ಪಂಚಮಸ್ಥಾನವೂ, ಪ್ರಯೋಗ ಶಿಕ್ಷಣಕ್ಕಾಗಿ ತೃತೀಯ, ಷಷ್ಠ ಸ್ಥಾನಗಳೂ, ಮೌಖಿಕಕ್ಕಾಗಿ ದ್ವಿತೀಯ ಸ್ಥಾನವೂ ಕಾರಕವಿರುತ್ತವೆ. ಆದುದರಿಂದ ಈ ಸ್ಥಾನಗಳೂ ಹಾಗೂ ಈ ಸ್ಥಾನಾಧೀಶರೂ ಪೋಷಕವಿರುವ ವಿದ್ಯಾರ್ಥಿಗಳು ಈ ಕೋರ್ಸಿನಲ್ಲಿ ಯಶಸ್ಸು ಪಡೆಯುತ್ತಾರೆ.

ಲಗ್ನ :— ಲಗ್ನದ ದೃಷ್ಟಿಯಿಂದ ಪರಿಶೀಲಿಸಿದರೆ ಬಿ. ಎಸ್‌ಸಿ., ಎಮ್. ಎಸ್‌ಸಿ. ಮೊದಲಾದ ಕೋರ್ಸುಗಳ ಶಿಕ್ಷಣ ಪಡೆಯಲು ನಿರ್ದಿಷ್ಟ ಲಗ್ನದ ವಿದ್ಯಾರ್ಥಿಗಳೇ ಈ ಕೋರ್ಸನ್ನು ಮುಗಿಸುವರೆಂದು ಹೇಳುವದು ಕಠಿಣ. ಏಕೆಂದರೆ ಈ ಕೋರ್ಸುಗಳಲ್ಲಿ ಅನೇಕ ವಿಷಯಗಳಿದ್ದು ಭಿನ್ನ ಭಿನ್ನ ವಿಷಯಗಳಿಗೆ ಭಿನ್ನ ಭಿನ್ನ ಲಗ್ನಗಳು ಕಾರಕವಿರುತ್ತವೆ. ಅವನ್ನು ಈ ಕೆಳಗಿನಂತೆ ಕೊಡಲಾಗಿದೆ:

ಭೌತಶಾಸ್ತ್ರಕ್ಕೆ, ಮೇಷ, ವೃಷಭ, ಕರ್ಕ, ಸಿಂಹ, ವೃಶ್ಚಿಕ, ಧನು ಈ ಲಗ್ನಗಳೂ, ರಸಾಯನಶಾಸ್ತ್ರಕ್ಕೆ ವೃಷಭ, ತುಲಾ, ಮಿಥುನ, ವೃಶ್ಚಿಕ, ಮಕರ, ಕುಂಭ, ಮೀನ ಈ ಲಗ್ನಗಳೂ, ಸಸ್ಯಶಾಸ್ತ್ರಕ್ಕೆ ಮೇಷ, ಮಿಥುನ, ಕರ್ಕ, ತುಲಾ, ವೃಶ್ಚಿಕ ಈ ಲಗ್ನಗಳೂ, ಜೀವ ಹಾಗೂ ಪ್ರಾಣಿಶಾಸ್ತ್ರಕ್ಕೆ ಮೇಷ, ವೃಷಭ, ಸಿಂಹ, ವೃಶ್ಚಿಕ, ಧನು ಈ ಲಗ್ನಗಳೂ, ಅವರಲ್ಲಿಯೂ ಜೀವಶಾಸ್ತ್ರಕ್ಕೆ ಮೇಷ, ಕರ್ಕ, ತುಲಾ, ವೃಶ್ಚಿಕ ಈ ಲಗ್ನಗಳೂ, ಭೂಗರ್ಭ ಶಾಸ್ತ್ರಕ್ಕೆ ಮೇಷ, ಕರ್ಕ, ತುಲಾ, ವೃಶ್ಚಿಕ, ಮಕರ, ಮೀನ ಈ ಲಗ್ನಗಳೂ ಗಣಿತಶಾಸ್ತ್ರಕ್ಕೆ ಮೇಷ, ವೃಷಭ, ಮಿಥುನ, ಕರ್ಕ, ಸಿಂಹ, ವೃಶ್ಚಿಕ, ಧನು ಈ ಲಗ್ನಗಳೂ ಕಾರಕವಿರುತ್ತವೆ. ಹೀಗೆ ಭಿನ್ನ ಭಿನ್ನ ವಿಷಯಗಳನ್ನು ಐಚ್ಛಿಕ ವಿಷಯಗಳನ್ನಾಗಿ ತೆಗೆದುಕೊಂಡು ಬಿ. ಎಸ್‌ಸಿ., ಎಮ್.ಎಸ್‌ಸಿ. ಮೊದಲಾದ ಪದವೀಧರರಾಗಲು ವಿಭಿನ್ನ ಲಗ್ನಗಳು ಕಾರಕವಿರುತ್ತವೆ.

ರಾಶಿ :— ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ನಿರ್ದಿಷ್ಟ ರಾಶಿಯವರೇ ವಿಜ್ಞಾನ ಕೋರ್ಸನ್ನು ಪಡೆಯುವರೆಂದು ಹೇಳಲು ಬಾರದು.

### ಯಾವ ಗುಂಪಿನ (Group) ವಿಷಯುವನ್ನು ಹಾಗೂ ಯಾವ ಮುಖ್ಯ ವಿಷಯುವನ್ನಾಗಿ ತೆಗೆದುಕೊಳ್ಳಬೇಕು ?

ಇಲ್ಲಿಯವರೆಗೆ ವಿಜ್ಞಾನ ಕೋರ್ಸುಗಳ ಶಿಕ್ಷಣ ಪಡೆಯಲು ಜಾತಕ ಹೇಗಿರಬೇಕು, ಕಾರಕಗ್ರಹ, ಲಗ್ನ, ಸ್ಥಾನಾದಿಗಳು ಯಾವವು ಎಂಬುದನ್ನು ವಿವರಿಸಿದ್ದಾಯಿತು. ಆದರೆ ನಮ್ಮ ವಿದ್ಯಾರ್ಥಿಗಳ ಮೂಲ ಹಾಗೂ ಮುಖ್ಯ ಸಮಸ್ಯೆಗಳೆಂದರೆ ಯಾವ ಗುಂಪಿನ ವಿಷಯಗಳನ್ನು ತೆಗೆದುಕೊಳ್ಳಬೇಕು

ಎಂಬ ಸಮಸ್ಯೆ ಉದ್ಭವಿಸುವುದು. ಇದು ಹೆಚ್ಚಾಗಿ ಪಿ. ಯು. ಸಿ. ಹಾಗೂ ಬಿ. ಎಸ್‌ಸಿ. ೧ ಈ ವಿದ್ಯಾರ್ಥಿಗಳಿಗೆ ತಲೆ ಕೆಡಿಸುವ ಸಮಸ್ಯೆಯಾಗಿರುತ್ತದೆ. ಈ ಹಂತವು ವಿಜ್ಞಾನದ ವಿದ್ಯಾರ್ಥಿಗೆ ಅತ್ಯಂತ ಮಹತ್ವದ್ದಾಗಿದೆ. ಏಕೆಂದರೆ, ಇದನ್ನು ದಾಟಿದ ನಂತರ ಒಂದು ದೊಡ್ಡ ಗಿಡವು ಹಲವಾರು ಟಿಸಿಲುಗಳೊಡೆಯುವಂತೆ ಹಲವಾರು ಕೋರ್ಸುಗಳು ಉಪಲಬ್ಧವಿವೆ. ಇಲ್ಲಿ ಅವನು ತಪ್ಪಿದರೆ ಮುಂದೆ ಅವನ ಭವಿಶವ್ಯದ ಮೇಲೆ ಗಂಭೀರ ಪರಿಣಾಮವಾಗದಿರದು. ಈ ಸಮಸ್ಯೆಗಳಿಗೆ ಉತ್ತರ ಕೊಡುವ ಪೂರ್ವದಲ್ಲಿ ಗುಂಪುಗಳಲ್ಲಿ ಪ್ರಕಾರಗಳೆಷ್ಟು, ಆಯಾ ಗುಂಪುಗಳಲ್ಲಿರುವ ವಿಷಯಗಳಾವವು ಎಂಬುದನ್ನು ಮೊದಲು ಪರಿಶೀಲಿಸಬೇಕು.

ಸಾಮಾನ್ಯವಾಗಿ ವಿಜ್ಞಾನ ವಿಷಯಗಳನ್ನು ನಾಲ್ಕು ಗುಂಪುಗಳನ್ನಾಗಿ ವರ್ಗೀಕರಿಸಲಾಗಿದೆ. ೧) ಪಿ. ಸಿ. ಎಮ್. ಎಂದರೆ ಭೌತಶಾಸ್ತ್ರ, ರಸಾಯನಶಾಸ್ತ್ರ, ಗಣಿತಶಾಸ್ತ್ರ ಈ ವಿಷಯಗಳನ್ನೊಳಗೊಂಡ ಗುಂಪಾಗಿರುತ್ತದೆ. ೨) ಎರಡನೆಯದಾಗಿ ಪಿ. ಸಿ. ಬಿ. ಅಂದರೆ ಭೌತಶಾಸ್ತ್ರ, ರಸಾಯನಶಾಸ್ತ್ರ, ಜೀವಶಾಸ್ತ್ರಗಳ ವಿಷಯಗಳ ಗುಂಪು. ೩) ಮೂರನೆಯದಾಗಿ ಸಿ. ಬಿ. ಝಡ್. ಅಂದರೆ ರಸಾಯನಶಾಸ್ತ್ರ, ಸಸ್ಯಶಾಸ್ತ್ರ, ಪ್ರಾಣಿಶಾಸ್ತ್ರಗಳ ಗುಂಪು. ೪) ನಾಲ್ಕನೆಯದಾಗಿ ಸಾಮಾನ್ಯ ಗುಂಪು ಅಂದರೆ ಗಣಿತಶಾಸ್ತ್ರ, ಭೂಗರ್ಭಶಾಸ್ತ್ರ, ಭೂಗೋಲಶಾಸ್ತ್ರ ಈ ಮೊದಲಾದ ಶಾಸ್ತ್ರಗಳನ್ನು ಮುಖ್ಯ ವಿಷಯಗಳನ್ನಾಗಿ ತೆಗೆದುಕೊಳ್ಳುವ ಗುಂಪು. ಹೀಗೆ ನಾಲ್ಕು ಗುಂಪುಗಳಿದ್ದು ಆಯಾ ಗುಂಪುಗಳ ಕಾರಕಗ್ರಹಗಳು ವಿಭಿನ್ನವಿದ್ದು ಅವುಗಳನ್ನು ಈ ಕೆಳಗಿನಂತೆ ಕೊಡಲಾಗಿದೆ.

೧) ಪಿ. ಸಿ. ಎಮ್. ಗುಂಪನ್ನು ಆಯ್ದುಕೊಳ್ಳಲು ಜಾತಕದಲ್ಲಿ ಮಂಗಳ, ಗುರು, ಬುಧ, ಶನಿ, ಚಂದ್ರರು ಜಾತಕದಲ್ಲಿ ಪೋಷಕರಿರಬೇಕು. ಅದರಲ್ಲಿಯೂ ಗುರು, ಮಂಗಳ, ಬುಧರು ಬಲಾಢ್ಯರಿರಬೇಕು. ೨) ಪಿ. ಸಿ. ಬಿ. ಗುಂಪಿನ ವಿಷಯಗಳನ್ನು ಆಯ್ದುಕೊಳ್ಳಲು ಜಾತಕದಲ್ಲಿ ಬುಧ, ಗುರು, ರವಿ, ಚಂದ್ರ, ಶನಿಯರು ಬಲಾಢ್ಯರಿರಬೇಕು. ಅದರಲ್ಲಿಯೂ ರವಿ, ಚಂದ್ರ, ಶನಿಯರು ಹೆಚ್ಚು ಬಲಾಢ್ಯರಿರಬೇಕು. ೩) ಮೂರನೆಯದಾಗಿ

ಸಿ. ಬಿ. ರಘುಡ್. ಗುಂಪಿನ ವಿಷಯವನ್ನು ಆಯ್ದುಕೊಳ್ಳಲು ಜಾತಕದಲ್ಲಿ ರವಿ, ಚಂದ್ರ, ಶನಿಯರು ಬಲಾಢ್ಯರಿರಬೇಕು. ೪) ನಾಲ್ಕನೆಯದಾಗಿ ಭೂಗರ್ಭಶಾಸ್ತ್ರದ ಹಾಗೂ ಭೂಗೋಲ ವಿಷಯಗಳನ್ನು ಆಯ್ದುಕೊಳ್ಳಲು ಜಾತಕದಲ್ಲಿ ಶಶಿ-ಅಂಗಾರಕರು ಬಲಾಢ್ಯರಿರಬೇಕು. ಹೀಗೆ ವಿಭಿನ್ನ ಗುಂಪುಗಳನ್ನು ಆಯ್ದುಕೊಳ್ಳಲು ವಿಭಿನ್ನ ಗ್ರಹಗಳು ಜಾತಕದಲ್ಲಿ ಪೋಷಕ ವಿರಬೇಕು.

ಯಾವುದೊಂದು ಗುಂಪಿನ ವಿಷಯವನ್ನು ಆಯ್ದುಕೊಂಡ ಬಳಿಕ ಮುಖ್ಯ ಹಾಗೂ ಉಪಮುಖ್ಯ ವಿಷಯಗಳನ್ನಾ ಹೇಗೆ ಆಯ್ದುಕೊಳ್ಳಬೇಕೆಂಬ ಮತ್ತೊಂದು ಸಮಸ್ಯೆ ಉದ್ಭವಿಸುತ್ತದೆ. ಈ ಸಮಸ್ಯೆಗೆ ಉತ್ತರಕೊಡುವ ಪೂರ್ವದಲ್ಲಿ ನಾವು ಜಾತಕನ ಜಾತಕವನ್ನು ಪರಿಶೀಲಿಸಿ ಜಾತಕದ ಯಾವ ಗ್ರಹ ಅಥವಾ ಯಾವ ಗ್ರಹಗಳು ಬಲಾಢ್ಯ ಹಾಗೂ ಪೋಷಕವಿವೆಯೆಂಬು ದನ್ನು ಮೊದಲು ನಿರ್ಧರಿಸಬೇಕು. ಯಾವುದೊಂದು ಗ್ರಹವು ಜಾತಕದಲ್ಲಿ ಬಲಿಷ್ಠವಿದೆಯೆಂದು ನಿರ್ಧರಿಸಲು ನಾವು ಐದು ಸಂಗತಿಗಳನ್ನು ಲಕ್ಷ್ಯದಲ್ಲಿಡ ಬೇಕು. ೧) ಗ್ರಹಕ್ಕೆ ರಾಶಿಬಲವಿರಬೇಕು. ೨) ಸ್ಥಾನಬಲವಿರಬೇಕು. ೩) ಯೋಗಕಾರಕವಿರಬೇಕು. ೪) ಶಿಕ್ಷಣಕಾರಕವಿರಬೇಕು. ೫) ಅದು ಶತ್ರುಗ್ರಹಯುಕ್ತ, ಶತ್ರುಗ್ರಹಮಧ್ಯ, ಶತ್ರುಗ್ರಹದೃಷ್ಟವಿರಕೂಡದು.

ಹೀಗೆ ಮೇಲೆ ಹೇಳಿದ ಐದು ಸಂಗತಿಗಳು ಪೋಷಕವಿದ್ದ ಗ್ರಹದ ಕಾರಕವಿಷಯವನ್ನೇ ಮುಖ್ಯ ವಿಷಯವನ್ನಾಗಿ ಆಯ್ದುಕೊಳ್ಳಬೇಕು. ಮೇಲಿನ ಐದು ಸಂಗತಿಗಳಲ್ಲಿ ಒಂದೆರಡು ಸಂಗತಿಗಳು ಪೋಷಕವಿದ್ದ ಗ್ರಹದ ವಿಷಯವನ್ನು ಉಪಮುಖ್ಯ ವಿಷಯವನ್ನಾಗಿ ಆಯ್ದುಕೊಳ್ಳಬೇಕು. ಉದಾ **ಹರಣೆಗೆ—** ಮಂಗಳನು ಜಾತಕದಲ್ಲಿ ಬಲಾಢ್ಯನಿದ್ದರೆ ಭೌತಶಾಸ್ತ್ರವನ್ನೂ, ರವಿ-ಚಂದ್ರರು ಬಲಾಢ್ಯರೂ, ಪೋಷಕರೂ ಇದ್ದರೆ ಜೀವಶಾಸ್ತ್ರವನ್ನೂ, ಶನಿ-ಚಂದ್ರರು ಬಲಾಢ್ಯರೂ, ಪೋಷಕರೂ ಇದ್ದರೆ ರಸಾಯನಶಾಸ್ತ್ರ ವನ್ನೂ, ಗುರು, ಮಂಗಳ, ಬುಧರು ಪೋಷಕರೂ, ಬಲಾಢ್ಯರೂ ಇದ್ದರೆ ಗಣಿತಶಾಸ್ತ್ರವನ್ನೂ ಮುಖ್ಯ ವಿಷಯವನ್ನಾಗಿ ಆಯ್ದುಕೊಳ್ಳಬೇಕು. ಹೀಗೆ

ಗ್ರಹಗಳ ರಾಶಿಬಲ, ಸ್ಥಾನಬಲ, ಯೋಗಕಾರಕ, ಶಿಕ್ಷಣಕಾರಕಬಲ ಮೊದಲಾದ ಬಲಾಬಲಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿ ಗುಂಪುಗಳನ್ನು ನಿರ್ಧರಿಸಬೇಕು, ಹಾಗು ಉಪಮುಖ್ಯ ವಿಷಯಗಳನ್ನು ಆಯ್ದುಕೊಳ್ಳಬೇಕು.

## ೩. ವಾಣಿಜ್ಯ ಕೋರ್ಸುಗಳು

ಜನಜೀವನದ ದೈನಂದಿನ ಕಾರ್ಯಕಲಾಪಗಳಲ್ಲಿ ಯಶಸ್ವಿಯಾಗಲು ವ್ಯವಹಾರ ಕುಶಲತೆ ಹೇಗೆ ಅವಶ್ಯವೋ ಹಾಗೆಯೇ ರಾಷ್ಟ್ರದ ಆಂತರಿಕ ಹಾಗೂ ಬಾಹ್ಯ ವ್ಯವಹಾರಗಳಲ್ಲಿ ಯಶಸ್ವಿಯಾಗಲು ವಾಣಿಜ್ಯಶಾಸ್ತ್ರದ ಅಭ್ಯಾಸ ಬಹಳ ಮಹತ್ವವಾದದ್ದಿರುತ್ತದೆ. ಅಂತಾರಾಷ್ಟ್ರೀಯ ವಾಣಿಜ್ಯ ರಂಗ ವಿಸ್ತರಣೆಗೊಳ್ಳುತ್ತಿರುವಂತೆ ಈ ಕ್ಷೇತ್ರವೂ ವಿಸ್ತಾರಗೊಳ್ಳುತ್ತಿದೆ.

ಈ ಹಿನ್ನೆಲೆಯಲ್ಲಿ ವಾಣಿಜ್ಯ ಕೋರ್ಸಿನ ಅಭ್ಯಾಸ ಹಾಗೂ ವಿಶ್ವವಿದ್ಯಾಲಯಗಳಲ್ಲಿ ಈ ಕೋರ್ಸಿನ ವ್ಯಾಸಂಗಕ್ಕೆ ಇರುವ ನಿಯಮಗಳು, ನಿರ್ಬಂಧನೆಗಳು ಹಾಗೂ ಇದಕ್ಕಾಗಿ ಆಯ್ದುಕೊಳ್ಳುವ ವಿಷಯಗಳ ಬಗೆಗೆ ವಿವೇಚಿಸೋಣ.

ಯಾವುದೇ ವಿದ್ಯಾರ್ಥಿಯು ಎಸ್. ಎಸ್. ಎಲ್. ಸಿ. ಯಲ್ಲಿ ವಾಣಿಜ್ಯ ಅಥವಾ ಆರ್ಟ್ಸ ವಿಷಯಗಳನ್ನು ಐಚ್ಛಿಕ ವಿಷಯಗಳನ್ನಾಗಿ ಪಡೆದವ ೧೬ ವರ್ಷ ವಯಸ್ಸಾಗಿದ್ದರೆ ಪಿ. ಯು. ಸಿ. ಕಾಮರ್ಸ ಕೋರ್ಸಿಗೆ ಪ್ರವೇಶ ಪಡೆಯಲು ಅರ್ಹನಾಗುತ್ತಾನೆ. ಅಲ್ಲಿ ಒಂದು ವರ್ಷದ ಅವಧಿಯಲ್ಲಿ ಜಮಾಖರ್ಚು, ಅರ್ಥಶಾಸ್ತ್ರ, ವಾಣಿಜ್ಯಶಾಸ್ತ್ರ ಈ ಪ್ರಮುಖ ವಿಷಯಗಳೊಡನೆ ಉಳಿದ ಆರ್ಟ್ಸ ವಿಷಯಗಳನ್ನು ಆಯ್ದುಕೊಳ್ಳಬೇಕಾಗುತ್ತದೆ.

ಪಿ. ಯು. ಸಿ. ಕಾಮರ್ಸ ಮುಗಿಸಿದ ನಂತರ ವಿದ್ಯಾರ್ಥಿಗೆ ಬಿ. ಕಾಮ್. ಒಂದಕ್ಕೇ ಪ್ರವೇಶ ದೊರೆಯುತ್ತದೆ. ಬಿ. ಕಾಮ್. ಪದವಿ ಕೋರ್ಸು ಪಿ. ಯು. ಸಿ. ನಂತರ ಮೂರು ವರ್ಷಗಳದ್ದಿರುತ್ತದೆ. ಪಿ. ಯು. ಸಿ. ಯಲ್ಲಿ ಆರ್ಟ್ಸ ಅಥವಾ ಕಾಮರ್ಸ ತೆಗೆದುಕೊಂಡ ವಿದ್ಯಾರ್ಥಿಗಳಿಗೂ ಬಿ. ಕಾಮ್. ೧ ರ ಪರೀಕ್ಷೆಗೆ ಪ್ರವೇಶಾರ್ಹತೆ ದೊರೆಯುತ್ತದೆ.

ಬಿ.ಕಾಮ್. ೧ರ ಪರೀಕ್ಷೆಯಲ್ಲಿ ಕಡ್ಡಾಯ ವಿಷಯಗಳಾದ ಇಂಗ್ಲೀಷ, ಪ್ರಾಂತೀಯ ಭಾಷೆ, ಅಕೌಂಟನ್ಸಿ, ಅರ್ಥಶಾಸ್ತ್ರ ತತ್ತ್ವಗಳು, ಮಾರುಕಟ್ಟೆ ಹಾಗೂ ಮಾರಾಟದ ಶಾಸ್ತ್ರ ಇವುಗಳನ್ನು ಅಭ್ಯಾಸ ಮಾಡುವದರೊಡನೆ ಗಣಿತಶಾಸ್ತ್ರ, ಸೆಕ್ರೇಟರಿಯಲ್ ಅಭ್ಯಾಸ, ವಿಮೆ ಈ ಮೂರು ವಿಷಯಗಳಲ್ಲಿ ಒಂದನ್ನು ಐಚ್ಛಿಕ ವಿಷಯವನ್ನಾಗಿ ತೆಗೆದುಕೊಳ್ಳಬಹುದು.

ಬಿ. ಕಾಮ್. ೧ ರಲ್ಲಿ ಉತ್ತೀರ್ಣನಾದ ವಿದ್ಯಾರ್ಥಿಗೆ ಬಿ. ಕಾಮ್. ೨ ರ ಪರೀಕ್ಷೆಗೆ ಪ್ರವೇಶ ದೊರೆಯುತ್ತದೆ. ಬಿ. ಕಾಮ್. ೨ ರ ಪರೀಕ್ಷೆಯಲ್ಲಿ ೬ ವಿಷಯಗಳಾದ ಇಂಗ್ಲೀಷ, ಅಕೌಂಟನ್ಸಿ ತತ್ತ್ವಗಳು, ಭಾರತದಲ್ಲಿಯ ಬ್ಯಾಂಕಿಂಗ್ ಕಾಯಿದೆ ಮತ್ತು ಅಭ್ಯಾಸ, ವ್ಯಾಪಾರ ಸಂಘಟನೆ ಮತ್ತು ಹಣಕಾಸು, ಅರ್ಥಶಾಸ್ತ್ರತತ್ತ್ವಗಳು, ಅಂಕಿ-ಸಂಖ್ಯಾಶಾಸ್ತ್ರ ಇವೇ ಆರು ವಿಷಯಗಳು ಇರುತ್ತವೆ.

ಬಿ.ಕಾಮ್. ೩ರ ಪರೀಕ್ಷೆಗೂ ಅವೇ ಆರು ವಿಷಯಗಳ ಕಡ್ಡಾಯವಿದೆ. ಆದರೆ ಈ ಪರೀಕ್ಷೆಯಲ್ಲಿ ಕೆಲವು ವಿಷಯಗಳನ್ನು ಬಿಟ್ಟು ಬದಲೀ ವಿಷಯಗಳ ಆಯ್ಕೆಗೆ ಅವಕಾಶವಿದೆ. ಇಂಗ್ಲೀಷ, ವ್ಯಾಪಾರ ಸಂಘಟನೆ ಮತ್ತು ಹಣ-ಕಾಸು, ವಾಣಿಜ್ಯಕಾಯ್ದೆ, ಅರ್ಥಶಾಸ್ತ್ರತತ್ತ್ವ, ಭಾರತೀಯ ಆರ್ಥಿಕ ಸಮಸ್ಯೆಗಳು ಈ ಐದು ವಿಷಯಗಳನ್ನು ಕಡ್ಡಾಯವಾಗಿಯೂ, ಅಡ್ವಾನ್ಸ್ಡ ಅಕೌಂಟನ್ಸಿ ಮತ್ತು ಆಡಿಟಂಗ, ಅಡ್ವಾನ್ಸ್ಡ ಬ್ಯಾಂಕಿಂಗ್, ವ್ಯಾಪಾರಿಕ ಅಂಕಿ-ಸಂಖ್ಯೆ ಈ ಮೂರು ವಿಷಯಗಳಲ್ಲಿ ಯಾವುದಾದರೂ ಒಂದನ್ನು ಐಚ್ಛಿಕ ವಿಷಯವನ್ನಾಗಿಯೂ, ಆಯ್ದುಕೊಳ್ಳಬೇಕು. ಹೀಗೆ ಮೂರು ವರ್ಷಗಳ ಬಿ. ಕಾಮ್. ಕೋರ್ಸಿನ ವಿಷಯ ಸಂಯೋಜನೆ ಇರುತ್ತದೆ.

ಬಿ. ಕಾಮ್. ಪದವೀಧರನು ಎಮ್. ಕಾಮ್. ವ್ಯಾಸಂಗವನ್ನು ಮುಂದುವರಿಸಲು ಎರಡು ವರ್ಷದ ಕೋರ್ಸು ಇರುತ್ತದೆ. ಈ ಎಮ್. ಕಾಮ್. ಕೋರ್ಸಿಗಾಗಿ ಸಾರ್ವಜನಿಕ ಹಣಕಾಸು ಮತ್ತು ಯೋಜನೆ, ಅಂತಾರಾಷ್ಟ್ರೀಯ ವ್ಯಾಪಾರ ಹಾಗೂ ಸಾರಿಗೆ-ಸಂಘಟನೆ, ಕಾರ್ಪೋರೇಶನ್ ಹಣಕಾಸು, ಮಾರುಕಟ್ಟೆ, ಅರ್ಥಶಾಸ್ತ್ರ ಸಂಘಟನೆ, ಬ್ಯಾಂಕಿಂಗ್, ಕಾಸ್ಟ

ಅಕೌಂಟನ್ಸಿ, ಕರಾಕರಣೆ, ವ್ಯಾಪಾರಾಡಳಿತ ಈ ವಿಷಯಗಳನ್ನು ಅಭ್ಯಾಸ ಮಾಡಬೇಕಾಗುತ್ತದೆ.

ಇನ್ನು ಫಲಜ್ಯೋತಿಷ್ಯಶಾಸ್ತ್ರದ ಮೇರೆಗೆ ಈ ಕೋರ್ಸನ್ನು ಅಭ್ಯಸಿಸುವ ವಿದ್ಯಾರ್ಥಿಗಳ ಜಾತಕವೆಂತಿರಬೇಕು, ಕಾರಕ, ಲಗ್ನ, ಗ್ರಹ, ಸ್ಥಾನ, ರಾಶ್ಯಾದಿಗಳು ಯಾವವು ಎಂಬುದನ್ನು ಪರಿಶೀಲಿಸುವಾ.

ಕಾರಕಗ್ರಹ:— ಜಾತಕದಲ್ಲಿ ಬುಧನು ಬಲಾಢ್ಯನಿರದೆ ಯಾವ ವಿದ್ಯಾರ್ಥಿಯೂ ಈ ಕೋರ್ಸಿನಲ್ಲಿ ಯಶಸ್ಸು ಪಡೆಯಲಾರನು. ಏಕೆಂದರೆ ಈ ಕೋರ್ಸಿನ ವಿಷಯಗಳಾದ ಜಮಾಖರ್ಚು (ಬುಕ್ ಕೀಪಿಂಗ್), ಅರ್ಥಶಾಸ್ತ್ರ, ವಾಣಿಜ್ಯಶಾಸ್ತ್ರ, ಆಡಿಟಿಂಗ್ ಹಾಗೂ ಅಕೌಂಟನ್ಸಿ, ಮಾರುಕಟ್ಟೆ ಹಾಗೂ ಮಾರಾಟಶಾಸ್ತ್ರ, ವ್ಯಾಪಾರ ಸಂಘಟನೆ, ಹಣಕಾಸು, ಅಂಕಿ-ಸಂಖ್ಯಾಶಾಸ್ತ್ರ ಇವೇ ಮೊದಲಾದ ವಾಣಿಜ್ಯ ವಿಷಯಗಳಿಗೆ ಬುಧನು ಕಾರಕನಿರುವನು. ಆದುದರಿಂದ ಈ ಕೋರ್ಸಿನ ವಿದ್ಯಾರ್ಥಿಗಳ ಜಾತಕದಲ್ಲಿ ಬುಧನು ರಾಶಿಬಲದವನೂ, ಸ್ಥಾನಬಲದವನೂ, ಯೋಗಕಾರಕನೂ ಇರಬೇಕಲ್ಲದೆ ಅಸ್ತ, ವಕ್ರಿ, ಶತ್ರು, ಕ್ಷೇತ್ರಿ, ನೀಚರಾಶಿ, ವೃದ್ಧಾಪ್ಯ, ಪಾಪಗ್ರಹಮಧ್ಯ-ದೃಷ್ಟನಿರಕೂಡದು.

ಬುಧನ ತರುವಾಯ ಶುಕ್ರ, ಚಂದ್ರ, ಶನಿಯರು ಈ ಕೋರ್ಸಿನ ಕಾರಕಗ್ರಹಗಳಾಗಿರುತ್ತಾರೆ. ಏಕೆಂದರೆ ಈ ಕೋರ್ಸಿನ ಸಾರ್ವಜನಿಕ ಹಣಕಾಸು ಯೋಜನೆ, ಸಾರಿಗೆಸಂಘಟನೆ ಮೊದಲಾದ ವಿಷಯಗಳಿಗೆ ಚಂದ್ರನೂ, ಕಾಸ್ಟ ಅಕೌಂಟನ್ಸಿ, ಅಂತಾರಾಷ್ಟ್ರೀಯ ವ್ಯಾಪಾರ ಮೊದಲಾದ ವಿಷಯಗಳಿಗೆ ಶುಕ್ರನೂ, ಕಾರ್ಪೋರೇಶನ್, ಬ್ಯಾಂಕಿಂಗ್ ಕಾಯ್ದೆ, ವಿಮೆ ಮೊದಲಾದ ವಿಷಯಗಳಿಗೆ ಶನಿಯೂ ಕಾರಕರಿರುವರು. ಹೀಗೆ ಬುಧನ ತರುವಾಯ ಚಂದ್ರ, ಶುಕ್ರ, ಶನಿಯರ ಬಲಾಬಲವನ್ನು ಪರಿಕ್ಷಿಸಬೇಕು.

ಸ್ಥಾನ:— ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ಪಂಚಮ, ತೃತೀಯ ಈ ಸ್ಥಾನಗಳನ್ನೂ ಹಾಗೂ ಈ ಸ್ಥಾನಾಧೀಶರನ್ನೂ ಪರಿಶೀಲಿಸಬೇಕು. ಏಕೆಂದರೆ ಹಣಕಾಸು, ಯೋಜನೆ, ವಾಣಿಜ್ಯಶಾಸ್ತ್ರ, ಮಾರುಕಟ್ಟೆ ಹಾಗೂ ಮಾರಾಟಶಾಸ್ತ್ರ, ಬ್ಯಾಂಕಿಂಗ್ ಕಾಯಿದೆ, ಕಾರ್ಪೋ

ರೇಶನ್ ಮೊದಲಾದ ವಿಷಯಗಳಿಗೆ ಪಂಚಮಸ್ಥಾನವೂ, ಜಮಾಖರ್ಚು, ಅಕೌಂಟನ್ಸಿ, ಆಡಿಟಿಂಗ್ ಮೊದಲಾದ ವಿಷಯಗಳಿಗೆ ತೃತೀಯಸ್ಥಾನವೂ ಕಾರಕವಿರುತ್ತವೆ. ಆದುದರಿಂದ ಈ ಸ್ಥಾನಗಳೂ ಈ ಸ್ಥಾನಾಧೀಶರೂ ಪೋಷಕರಿರಬೇಕು.

**ಲಗ್ನ** :— ಲಗ್ನದ ದೃಷ್ಟಿಯಿಂದ ಪರಿಶೀಲಿಸಿದರೆ ವೃಷಭ, ಮಿಥುನ, ಕನ್ಯಾ, ಮಕರ, ಧನು, ಕುಂಭ, ಮೀನ ಈ ಲಗ್ನದ ವಿದ್ಯಾರ್ಥಿಗಳೇ ಹೆಚ್ಚಾಗಿರುವದು ಕಂಡುಬರುತ್ತದೆ.

**ರಾಶಿ**:— ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ಆಡಿಟಿಂಗ್, ಅಕೌಂಟನ್ಸಿ, ಜಮಾಖರ್ಚು, ವಾಣಿಜ್ಯಶಾಸ್ತ್ರ, ಅರ್ಥಶಾಸ್ತ್ರ ಮೊದಲಾದ ಸೂಕ್ಷ್ಮ ವಿಷಯಗಳಲ್ಲಿ ತಜ್ಞತೆ ಪಡೆಯಲು ವೃಷಭ, ಮಿಥುನ, ಕರ್ಕ, ಕನ್ಯಾ, ಕುಂಭ ಈ ರಾಶಿಯವರಿಗೇ ಈ ಕಲೆ ಕರಗತವಾಗಿರುತ್ತದೆ.

## ವಾಣಿಜ್ಯಶಾಸ್ತ್ರದ ಅಲ್ಪಾವಧಿಯ ಕೋರ್ಸುಗಳು

ವಾಣಿಜ್ಯಶಾಸ್ತ್ರದಲ್ಲಿ ವಿಶ್ವವಿದ್ಯಾಲಯದ ವ್ಯಾಸಂಗವನ್ನು ಮಾಡಲು ಅನುಕೂಲತೆ, ಅವಕಾಶಗಳಿಲ್ಲದ ವಿದ್ಯಾರ್ಥಿಗಳು ಈ ಕೋರ್ಸಿನ ಅಲ್ಪಾವಧಿಯ ಕೋರ್ಸುಗಳನ್ನು ಅಭ್ಯಾಸಮಾಡಬಹುದು. ಪ್ರತಿಯೊಂದು ರಾಜ್ಯ ಸರಕಾರಗಳು ಈ ವಾಣಿಜ್ಯಶಾಸ್ತ್ರದ ಎರಡು ಮೂರು ವರ್ಷಗಳ ಡಿಪ್ಲೋಮಾ ಕೋರ್ಸುಗಳನ್ನೂ, ಒಂದು ವರ್ಷದ ಸರ್ಟಿಫಿಕೇಟ್ ಕೋರ್ಸುಗಳ ಪರೀಕ್ಷೆಗಳನ್ನೂ ನಡೆಸುತ್ತವೆ. ಸಾಮಾನ್ಯವಾಗಿ ಈ ಕೋರ್ಸುಗಳಲ್ಲಿ ಐದು ಪ್ರಕಾರಗಳಿರುತ್ತವೆ. ೧) ನ್ಯಾಶನಲ್ ಡಿಪ್ಲೋಮಾ ಇನ್ ಕಾಮರ್ಸ, ೨) ಸೆಕ್ರೇಟರಿಯಲ್ ಪ್ರ್ಯಾಕ್ಟೀಸ, ೩) ಕಮರ್ಶಿಯಲ್ ಕೋರ್ಸಸ್ (ಜಿ. ಸಿ. ಡಿ.) ೪) ಕಮರ್ಶಿಯಲ್ ಸರ್ಟಿಫಿಕೇಟ್, ೫) ಡಿಪ್ಲೋಮಾ ಇನ್ ಸ್ಟೆನೋಗ್ರಾಫಿ, ೬) ಕೋ-ಆಪರೇಶನ್ ಸರ್ಟಿಫಿಕೇಟ್, ೭) ಇದಲ್ಲದೆ ವಾಣಿಜ್ಯ ಕೋರ್ಸುಗಳ ಬಿಡಿ ಬಿಡಿ ವಿಷಯಗಳ ಅಕೌಂಟನ್ಸಿ, ಟೈಪರೈಟಿಂಗ್, ಆಡಿಟಿಂಗ್ ಮೊದಲಾದ ವಿಷಯಗಳ ಒಂದು ವರ್ಷದ ಅಲ್ಪಾವಧಿಯ ಕೋರ್ಸುಗಳಿವೆ. ಇನ್ನು ಜ್ಯೋತಿಷ್ಯಶಾಸ್ತ್ರದ ಮೇರೆಗೆ ಈ ಅಲ್ಪಾವಧಿ ಕೋರ್ಸುಗಳ ವಿಷಯವಾಗಿ ಪರಿಶೀಲಿಸುವಾ.

೧. ಡಿಪ್ಲೋಮಾ ಇನ್ ಸೆಕ್ರೇಟರಿಯಲ್ ಪ್ರ್ಯಾಕ್ಟಿಸ್ :— ಡಿಪ್ಲೋಮಾ ಇನ್ ಸೆಕ್ರೇಟರಿಯಲ್ ಪ್ರ್ಯಾಕ್ಟೀಸ್ ಈ ಕೋರ್ಸು ಎಸ್. ಎಸ್. ಎಲ್. ಸಿ. ಆದಬಳಿಕ ಮೂರು ವರ್ಷ ವ್ಯಾಸಂಗದ ಡಿಪ್ಲೋಮಾ ಕೋರ್ಸಿರುತ್ತದೆ. ಈ ಕೋರ್ಸಿನಲ್ಲಿ ಇಂಗ್ಲಿಷ್, ಅರ್ಥಶಾಸ್ತ್ರ, ಜಮಾ ಖರ್ಚು, ನವೀನ ವ್ಯಾಪಾರ ಪದ್ಧತಿಗಳು, ವ್ಯಾಪಾರೀ ಪತ್ರವ್ಯವಹಾರ, ಟೈಪರೈಟಿಂಗ್ ಇವೇ ಪ್ರಮುಖ ವಿಷಯಗಳನ್ನು ಅಭ್ಯಾಸ ಮಾಡಬೇಕಾ ಗುತ್ತದೆ. ಆದುದರಿಂದ ಜ್ಯೋತಿಷ್ಯ ಶಾಸ್ತ್ರದ ಮೇರೆಗೆ ಈ ಕೆಳಗಿನ ಸಂಗತಿ ಗಳು ಜಾತಕದಲ್ಲಿ ಪೋಷಕವಿರಬೇಕು.

೧) ಬುಧನು ಕೇವಲ ರಾಶಿಬಲದವನಿರುತ್ತಾನೆ. ಅಥವಾ ರಾಶಿ ಹಾಗೂ ಸ್ಥಾನಬಲದವನಿದ್ದು ಅಸ್ತ, ವಕ್ರ, ವೃದ್ಧಾಪ್ಯದವನಿರುತ್ತಾನೆ.

೨) ಈ ಕೋರ್ಸಿನ ವಿದ್ಯಾರ್ಥಿಗಳ ಜಾತಕದಲ್ಲಿ ಪಂಚಮಸ್ಥಾನ ಪಂಚಮೇಶರಿಗಿಂತ ತೃತೀಯಸ್ಥಾನ, ತೃತಿಯೇಶರು ಪೋಷಕರಿರುತ್ತಾರೆ.

೩) ಈ ಕೋರ್ಸಿನಲ್ಲಿ ತಜ್ಞತೆ ಪಡೆಯುವ ವಿದ್ಯಾರ್ಥಿಗಳು ಮೇಷ. ವೃಷಭ, ಮಿಥುನ, ಕರ್ಕ, ಕನ್ಯಾ, ತುಲಾ, ಮಕರ, ಕುಂಭ, ಮೀನ ಈ ಲಗ್ನದವರಿರುತ್ತಾರೆ.

೪) ಈ ಕೋರ್ಸಿನ ವ್ಯಾಂಸಗವನ್ನು ಮಾಡುವ ವಿದ್ಯಾರ್ಥಿಗಳ ಜಾತಕ ದಲ್ಲಿ ಅನೇಕ ಗ್ರಹಗಳು ಸ್ಥಿರರಾಶಿಯವಿರುತ್ತವೆ. ಅದರಲ್ಲಿಯೂ ಚಂದ್ರನ್ನು ಹೆಚ್ಚಾಗಿ ಸ್ಥಿರರಾಶಿಯವನಿರುತ್ತಾನೆ.

## ೨. ನ್ಯಾಶನಲ್ ಡಿಪ್ಲೋಮಾ ಇನ್ ಕಾಮರ್ಸ ಹಾಗೂ ಸ್ಟೆನೋಗ್ರಾಫಿ

ನ್ಯಾಶನಲ್ ಡಿಪ್ಲೋಮಾ ಇನ್ ಕಾಮರ್ಸ ಈ ಕೋರ್ಸು ಎಸ್. ಎಸ್. ಎಲ್. ಸಿ. ಆದಬಳಿಕ ಮೂರು ವರ್ಷಗಳ ಅವಧಿಯ ಕೋರ್ಸಿರು ತ್ತದೆ. ಈ ಕೋರ್ಸಿನಲ್ಲಿ ಅಕೌಂಟನ್ಸಿ, ವಾಣಿಜ್ಯಕಾಯ್ದೆ, ಅರ್ಥಶಾಸ್ತ್ರ, ವಾಣಿಜ್ಯ ಭೂಗೋಲಶಾಸ್ತ್ರ, ಟೈಪರೈಟಿಂಗ್ ಇವೇ ಪ್ರಮುಖ ವಿಷಯ

ಗಳನ್ನು ಅಭ್ಯಾಸಮಾಡಬೇಕಾಗುತ್ತದೆ. ಆದುದರಿಂದ ಈ ಕೋರ್ಸಿನ ಅಭ್ಯಾಸ ಮಾಡಲು ಈ ಕೆಳಗಿನ ಸಂಗತಿಗಳು ಜಾತಕದಲ್ಲಿ ಪೋಷಕವಿರಬೇಕು.

೧) ಬುಧ, ಶುಕ್ರ, ಚಂದ್ರ ಈ ಗ್ರಹಗಳು ಜಾತಕದಲ್ಲಿ ಪೋಷಕವಿರಬೇಕು.

೨) ಅನೇಕ ಗ್ರಹಗಳು ಸ್ತ್ರೀರಾಶಿಯಲ್ಲಿರುತ್ತವೆ.

೩) ಈ ಕೋರ್ಸಿನಲ್ಲಿ ತಜ್ಞತೆ ಪಡೆಯಲು ಪಂಚಮಸ್ಥಾನ, ಪಂಚಮೇಶರಿಗಿಂತ ತೃತೀಯಸ್ಥಾನ, ತೃತೀಯೇಶರು ಹೆಚ್ಚು ಪೋಷಕರಿರುತ್ತಾರೆ.

೪) ಈ ಕೋರ್ಸಿನ ಜ್ಞಾನ ಪಡೆಯುವ ವಿದ್ಯಾರ್ಥಿಗಳು ಹೆಚ್ಚಾಗಿ ಮೇಷ, ವೃಷಭ, ಮಿಥುನ, ಕನ್ಯಾ, ತುಲಾ, ಮಕರ, ಕುಂಭ ಈ ಲಗ್ನದವರಿರುತ್ತಾರೆ.

೫) ಈ ಕೋರ್ಸಿನ ವಿದ್ಯಾರ್ಥಿಗಳು ಹೆಚ್ಚಾಗಿ ವೃಷಭ, ಮಿಥುನ, ಕರ್ಕ, ಕನ್ಯಾ, ತುಲಾ, ಕುಂಭ, ಮೀನ ಈ ರಾಶಿಯವರಿರುತ್ತಾರೆ.

### ೩. ಕಮರ್ಶಿಯಲ್ ಸರ್ಟಿಫಿಕೇಟ್–ಟೈಪಿಂಗ್ ಕೋರ್ಸ

ಈ ಅಲ್ಪಾವಧಿಯ ಸರ್ಟಿಫಿಕೇಟ್ ಕೋರ್ಸುಗಳು ಒಂದು ವರ್ಷದ ಅವಧಿಯವಿದ್ದು ಎಸ್. ಎಸ್. ಎಲ್. ಸಿ. ಆದಬಳಿಕ ಪ್ರವೇಶ ಅರ್ಹತೆ ಪಡೆಯುತ್ತಾರೆ. ಈ ಕೋರ್ಸಿನಲ್ಲಿ ಅಕೌಂಟನ್ಸಿ, ಆಡಿಟಿಂಗ್, ಟೈಪಿಂಗ್, ಶೀಘ್ರಲಿಪಿ ಮೊದಲಾದ ಬಿಡಿ ಬಿಡಿ ವಿಷಯಗಳ ಪರೀಕ್ಷೆಗಳನ್ನು ಮುಗಿಸಬೇಕಾಗುತ್ತದೆ. ಇಂಥ ವಿದ್ಯಾರ್ಥಿಗಳ ಜಾತಕದಲ್ಲಿ ಈ ಕೆಳಗಿನ ಯೋಗಗಳಿರುತ್ತವೆ.

೧) ಈ ವಿದ್ಯಾರ್ಥಿಗಳ ಜಾತಕದಲ್ಲಿ ಬುಧ, ಶುಕ್ರ, ಚಂದ್ರ, ಶನಿಯರು ಪೋಷಕರಿರುತ್ತಾರೆ. ಅದರಲ್ಲಿಯೂ ಬುಧ, ಚಂದ್ರ, ಶುಕ್ರರು ಕೇವಲ ರಾಶಿಬಲದವರಿರುತ್ತಾರೆ.

೨) ತೃತೀಯಸ್ಥಾನ, ತೃತೀಯೇಶರು ಪಂಚಮಸ್ಥಾನ, ಪಂಚಮೇಶರಿಗಿಂತ ಪೋಷಕರಿರುತ್ತಾರೆ.

೩) ಅನೇಕ ಗ್ರಹಗಳು ಸ್ತ್ರೀರಾಶಿಯಲ್ಲಿರುತ್ತವೆ.

೪) ಈ ಕೋರ್ಸ್‌ಗಳಲ್ಲಿ ತಜ್ಞತೆ ಪಡೆಯುವ ವಿದ್ಯಾರ್ಥಿಗಳು ಹೆಚ್ಚಾಗಿ ವೃಷಭ, ಮಿಥುನ, ಕರ್ಕ, ಕನ್ಯಾ, ತುಲಾ, ಕುಂಭ, ಮೀನ ಈ ರಾಶಿಯವರಿರುತ್ತಾರೆ.

### ೪. ಚಾರ್ಟರ್ಡ ಅಕೌಂಟಂಟ, ಕಾಸ್ಟ ಅಕೌಂಟಂಟ ಹಾಗೂ ಮಾಸ್ಟರ್ ಆಫ್ ಬಿಸಿನೆಸ್ ಮ್ಯಾನೇಜಮೆಂಟ ಮೊದಲಾದ ಕೋರ್ಸುಗಳು

ವಾಣಿಜ್ಯ ಅಭ್ಯಾಸದಲ್ಲಿ ಚಾರ್ಟರ್ಡ ಅಕೌಂಟಂಟ್ (C A Courses), ಕಾಸ್ಟ ಅಕೌಂಟಂಟ್ (I. C. W. A.) ಅಂದರೆ ಇಂಡಿಯನ್ ಕಾಸ್ಟ ವರ್ಕ್ಸ ಅಕೌಂಟಂಟ್ ಹಾಗೂ (M. B. A.) ಮಾಸ್ಟರ್ ಆಫ್ ಬಿಸಿನೆಸ್ ಮ್ಯಾನೇಜಮೆಂಟ ಮೊದಲಾದ ಕೋರ್ಸುಗಳಿವೆ. ಇವು ಬಹಳ ಮಹತ್ವವಾದ ಕೋರ್ಸುಗಳಿದ್ದು ಇವುಗಳನ್ನು ಪಡೆಯಲು ಜಾತಕ ಎಂತಿರಬೇಕು ಎಂಬುದನ್ನು ಪರಿಶೀಲಿಸುವಾ.

೧. ಚಾರ್ಟರ್ಡ ಅಕೌಂಟಂಟ್ :— ಚಾರ್ಟರ್ಡ ಅಕೌಂಟಂಟ್ ಆಗಬಯಸುವವರು ಬಿ. ಎ., ಬಿ. ಕಾಮ್. ಮೊದಲಾದ ಯಾವುದೇ ಪದವೀಧರರಿರಬೇಕು. ಅವರು ಅಯಾ ಪದವಿ ಪರೀಕ್ಷೆಗಳಲ್ಲಿ ಪ್ರಥಮ ಅಥವಾ ದ್ವಿತೀಯ ವರ್ಗಗಳಲ್ಲಿ ಉತ್ತೀರ್ಣರಾಗಿದ್ದರೆ ಅವರಿಗೆ ಈ ಕೋರ್ಸು ಮೂರು ವರ್ಷಗಳ ಅವಧಿಯಿರುತ್ತದೆ. ಪದವೀಧರನು ಸಾಮಾನ್ಯ ತರಗತಿಯಲ್ಲಿ ತೇರ್ಗಡೆಯಾಗಿದ್ದರೆ (ಮೂರನೆಯ ವರ್ಗದಲ್ಲಿ ಉತ್ತೀರ್ಣರಾದವರು) ಅವರಿಗೆ ನಾಲ್ಕು ವರ್ಷಗಳ ಅವಧಿಯ ವ್ಯಾಸಂಗವನ್ನು ಮಾಡಬೇಕಾಗುತ್ತದೆ. ಈ ಪರೀಕ್ಷೆಯನ್ನು ಚಾರ್ಟರ್ಡ ಅಕೌಂಟಂಟ್ಸ ಬೋರ್ಡ ನಡೆಸುತ್ತಿದ್ದು ಈ ಪರೀಕ್ಷೆಯು ಎರಡು ಹಂತಗಳಲ್ಲಿ ನಡೆಯುತ್ತದೆ. ಈ ಕೋರ್ಸಿನ ಮಹತ್ವದ ಅಂಶವೆಂದರೆ ಉಮೇದವಾರರು ನೇರವಾಗಿ ಪರೀಕ್ಷೆಗೆ ಕೂಡ್ರಲು ಬಾರದೆ ನಾಲ್ಕು ವರ್ಷಗಳ ಕಾಲ ಓರ್ವ ರಜಿಸ್ಟರ್ಡ ಚಾರ್ಟರ್ಡ ಅಕೌಂಟಂಟನ ಬಳಿ "ಆರ್ಟಿಕಲ್ಡ ಕ್ಲಾರ್ಕ" ಎಂದು ಕೆಲಸ ಮಾಡಬೇಕಾಗುತ್ತದೆ. ಈ ಅವಧಿಯಲ್ಲಿ ಲೆಕ್ಕ ತಪಾಸಣೆ, ಲೆಕ್ಕ ತಯಾರಿಕೆ ಮೊದಲಾದ ಕಾರ್ಯಗಳಲ್ಲಿ ತೊಡಗಿ ಪ್ರಾಯೋಗಿಕ ಹಾಗೂ ಪ್ರಾತ್ಯಕ್ಷಿಕ

ಅನುಭವವನ್ನು ಪಡೆದುಕೊಳ್ಳಬೇಕಾಗುತ್ತದೆ. ಈ ಪರೀಕ್ಷೆಯಲ್ಲಿಯ ಮುಖ್ಯ ವಿಷಯಗಳೆಂದರೆ ಲೆಕ್ಕ ತಪಾಸಣೆ, ಲೆಕ್ಕ ತಯಾರಿಕೆ, ಕಂಪನಿ ಕಾಯ್ದೆ, ತೆರಿಗೆ ಇವೇ ಮುಖ್ಯ ವಿಷಯಗಳಲ್ಲಿ ತಜ್ಞತೆ ಪಡೆದು ಉತ್ತೀರ್ಣರಾಗ ಬೇಕಾಗುತ್ತದೆ. ಉತ್ತೀರ್ಣರಾದರೂ ಕೂಡ ಶೇಕಡಾ ೭೦ ರಷ್ಟು ಗುಣ ಗಳನ್ನು ಪಡೆಯಬೇಕಾಗುತ್ತದೆ. ಇದು ಕ್ಲಿಷ್ಟಕರವಾದ ಪರೀಕ್ಷೆಯಿದ್ದು ಇದರಲ್ಲಿ ಉತ್ತೀರ್ಣರಾದವರು ಸ್ವತಂತ್ರವಾಗಿ "ಚಾರ್ಟರ್ಡ ಅಕೌಂಟಂಟ್" ಎಂದು ವ್ಯವಸಾಯ ಮಾಡಬಹುದು. ಭಾರತದಲ್ಲಿ ಈ ಕೋರ್ಸು ಪಡೆ ದವರು ಬಹಳೇ ಕಡಿಮೆ ಸಂಖ್ಯೆಯಲ್ಲಿದ್ದು ಈ ಕೋರ್ಸಿನ ಆಕರ್ಷಣೆ ಬಹಳ ವಿದೆ. ಇಷ್ಟೊಂದು ಮಹತ್ವಪೂರ್ಣವಾದ ಈ ಕೋರ್ಸಿನ ಹಿನ್ನೆಲೆಯಲ್ಲಿ ಜ್ಯೋತಿಷ್ಯದ ವಿಚಾರವೇನು, ಕಾರಕಗ್ರಹ, ಲಗ್ನ, ಸ್ಥಾನಾದಿಗಳಾವವು ಎಂಬುದನ್ನು ಪರಿಶೀಲಿಸುವಾ.

ಕಾರಕಗ್ರಹ :— ಇದು ವಾಣಿಜ್ಯ ವಿಷಯದ ಕೋರ್ಸ ಇರುವದರಿಂದ ಲೆಕ್ಕ ತಪಾಸಣೆ, ಲೆಕ್ಕ ತಯಾರಿಕೆ ಇವೇ ಮೊದಲಾದ ವಿಷಯಗಳನ್ನು ಕಲಿಯಬೇಕಾಗುವದರಿಂದ ಬುಧನೇ ಈ ಕೋರ್ಸಿನ ಕಾರಕಗ್ರಹನು. ಬುಧನು ಜಾತಕದಲ್ಲಿ ಬಲಾಢ್ಯನಿರದೆ ಯಾವ ವಿದ್ಯಾರ್ಥಿಯೂ ಈ ಕೋರ್ಸನ್ನು ಪೂರ್ಣಗೊಳಿಸಲಾರನು. ಬುಧನ ತರುವಾಯ ಶನಿ, ಚಂದ್ರ, ಶುಕ್ರರೂ ಈ ಕೋರ್ಸಿನ ಕಾರಕಗ್ರಹಗಳಾಗಿರುತ್ತಾರೆ. ಏಕೆಂದರೆ ಈ ಕೋರ್ಸಿನಲ್ಲಿಯ ಕಾಯ್ದೆಯ ವಿಷಯವಿರುವದರಿಂದ ಅರ್ಥಾತ್ ಕಂಪನಿಯ ಕಾಯ್ದೆ, ತೆರಿಗೆ ಇವೇ ಮೊದಲಾದ ವಿಷಯಗಳ ಮೇಲೆ ಶನಿಯ ಪ್ರಭುತ್ವವಿರುತ್ತದೆ. ಇದಲ್ಲದೆ ಈ ಕೋರ್ಸಿನ ಪ್ರಮುಖ ವಿಷಯವಾದ ಲೆಕ್ಕವನ್ನು ತಯಾರಿಸುವ ವಿಧಾನ, ಒಳ್ಳೆಯ ಅಚ್ಚುಕಟ್ಟುತನದಿಂದ ಸುವ್ಯವಸ್ಥಿತ ರೀತಿಯಲ್ಲಿ ಲೆಕ್ಕ ಬರೆಯುವದು ಇದು ಶುಕ್ರ-ಚಂದ್ರರ ಗುಣಧರ್ಮವಾಗಿದೆ. ಆದುದರಿಂದ ಬುಧ, ಶನಿ, ಚಂದ್ರ, ಶುಕ್ರರೇ ಈ ಕೋರ್ಸಿನ ಕಾರಕಗ್ರಹಗಳು.

ಸ್ಥಾನ :— ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ವಿದ್ಯೆಯ ಸ್ಥಾನ ವಾದ ಪಂಚಮವೂ, ಲೆಕ್ಕಪತ್ರದ ಸ್ಥಾನವಾದ ತೃತೀಯವೂ, ಸ್ವತಂತ್ರ ವೃತ್ತಿಯ ಸ್ಥಾನವಾದ ಷಷ್ಠಸ್ಥಾನವೂ ಈ ಕೋರ್ಸಿನ ಕಾರಕಸ್ಥಾನಗಳದ್ದು

ಈ ಸ್ಥಾನಗಳೂ ಹಾಗೂ ಈ ಸ್ಥಾನಾಧೀಶರೂ ಪೋಷಕರಿರುವ ವಿದ್ಯಾರ್ಥಿಗಳಿಗೆ ಈ ಕೋರ್ಸಿನಲ್ಲಿ ತಜ್ಞತೆ ದೊರೆಯುವದು.

ಲಗ್ನ :— ಲಗ್ನದ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ವೃಷಭ, ಮಿಥುನ, ಕರ್ಕ, ಕನ್ಯಾ, ಮಕರ, ಧನು, ಮೀನ ಈ ಲಗ್ನಗಳ ವಿದ್ಯಾರ್ಥಿಗಳು ಈ ಕೋರ್ಸಿನಲ್ಲಿ ತಜ್ಞತೆ ಪಡೆಯುತ್ತಾರೆ.

ರಾಶಿ :— ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ಮಿಥುನ, ತುಲಾ, ಕುಂಭ ಈ ರಾಶಿಯ ವಿದ್ಯಾರ್ಥಿಗಳು ಈ ಕೋರ್ಸಿನಲ್ಲಿ ಪಳಗಿದವರೂ, ಪ್ರವೀಣರೂ ಇರುತ್ತಾರೆ. ಈ ರಾಶಿಯವರ ನಂತರ ವೃಷಭ, ಕರ್ಕ, ಕನ್ಯಾ, ಮೀನ ಈ ರಾಶಿಯ ವಿದ್ಯಾರ್ಥಿಗಳನ್ನು ಕಾಣಬಹುದು.

೨. ಕಾಸ್ಟ ಅಕೌಂಟಂಟ :— ಇಂಡಿಯನ್ ಕಾಸ್ಟ ಅ್ಯಂಡ ವರ್ಕ್ಸ ಅಕೌಂಟ್ಸ ಪರೀಕ್ಷೆಗೂ ನಾಲ್ಕು ವರ್ಷಗಳ ಅಭ್ಯಾಸದ ಅವಧಿಯನ್ನು ನಿರ್ದಿಷ್ಟಗೊಳಿಸಲಾಗಿದೆ. ಈ ಪರೀಕ್ಷೆಗೂ ಯಾವುದೆ ಪದವಿಯನ್ನು ಪಡೆದ ಪದವೀಧರರು ಕೂಡ್ರಬಹುದು. ಈ ಕೋರ್ಸನ್ನಾದರೂ ಎರಡು ಹಂತಗಳಲ್ಲಿ ನಡೆಸಲಾಗುತ್ತದೆ. ಈ ಕೋರ್ಸಿನಲ್ಲಿರುವ ವ್ಯತ್ಯಾಸವೆಂದರೆ ಉಮೇದವಾರರು ಯಾರ ಕೈಕೆಳಗೂ 'ಆರ್ಟಿಕಲ್ಡ ಕ್ಲಾರ್ಕ' ಎಂದು ಕೆಲಸ ಮಾಡದೆ ನೇರವಾಗಿ ಪರೀಕ್ಷೆಗೆ ಕೂಡ್ರಬಹುದು. ಈ ಕೋರ್ಸಿನಲ್ಲಿ ಇಂಜನಿಯರಿಂಗ ವ್ಯವಸ್ಥೆ, ಕಾಯ್ದೆ ಆಡಳಿತ, ಕಾರಖಾನೆಗಳ ಕಾಯ್ದೆ, ಕಾಸ್ಟ ಅಕೌಂಟ್ಸ, ಉತ್ಪಾದನ ನಿಯಂತ್ರಣ ಇವೇ ಮೊದಲಾದ ವಿಷಯಗಳ ಅಭ್ಯಾಸ ಮಾಡಬೇಕಾಗುತ್ತದೆ. ಈ ಕೋರ್ಸಿನಲ್ಲಿ ಉತ್ತೀರ್ಣರಾದವರು ಕಾರಖಾನೆಗಳಲ್ಲಿ ಕಾಸ್ಟ ಅಕೌಂಟಂಟ ಹುದ್ದೆಯನ್ನು ಪಡೆಯಬಹುದು. ಚಾರ್ಟರ್ಡ ಅಕೌಂಟಂಟ್ಸ ಹಾಗೂ ಕಾಸ್ಟಿಂಗ ಅಕೌಂಟಂಟ್ಸ ಕೋರ್ಸಿನಲ್ಲಿ ಮುಖ್ಯ ವ್ಯತ್ಯಾಸವೆಂದರೆ ಚಾರ್ಟರ್ಡ ಅಕೌಂಟಂಟರು ಲೆಕ್ಕ ತಪಾಸಣೆಯಲ್ಲಿ ತಜ್ಞರಾದರೆ ಕಾಸ್ಟ ಅಕೌಂಟಂಟರು ಕಾರಖಾನೆಯ ಉತ್ಪಾದನೆ, ನಿಯಂತ್ರಣ ಈ ಮೊದಲಾದ ವಿಷಯಗಳಲ್ಲಿ ತಜ್ಞತೆ ಪಡೆಯುತ್ತಾರೆ. ಇಷ್ಟೊಂದು ಕೋರ್ಸಿನ ಹಿನ್ನೆಲೆಯಲ್ಲಿ ಜ್ಯೋತಿಷ್ಯದ ವಿಚಾರವೇನು, ಕಾರಕಗ್ರಹ, ಲಗ್ನ, ಸ್ಥಾನಾದಿಗಳಾವವೆಂಬುದನ್ನು ಪರಿಶೀಲಿಸುವಾ.

**ಕಾರಕ ಗ್ರಹ :—** ವಾಣಿಜ್ಯ ವಿಷಯದ ಕೋರ್ಸು ಇರುವದರಿಂದ ವಾಣಿಜ್ಯದ ಕಾರಕಗ್ರಹವಾದ ಬುಧನಂತೂ ಜಾತಕದಲ್ಲಿ ಪೋಷಕನಿರಲೇ ಬೇಕು. ಇದರ ಹೊರತಾಗಿ ಶನಿ-ಮಂಗಳರನ್ನೂ ಪರಿಶೀಲಿಸಬೇಕಾಗು ತ್ತದೆ. ಏಕೆಂದರೆ ಈ ಕೋರ್ಸಿನಲ್ಲಿ ಶಿಕ್ಷಣ ಪಡೆದವರು ಹೆಚ್ಚಾಗಿ ಕಾರ ಖಾನೆಗಳಲ್ಲಿ ಕೆಲಸಮಾಡಬೇಕಾಗುವದರಿಂದ ಕಾರಖಾನೆಯ ಕಾರಕಗ್ರಹ ವಾದ ಶನಿಯ ಬಲಾಬಲದೊಂದಿಗೆ ಇಂಜನಿಯರಿಂಗ್ ವ್ಯವಸ್ಥೆ, ಉತ್ಪಾ ದನೆಗಳ ನಿಯಂತ್ರಣ ಈ ಗುಣಧರ್ಮಗಳ ಕಾರಕಗ್ರಹವಾದ ಕುಜನ ಬಲಾ ಬಲವನ್ನೂ ಪರಿಶೀಲಿಸಬೇಕಾಗುತ್ತದೆ. ಇದಲ್ಲದೆ ಭಿನ್ನ ಭಿನ್ನ ವಸ್ತುಗಳ ಉತ್ಪಾದನೆಯ ಕಾರಕಗ್ರಹಗಳನ್ನು ಪರಿಶೀಲಿಸಬೇಕು. ಉದಾಹರಣೆಗೆ :— ನೈಲಾನ್, ಟೆರಿಲಿನ್, ಟೆರಿಕಾಟ, ಟೆರಿವೂಲ್, ಟೆಕ್ಸಟೈಲ್ ಮೊದಲಾದ ಕಾರಖಾನೆಗಳಲ್ಲಿಯ ಉತ್ಪಾದಿತ ವಸ್ತುಗಳಿಗೆ ಶುಕ್ರನು ಕಾರಕನಿರುತ್ತಾನೆ. ಇದು ಉದ್ಯೋಗದ ವೃತ್ತಿಯ ವಿಷಯವಾದರೆ ಕೇವಲ ಈ ಕೋರ್ಸಿನ ವಿದ್ಯೆಗೆ ಕಾರಕಗ್ರಹಗಳೆಂದರೆ ಬುಧ, ಶನಿ, ಮಂಗಳರಿರುತ್ತಾರೆ.

**ಸ್ಥಾನ :—** ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ಕಾರಖಾನೆಗಳ ಸ್ಥಾನವಾದ ದಶಮಸ್ಥಾನವೂ, ವಿದ್ಯೆಯ ಸ್ಥಾನವಾದ ಪಂಚಮವೂ, ಉತ್ಪಾದನೆಯ ಸ್ಥಾನವಾದ ಷಷ್ಠವೂ ಈ ಕೋರ್ಸಿನ ಕಾರಕಸ್ಥಾನಗಳಿರು ವದರಿಂದ ಈ ಸ್ಥಾನಗಳೂ ಹಾಗೂ ಸ್ಥಾನಾಧೀಶರೂ ಜಾತಕದಲ್ಲಿ ಪೋಷಕ ರಿರಬೇಕು.

**ಲಗ್ನ :—** ಲಗ್ನದ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ವೃಷಭ, ಕರ್ಕ, ಸಿಂಹ, ಕನ್ಯಾ, ತುಲಾ, ವೃಶ್ಚಿಕ, ಧನು, ಮಕರ ಈ ಲಗ್ನದವರೇ ಹೆಚ್ಚಾಗಿರುವದು ಕಂಡುಬರುತ್ತದೆ.

**ರಾಶಿ :—** ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ಮಿಥುನ, ತುಲಾ, ಕುಂಭ ಈ ರಾಶಿಯ ವಿದ್ಯಾರ್ಥಿಗಳು ಹಾಗೂ ಮೇಷ, ಸಿಂಹ, ವೃಶ್ಚಿಕ, ಧನು, ಮಕರ ಈ ರಾಶಿಯ ವಿದ್ಯಾರ್ಥಿಗಳು ಈ ಕೋರ್ಸಿನಲ್ಲಿ ಪಳಗಿರುವದು ಕಂಡುಬರುತ್ತದೆ.

೩. ಎಂ. ಬಿ. ಎ. ಕೋರ್ಸ್ :— ಮಾಸ್ಟರ ಆಫ್ ಬಿಜಿನೆಸ್ ಆ್ಯಂಡ್ ಎಡ್ಮಿನಿಸ್ಟ್ರೇಶನ್ ಎಂಬ ಪದವಿಯ ಸ್ನಾತಕೋತ್ತರ ಕೋರ್ಸ್‌ನ್ನು ಯಾವುದೇ ಪದವೀಧರರು ವ್ಯಾಸಂಗ ಮಾಡಬಹುದು. ಈ ಕೋರ್ಸಿನ ವ್ಯಾಸಂಗದ ಅವಧಿಯು ಮೂರು ವರ್ಷದ್ದಿದ್ದು, ವಾಣಿಜ್ಯ, ವ್ಯಾಪಾರ ವ್ಯವಸ್ಥೆ, ಆಡಳಿತ, ಲೆಕ್ಕ-ಪತ್ರ ತಯಾರಿಕೆ, ಅಂದಾಜುಪಟ್ಟಿ ತಯಾರಿಕೆ ಮೊದಲಾದ ವಿಷಯಗಳನ್ನು ಕಲಿಯಬೇಕಾಗುತ್ತದೆ. ವಾಣಿಜ್ಯ ಶಿಕ್ಷಣ ದಲ್ಲಿ ಇದೊಂದು ಮಹತ್ವದ ಕೋರ್ಸ್ ಇದ್ದು, ವ್ಯಾಪಾರ ಆಡಳಿತದ ತಜ್ಞತೆಯನ್ನು ಪಡೆದ ಈ ಕೋರ್ಸಿನ ಪದವೀಧರರಿಗೆ ಕಾರಖಾನೆಗಳಲ್ಲಿ ಬೇಡಿಕೆ ಬಹಳವಿದೆ. ಆದುದರಿಂದ ಈ ಕೋರ್ಸಿನ ಅಧ್ಯಯನ ಪಡೆಯಲು ಜಾತಕವಂತಿರಬೇಕೆಂಬುದನ್ನು ಪರಿಶೀಲಿಸುವಾ.

ಕಾರಕಗ್ರಹ :— ಕೋರ್ಸಿನ ಹೆಸರೇ ಸೂಚಿಸುವಂತೆ ವ್ಯಾಪಾರ ವ್ಯವಸ್ಥೆ ಹಾಗೂ ಆಡಳಿತೆ ಪ್ರಮುಖ ವಿಷಯಗಳಿರುವದರಿಂದ ಆಡಳಿತೆಯ ಕಾರಕಗ್ರಹಗಳಾದ ರವಿ-ಮಂಗಳರೂ ಈ ಕೋರ್ಸಿನ ಕಾರಕಗ್ರಹಗಳಿರು ತ್ತಾರೆ. ರವಿ-ಮಂಗಳರ ತರುವಾಯ ಬುಧ-ಶನಿಯರನ್ನೂ ಪರಿಶೀಲಿಸ ಬೇಕು. ಏಕೆಂದರೆ ಕೋರ್ಸಿನ ಕಾರಕನೂ, ಲೆಕ್ಕ-ಪತ್ರ ತಯಾರಿಕೆ ಹಾಗೂ ಅಂದಾಜಪಟ್ಟಿ ಈ ಕೆಲಸಗಳ ಕಾರಕಗ್ರಹವಾದ ಬುಧನೂ, ಕಾರಖಾನೆಯ ಕಾರಕಗ್ರಹವಾದ ಶನಿಯೂ ಈ ಕೋರ್ಸಿನ ಕಾರಕಗ್ರಹಗಳಿರುತ್ತಾರೆ.

ಸ್ಥಾನ :— ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ಷಷ್ಠ, ದಶಮ, ಪಂಚಮ ಈ ಸ್ಥಾನಗಳೇ ಈ ಕೋರ್ಸಿನ ಕಾರಕಸ್ಥಾನಗಳಿರುವದರಿಂದ ಈ ಸ್ಥಾನಗಳೂ ಹಾಗೂ ಸ್ಥಾನಾಧೀಶರೂ ಜಾತಕದಲ್ಲಿ ಪೋಷಕರಿರಬೇಕು.

ಲಗ್ನ :— ಲಗ್ನದ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ವೃಷಭ, ಕರ್ಕ, ಸಿಂಹ, ವೃಶ್ಚಿಕ, ಧನು, ಮಕರ ಈ ಲಗ್ನದವರೇ ಹೆಚ್ಚಾಗಿರುವದು ಕಂಡುಬರುತ್ತದೆ.

ರಾಶಿ :— ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ಮಿಥುನ, ಸಿಂಹ, ಕರ್ಕ, ತುಲಾ, ವೃಶ್ಚಿಕ, ಧನು, ಮಕರ, ಕುಂಭ ಈ ರಾಶಿಯವ ರಿರುವದು ಕಂಡುಬರುತ್ತದೆ.

## ೪. ಜಾಹೀರಾತು ಹಾಗೂ ಸಾರ್ವಜನಿಕ ಸಂಪರ್ಕ ಡಿಪ್ಲೋಮಾದ ಕೋರ್ಸು

## (Diploma in Advertising and Public Relation)

ಪ್ರಚಾರಯುಗದಲ್ಲಿ ಜಾಹೀರಾತು ಒಂದು ಮುಖ್ಯ ಸಾಧನವಾಗಿದೆ. ವಾಣಿಜ್ಯೋದ್ಯಮದಲ್ಲಿ ಜಾಹೀರಾತು ಮತ್ತು ಸಾರ್ವಜನಿಕ ಸಂಪರ್ಕಗಳೆರಡೂ ಆವಶ್ಯಕವಾದವುಗಳಿದ್ದು ಈ ಕೋರ್ಸು ಒಂದು ವರ್ಷದ ಅವಧಿಯದಿರುತ್ತದೆ. ಈ ಕೋರ್ಸಿನಲ್ಲಿ ಜಾಹೀರಾತು, ಮಾರಾಟ, ಸಾರ್ವಜನಿಕ ಸಂಪರ್ಕ, ಜಾಹೀರಾತು ಏಜೆನ್ಸಿ, ಕಲೆ ಹಾಗೂ ಉತ್ಪಾದನೆ, ಅರ್ಥಶಾಸ್ತ್ರ ಹಾಗೂ ಮನಶ್ಶಾಸ್ತ್ರ, ಭಾರತೀಯ ಸಾಂಸ್ಕೃತಿಕ ಹಿನ್ನೆಲೆ ಇವೇ ಮೊದಲಾದ ವಿಷಯಗಳನ್ನು ಕಲಿಸಲಾಗುತ್ತದೆ. ಜಾಹೀರಾತಿನ ಬಗೆಗೆ ಜಾಹೀರಾತಿನ ತತ್ತ್ವಗಳೂ, ಕಾರ್ಯಬಾಹುಲ್ಯ ಮತ್ತು ಆಡಳಿತೆಯ ವಿಷಯದ ಬಗೆಗೆ ಭಾರತದಲ್ಲಿ ಜಾಹೀರಾತಿನ ಬೆಳವಣಿಗೆಗೆ, ಭಾರತದ ಆರ್ಥಿಕ ಹಿನ್ನೆಯಲ್ಲಿ ಜಾಹೀರಾತಿನ ಮಹತ್ತ್ವ, ಗ್ರಾಹಕ ಹಾಗೂ ಔದ್ಯೋಗಿಕ ಬೆಳವಣಿಗೆಯಲ್ಲಿ ಜಾಹೀರಾತಿನ ಪಾತ್ರ, ಜಾಹೀರಾತಿನ ತತ್ತ್ವಗಳು, ಜಾಹೀರಾತಿನ ಕಾರ್ಯವಿಸ್ತರಣೆ, ಆರ್ಥಿಕ ವಿವೇಚನೆ, ಪ್ರಜಾಸತ್ತೆಯಲ್ಲಿ ಜಾಹೀರಾತಿನ ಪಾತ್ರ, ಜಾಹೀರಾತಿನ ಸಾಮಾಜಿಕ ನೀತಿ, ರಚನಾತ್ಮಕ ಜಾಹೀರಾತು, ಜಾಹೀರಾತನ್ನು ಯೋಜಿಸುವದು, ಅದನ್ನು ಕಾರ್ಯಗತಗೊಳಿಸುವದು, ರಚನಾತ್ಮಕ ಜಾಹೀರಾತಿನ ಸಂಘಟನೆ ಹಾಗೂ ಕಾರ್ಯಾಚರಣೆ, ಮಾರಾಟ, ಯೋಜಿತ ಆರ್ಥಿಕತೆಯಲ್ಲಿ ಮಾರಾಟದ ಮಹತ್ತ್ವ, ಜಾಹೀರಾತಿನ ತತ್ತ್ವಗಳ ಪರಿಪಾಲನೆ, ಭಾರತದಲ್ಲಿ ಮಾರಾಟ, ಸಾರ್ವಜನಿಕ ಸಂಪರ್ಕಗಳೆಂದರೇನು, ಸಾರ್ವಜನಿಕ ಸಂಪರ್ಕಕ್ಕೂ ಜಾಹೀರಾತು ಮಾರಾಟದ ಹಿನ್ನೆಲೆ, ಪ್ರಚಾರ ಉದ್ಯಮ, ಸಾರ್ವಜನಿಕ ಸಂಪರ್ಕವಿಭಾಗದ ಸಂಘಟನೆ, ಇತರ ವಿಭಾಗಗಳೊಡನೆ ಇರುವ ಸಂಪರ್ಕ ಇವೇ ಪ್ರಮುಖ ವಿಷಯಗಳನ್ನು ಅಭ್ಯಾಸಮಾಡಬೇಕಾಗುತ್ತದೆ. ಇಷ್ಟೊಂದು ಸುದೀರ್ಘ ಜಾಹೀರಾತಿನ ವಿಷಯವಾಗಿ ಜ್ಯೋತಿಷ್ಯದ ವಿಚಾರವೇನು ಈ ಕೋರ್ಸಿನಲ್ಲಿ ಯಾರು ತಜ್ಞತೆ ಪಡೆಯುವರೆಂಬುದನ್ನು ಪರಿಶೀಲಿಸುವಾ.

ಕಾರಕಗ್ರಹ :— ಜಾಹೀರಾತು, ಪ್ರಚಾರ, ಮಾರಾಟ, ಅರ್ಥಶಾಸ್ತ್ರ ಇವೇ ಮೊದಲಾದ ವಿಷಯಗಳಿಗೆ ಕಾರಕಗ್ರಹವಾದ ಬುಧನೇ ಈ ಕೋರ್ಸಿನ ಕಾರಕಗ್ರಹವಿರುತ್ತಾನೆ. ಬುಧನು ಜಾತಕದಲ್ಲಿ ಪೋಷಕನಿರದೆ ಯಾವ ವಿದ್ಯಾರ್ಥಿಯೂ ಈ ಕೋರ್ಸ್‌ನಲ್ಲಿ ತಜ್ಞತೆ ಪಡೆಯಲಾರನು. ಬುಧನ ತರುವಾಯ ಶುಕ್ರ-ಚಂದ್ರರೂ ಈ ಕೋರ್ಸಿನ ಕಾರಕಗ್ರಹಗಳಿರುತ್ತಾರೆ. ಏಕೆಂದರೆ ಸಾರ್ವಜನಿಕ ಸಂಪರ್ಕ, ಮನಶ್ಶಾಸ್ತ್ರ, ಪ್ರಜಾಸತ್ತೆಯಲ್ಲಿ ಜಾಹೀರಾತಿನ ಪಾತ್ರ ಮೊದಲಾದ ವಿಷಯಗಳ ಮೇಲೆ ಚಂದ್ರನ ಆಧಿಪತ್ಯವಿರುತ್ತದೆ. ಇದಲ್ಲದೆ ಜಾಹೀರಾತು ಕೋರ್ಸು ಇದೊಂದು ಕಲೆಯಿರುತ್ತದೆ. ಹಾಗೂ ಜಾಹೀರಾತಿನ ಉದ್ದಿಮೆ, ಜಾಹೀರಾತಿನ ಕಾರ್ಯವಿಸ್ತರಣೆ, ಸಾಮಾಜಿಕ ನೀತಿ ಈ ಮೊದಲಾದ ವಿಷಯಗಳಿಗೆ ಶುಕ್ರನ ಆಧಿಪತ್ಯವಿರುತ್ತದೆ. ಆದುದರಿಂದ ಬುಧ, ಚಂದ್ರ, ಶುಕ್ರ ಈ ಗ್ರಹಗಳೇ ಈ ಕೋರ್ಸಿನ ಕಾರಕಗ್ರಹಗಳಿರುತ್ತವೆ.

ಸ್ಥಾನ :— ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ತೃತೀಯಸ್ಥಾನವೇ ಈ ಕೋರ್ಸಿನ ಕಾರಕಸ್ಥಾನವಿರುತ್ತದೆ. ತೃತೀಯದ ನಂತರ ದ್ವಿತೀಯ ಹಾಗೂ ಷಷ್ಠಸ್ಥಾನಗಳನ್ನು ಪರಿಶೀಲಿಸಬೇಕು. ಆದ್ದರಿಂದ ಈ ಸ್ಥಾನಗಳೂ ಹಾಗೂ ಈ ಸ್ಥಾನಾಧಿಶರೂ ಪೋಷಕರಿರದೆ ಯಾವ ವಿದ್ಯಾರ್ಥಿಯೂ ಈ ಕೋರ್ಸಿನಲ್ಲಿ ತಜ್ಞತೆ ಪಡೆಯಲಾರನು.

ಲಗ್ನ :— ಲಗ್ನದ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ವೃಷಭ, ಮಿಥುನ, ಕನ್ಯಾ, ಧನು, ಮಕರ, ಮೀನ ಈ ಲಗ್ನದವರೇ ಹೆಚ್ಚಾಗಿರುವದು ಕಂಡುಬರುತ್ತದೆ.

ರಾಶಿ:— ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ವೃಷಭ, ಮಿಥುನ, ಕರ್ಕ, ಕನ್ಯಾ, ತುಲಾ, ಕುಂಭ, ಮೀನ ಈ ರಾಶಿಯ ವಿದ್ಯಾರ್ಥಿಗಳು ಈ ಕೋರ್ಸಿನಲ್ಲಿ ಪಳಗಿದವರಿರುತ್ತಾರೆ.

## ೫. ಮಾರಾಟ ಕಲೆಯ ಡಿಪ್ಲೋಮಾ
## (Diploma in Marketing)

ಮಾರಾಟವೂ ಒಂದು ಕಲೆ. ಶ್ರೀಸಾಮಾನ್ಯನ ಆಕರ್ಷಣೆಯನ್ನು

ಪಡೆದು ಅವನ ಆಸಕ್ತಿಯನ್ನು ಸೂರೆಗೊಳ್ಳುವದು ಕಲೆಯಲ್ಲದೆ ಮತ್ತೇನು ? ಈ ಕಲೆ ಕರಗತವಾಗುವದು ಎಲ್ಲರಿಗೂ ಸಾಧ್ಯವಿಲ್ಲ. ಇದರಂತೆ ಈ ಯುಗವು ಹೇಗೆ ಪ್ರಚಾರಯುಗವಾಗಿದೆಯೋ ಹಾಗೆಯೇ ಸ್ಪರ್ಧೆಯ ಯುಗವೂ ಆಗಿದೆ. ಈ ಸ್ಪರ್ಧಾತ್ಮಕ ದಿನಗಳಲ್ಲಿ ಯಶಸ್ವೀ ಮಾರಾಟ ಮಾಡಬೇಕಾದರೆ ಮಾರಾಟದ ತಂತ್ರವನ್ನು ಸಾಧಿಸಿಕೊಳ್ಳಬೇಕಾಗುತ್ತದೆ. ಈ ಮಾರಾಟದ ಕಲೆ ಇಂದು ವೈಜ್ಞಾನಿಕ ತತ್ತ್ವಗಳ ಆಧಾರದ ಮೇಲೆ ರಚಿತವಾಗಿದ್ದು ಇದೊಂದು ಶಾಸ್ತ್ರವೇ ಆಗಿದೆ. ಈ ಶಾಸ್ತ್ರದ ಅಭ್ಯಾಸದ ಪರಿಚಯ ಮಾಡಿಕೊಳ್ಳುವದು ಅತ್ಯವಶ್ಯವಾಗಿದೆ.

ಮಾರಾಟ ಕಲೆಯ ಡಿಪ್ಲೋಮಾ ಒಂದು ವರ್ಷದ ತರಬೇತಿಯ ಕೋರ್ಸು ಇದ್ದು ಈ ತರಬೇತಿಯ ಕಾಲದಲ್ಲಿ ಮಾರಾಟ ಆಧುನಿಕ ಸಮಾಜದಲ್ಲಿ ಹೇಗೆ ಬೆಳೆಯಿತು, ಪರದೇಶದಲ್ಲಿ ಮಾರಾಟ ಹೇಗಿದೆ ಯೋಜಿತ ಆರ್ಥಿಕ ಸಮಾಜದಲ್ಲಿ ಮಾರಾಟದ ಸ್ಥಾನವೇನು ಮಾರಾಟ ಸಂಸ್ಥೆಯ ಸಂಘಟನೆ, ಜಾಹೀರಾತು, ಇಲಾಖೆಗಳ ರಚನೆ, ಮಾರಾಟದ ಯೋಜನೆಗಳು, ಉತ್ಪಾದನೆ–ಅಭಿವೃದ್ಧಿ, ವಿತರಣೆಯ ಪದ್ಧತಿ, ಭಾರತದಲ್ಲಿ ಮಾರಾಟ ಕಟ್ಟೆ, ಮಾರಾಟದ ವ್ಯವಸ್ಥೆ, ಪರದೇಶದಲ್ಲಿ ಮಾರಾಟಕ್ಕೆ ಬಳಸುವ ತಂತ್ರಗಳು, ಯೋಜಿತ ಮಾರಾಟ, ಮಾರಾಟ ವಿಭಾಗಗಳ ಸಂಘಟನೆ, ಆಯಾ ವಿಭಾಗಗಳ ಕಾರ್ಯಾಚರಣೆ, ಆಯ–ವ್ಯಯಗಳ ನಿಯಂತ್ರಣ, ಮಾರಾಟ ವ್ಯವಸ್ಥೆಯಲ್ಲಿಯ ನಾಯಕತ್ವದ ಮಹತ್ವ, ಭಾರತ ಗ್ರಾಮಗಳ ಹಾಗೂ ನಗರಗಳ ಮಾರುಕಟ್ಟೆ, ಮಾರಾಟದ ಶಕ್ತಿ, ಮಾರಾಟದ ಉದ್ಧಾರ, ಮಾರಾಟಗಾರನಿಗಿರಬೇಕಾದ ಚಾತುರ್ಯ, ಕುಶಲತೆ, ಸಾಧಿಸುವ ವಿಧಾನ, ಗ್ರಾಹಕರ ಪಾತ್ರ ಇವೇ ಮೊದಲಾದ ವ್ಯಾಪಾರದ ಪ್ರಮುಖ ವಿಷಯಗಳೊಡನೆ ವಾಣಿಜ್ಯ ಕಾಯ್ದೆ, ಮನಶ್ಶಾಸ್ತ್ರ, ಅರ್ಥಶಾಸ್ತ್ರ, ವ್ಯಕ್ತಿಸಮಸ್ಯೆ, ಸಾರ್ವಜನಿಕ ಸಂಪರ್ಕ, ಜಾಹೀರಾತಿನ ಪಾತ್ರ, ವಾಣಿಜ್ಯ ಕಾಯ್ದೆಯಲ್ಲಿಯ ಕಾಪೀರೈಟ್, ಪೇಟೆಂಟ್, ಕಂಟ್ರ್ಯಾಕ್ಟ, ಸೇಲ್ ಅಫ್ ಗೂಡ್ಸ ಇವುಗಳ ಮಹತ್ವ, ಪ್ರಾಯೋಗಿಕ ಅರ್ಥಶಾಸ್ತ್ರ ಹಾಗೂ ಅಂಕಿ–ಸಂಖ್ಯಾಶಾಸ್ತ್ರದ ಮಹತ್ವ, ಮಾರಾಟದ ಸಂಶೋಧನೆ, ಸಮಸ್ಯೆಗಳ ವಿಶ್ಲೇಷಣೆ, ಯೋಜನೆ,

ಸಂಘಟನೆ ಇವೇ ಮೊದಲಾದ ವಿಷಯ.ಗಳನ್ನು ಈ ಕೋರ್ಸಿನಲ್ಲಿ ಕಲಿಯ ಬೇಕಾಗುತ್ತದೆ. ಇನ್ನು ಫಲಜ್ಯೋತಿಷ್ಯಶಾಸ್ತ್ರದಲ್ಲಿ ಈ ಕೋರ್ಸಿನ ಕಾರಕ ಗ್ರಹ, ರಾಶಿ, ಲಗ್ನ, ಸ್ಥಾನಾದಿಗಳಾವವೆಂಬುದನ್ನು ಪರಿಶೀಲಿಸುವಾ.

ಕಾರಕಗ್ರಹ :— ಮಾರಾಟ, ಬ್ಯಾಂಕಿಂಗ್, ವ್ಯಾಪಾರ, ಅರ್ಥ ಶಾಸ್ತ್ರ ಈ ಮೊದಲಾದ ವಿಷಯಗಳಿಗೆ ಕಾರಕಗ್ರಹವಾದ ಬುಧನೂ, ವಾಣಿಜ್ಯಕಾರ್ಯ, ಸಾರ್ವಜನಿಕ ಸಂಪರ್ಕ ಈ ಮೊದಲಾದ ಕಾರಕಗ್ರಹ ವಾದ ಶನಿಯೂ, ಜಾಹೀರಾತು, ವಾಣಿಜ್ಯತಂತ್ರ ಈ ಮೊದಲಾದ ವಿಷಯ ಗಳ ಕಾರಕನಾದ ಚಂದ್ರನೂ ಈ ಕೋರ್ಸಿಗೆ ಕಾರಕಗ್ರಹಗಳಾಗುತ್ತಾರೆ.

ಲಗ್ನ :— ಲಗ್ನದ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ವೃಷಭ, ಮಿಥುನ, ಕರ್ಕ, ತುಲಾ, ವೃಶ್ಚಿಕ, ಧನು, ಮಕರ, ಮೀನ ಈ ಲಗ್ನದವರೇ ಹೆಚ್ಚಾಗಿರುವದು ಕಂಡುಬರುತ್ತದೆ.

ಸ್ಥಾನ :— ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ವೃತ್ತಿಯ ಸ್ಥಾನ ವಾದಂಥ ಷಷ್ಠಸ್ಥಾನವೇ ಈ ಕೋರ್ಸಿನ ಕಾರಕಸ್ಥಾನವಿರುವದರಿಂದ ಷಷ್ಠ ಸ್ಥಾನ ಹಾಗೂ ಷಷ್ಠೇಶ ಪೂರಕರಿರದೆ ಯಾವ ವಿದ್ಯಾರ್ಥಿಯೂ ಈ ಕೋರ್ಸಿನಲ್ಲಿ ಯಶಸ್ಸು ಪಡೆಯಲಾರನು.

ರಾಶಿ :— ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ವೃಷಭ, ಮಿಥುನ, ಕರ್ಕ, ಕನ್ಯಾ, ತುಲಾ, ಕುಂಭ, ಮೀನ ಈ ರಾಶಿಯವರೇ ಈ ಕೋರ್ಸಿನಲ್ಲಿ ಪಳಗಿದವರಿದ್ದುದು ಕಂಡುಬರುತ್ತದೆ.

## ೪. ಎಲ್‌ಎಲ್. ಬಿ. / ಬಿ ಎಲ್., ಎಲ್‌ಎಲ್. ಎಮ್. ಮುಂತಾದ ಕಾಯ್ದೆ ಕೋರ್ಸುಗಳು

ಭಾರತದಲ್ಲಿ ಕಳೆದ ೨೦೦ ವರ್ಷಗಳಲ್ಲಿ ಶಿಕ್ಷಣರಂಗದಲ್ಲಿ ಮಹತ್ವದ ಬದಲಾವಣೆಗಳಾಗಿವೆ. ಅದರಲ್ಲಿಯೂ ಸ್ವಾತಂತ್ರ್ಯದ ನಂತರ ಅನೇಕ ಬದಲಾವಣೆಗಳಾಗಿವೆ. ಕಾಯ್ದೆ ವ್ಯಾಸಂಗವನ್ನು ವಿವೇಚಿಸಿದರೆ, ಸ್ವಾತಂತ್ರ್ಯ ಪೂರ್ವದಲ್ಲಿ ಎಲ್‌ಎಲ್. ಬಿ. ಅಥವಾ ಕಾಯ್ದೆ ಪದವಿ ಹಾಗೂ ಪ್ಲೀಡರ್ ಸರ್ಟಿಫಿಕೇಟ್ ಪರೀಕ್ಷೆಗಳಿದ್ದವು. ಪ್ಲೀಡರ್ ಸರ್ಟಿಫಿಕೇಟ್ ಪರೀಕ್ಷೆ ಕ್ರಮೇಣ

ತೆಗೆದುಹಾಕಲಾಯಿತು. ಕೆಲವು ವಿಶ್ವವಿದ್ಯಾಲಯಗಳಲ್ಲಿ ಇಂಟರ್‌ಮಿಡಿ-ಯೇಟ್ ಪರೀಕ್ಷೆ ( ಈಗಿನ ಬಿ. ಎ. ೧, ಬಿ. ಎಸ್‌ಸಿ. ೧, ಬಿ. ಕಾಮ್. ೧ ರ ಸಮಾನ ಪರೀಕ್ಷೆ) ಉತ್ತೀರ್ಣರಾದವರೂ ಕೂಡ ಎಲ್‌ಎಲ್. ಬಿ. ಪದವಿಗೆ ವ್ಯಾಸಂಗ ಮಾಡಲು ಅವಕಾಶವಿತ್ತು. ಕೆಲವರು ಬಿ. ಎ., ಬಿ. ಎಸ್‌ಸಿ., ಬಿ. ಕಾಮ್., ಎಮ್. ಎ., ಎಮ್. ಎಸ್‌ಸಿ., ಎಮ್. ಕಾಮ್. ಪದವಿಗಳನ್ನು ಪಡೆದ ನಂತರವೂ ಈ ಕಾಯ್ದೆ ಪದವಿ ವ್ಯಾಸಂಗ ಮಾಡುತ್ತಿದ್ದರು. ಆದರೆ ಪ್ಲೀಡರ್ ಪರೀಕ್ಷೆಗೆ ಮಾತ್ರ ಎಸ್. ಎಸ್. ಎಲ್. ಸಿ. ಯಲ್ಲಿ, ಅದಕ್ಕೂ ಮೊದಲು ಸ್ಕೂಲ ಫಾಯಿನಲ್‌ದಲ್ಲಿ ಉತ್ತೀರ್ಣರಾದರೆ ಸಾಕಾಗಿತ್ತು. ಆದರೆ ಈಗ ಅಖಿಲಭಾರತ ಬಾರ್ ಕೌನ್ಸಿಲ್‌ದವರ ಶಿಫಾರಸ್ ಮೇರೆಗೆ ರಚಿತವಾಗಿರುವ ನಿಯಮಗಳಂತೆ ಕಾಯ್ದೆ ವ್ಯಾಸಂಗವನ್ನು ಮೂರು ವರ್ಷಗಳವರೆಗೆ ಮಾಡಬೇಕಾಗುತ್ತದೆ. ಈ ನಿಯಮಗಳನ್ವಯ ವಿನಾಯತಿ (Exemption) ಯನ್ನು ಕೆಲವು ವಿಶ್ವವಿದ್ಯಾಲಯಗಳು ಪಡೆದಿವೆ. ಹೀಗೆ ವಿನಾಯತಿ ಪಡೆದ ವಿಶ್ವವಿದ್ಯಾಲಯಗಳ ಕಾಯ್ದೆ ವ್ಯಾಸಂಗ ಎರಡು ವರ್ಷಗಳದ್ದಿರುತ್ತದೆ. ಆದರೆ ಈ ವಿಶ್ವವಿದ್ಯಾಲಯಗಳಲ್ಲಿಯೂ ಕೂಡ ಈಗ ಕೆಲವು ವರ್ಷಗಳಿಂದ ಮೂರು ವರ್ಷದ ಕಾಯ್ದೆ ವ್ಯಾಸಂಗ ಮಾಡಬೇಕಾಗುತ್ತದೆ. ಹೀಗಾಗಿ ರಾಷ್ಟ್ರಾದ್ಯಂತ ಕಾಯ್ದೆ ವ್ಯಾಸಂಗಕ್ಕೆ ಮೂರು ವರ್ಷಗಳ ಕೋರ್ಸು ಇದ್ದು, ಯಾವುದೇ ಪದವಿ ಪಡೆದವರು ( ಬಿ. ಎ., ಬಿ. ಕಾಮ್., ಬಿ. ಎಸ್‌ಸಿ. ಮೊದಲಾದ ಪದವೀಧರರು) ಈ ಕೋರ್ಸಿನ ವ್ಯಾಸಂಗ ಮಾಡಬಹುದು. ಸ್ವಾತಂತ್ರ್ಯಪೂರ್ವದಲ್ಲಿ ಎರಡು ವರ್ಷಗಳಲ್ಲಿ ಪಡೆಯಬಹುದಾದ ಕಾಯ್ದೆ ಪದವಿಗೆ ಈಗ ಮೂರು ವರ್ಷಗಳ ಅವಧಿ ಹಿಡಿಯುತ್ತದೆ.

ಕಾಯ್ದೆ ಪದವಿಗೆ ಕಂಟ್ರ್ಯಾಕ್ಟ ಕಾಯ್ದೆ, ಇಂಡಿಯನ್ ಪಿನಲ್ ಕೋಡ, ಸಿವಿಲ್ ಪ್ರೋಸಿಜರ್, ಕ್ರಿಮಿನಲ್ ಪ್ರೋಸಿಜರ್, ಜ್ಯೂರೀಸ್‌ಪ್ರುಡೆನ್ಸ, ಇಂಡಿಯನ್ ಕಾನ್‌ಸ್ಟಿಟ್ಯೂಶನ್, ಎವಿಡನ್ಸ ಆ್ಯಕ್ಟ, ಭಾರತದ ರಾಜ್ಯಾಂಗ ಕಾಯ್ದೆ ಹಾಗೂ ರಾಜ್ಯಾಂಗ ಘಟನಾ ಚರಿತ್ರೆ ಮತ್ತು ಆಡಳಿತಾತ್ಮಕ ಕಾಯ್ದೆ, ಹಿಂದು ಕಾಯ್ದೆ, ಮಹಮ್ಮಡನ್ ಕಾಯ್ದೆ, ಸಾರ್ವಜನಿಕ ಅಂತಾರಾಷ್ಟ್ರೀಯ ಕಾಯ್ದೆ, ಕಂಪನಿ ಕಾಯ್ದೆ, ಕೋರ್ಟ ಫೀ, ದಾವೆ ಮೌಲ್ಯಮಾಪನೆ, ವೃತ್ತಿ

ನೀತಿ, ಕಾರ್ಮಿಕರ ಕಾಯ್ದೆ, ವಿಮಾ ಕಾಯ್ದೆ, ಕರಾಕರಣ ಕಾಯ್ದೆ, ಕ್ರಿಮಿನಾಲಜಿ, ಖಾಸಗಿ ಅಂತಾರಾಷ್ಟ್ರೀಯ ಕಾಯ್ದೆ ಮೊದಲಾದ ವಿಷಯಗಳನ್ನು ಅಭ್ಯಾಸ ಮಾಡಬೇಕಾಗುತ್ತದೆ.

ಎಲ್‌ಎಲ್. ಬಿ. ಅಥವಾ ಬಿ. ಎಲ್. ಪದವೀಧರರು ಎಮ್. ಎಲ್. ಅಥವಾ ಎಲ್‌ಎಲ್. ಎಮ್. ಪದವಿಗೆ ಅಭ್ಯಾಸ ಮಾಡಬಹುದು. ಕಾಯ್ದೆ ಪದವೀಧರರು ಎಲ್‌ಎಲ್. ಎಮ್. ಅಭ್ಯಾಸ ಎರಡು ವರ್ಷಗಳ ವರೆಗೆ ಮಾಡಬೇಕಾಗುತ್ತದೆ. ಇಲ್ಲಿ ವಿಶಿಷ್ಟ ಅಭ್ಯಾಸ ಹಾಗೂ ಕೆಲವು ವಿಷಯಗಳಲ್ಲಿ ತಜ್ಞತೆ ಪಡೆಯಬಹುದು. ಎಲ್‌ಎಲ್. ಎಂ. ಕೋರ್ಸಿನಲ್ಲಿ ನಾಲ್ಕು ಶಾಖೆಗಳಿವೆ. ಇವುಗಳಲ್ಲಿ ಯಾವುದಾದರೂ ಒಂದು ಶಾಖೆಯನ್ನು ಆಯ್ದುಕೊಂಡು ತಜ್ಞತೆ ಪಡೆಯಬಹುದು. ಈ ಶಾಖೆಗಳೆಂದರೆ: ೧) ಮರ್ಕಂಟೈಲ್ ಲಾ, ೨) ಕ್ರಿಮಿನಲ್ ಲಾ ಮತ್ತು ಟಾರ್ಟ್ಸ್, ೩) ಅಡ್ವಾನ್ಸ್‌ಡ ಜ್ಯೂರಿಸ್‌ಪ್ರುಡನ್ಸ, ೪) ಕಾನ್ಸ್‌ಟಿಟ್ಯೂಷನಲ್ ಲಾ— ಆಂತರಿಕ ಹಾಗೂ ಬಾಹ್ಯವಾಗಿ ಎಲ್‌ಎಲ್. ಎಮ್. ಪದವಿ ಪಡೆಯಬಹುದು. ಬಾಹ್ಯ ಪರೀಕ್ಷೆಗಾಗಿ ವಿಶೇಷ ತರಗತಿಗಳನ್ನು ನಡೆಯಿಸಿ (ರಜಾ ದಿನಗಳಲ್ಲಿ) ಪರೀಕ್ಷೆಗೆ ಕೂಡ್ರಲು ಅವಕಾಶವಿದೆ. ಎಲ್‌ಎಲ್. ಬಿ. ಆದ ಮೂರು ವರ್ಷಗಳ ನಂತರ ಈ ಬಾಹ್ಯ (ರಜೆ ದಿನಗಳ) ಪರೀಕ್ಷೆಗೆ ಕೂಡ್ರಬಹುದು.

ಹೀಗೆ ಎಲ್‌ಎಲ್. ಬಿ. ಹಾಗೂ ಎಲ್‌ಎಲ್. ಎಮ್. ಪದವಿಗಳಿಗೆ ವಿಷಯ ಸಂಯೋಜನೆ, ಕಾಲಾವಧಿಗಳಾಗಿದ್ದರೆ ಜ್ಯೋತಿಷ್ಯಶಾಸ್ತ್ರದ ಮೇರೆಗೆ ಈ ಕೋರ್ಸುಗಳನ್ನು ಪಡೆಯಲು ಜಾತಕ ಹೇಗಿರಬೇಕು, ಕಾರಕಲಗ್ನ, ರಾಶಿ, ಸ್ಥಾನ, ಗ್ರಹಗಳಾದಿ ಯಾವವು ಎಂಬುದರ ವಿಶ್ಲೇಷಣೆ ಮಾಡೋಣ.

**ಕಾರಕಗ್ರಹ :—** ಕಾಯಿದೆಯನ್ನು ಅಭ್ಯಸಿಸುವ ಎಲ್ಲ ವಿಷಯಗಳಿಗೂ ಶನಿಯೇ ಕಾರಕನಿರುತ್ತಾನೆ. ಶನಿಯು ಬಲಾಢ್ಯನಿರದೆ ಯಾವ ವಿದ್ಯಾರ್ಥಿಯೂ ಈ ಕೋರ್ಸಿನಲ್ಲಿ ತಜ್ಞತೆ ಪಡೆಯಲಾರನು. ಶನಿಯ ತರುವಾಯ ಗುರುವೂ ಈ ಕೋರ್ಸಿನ ಕಾರಕನಿರುತ್ತಾನೆ. ಏಕೆಂದರೆ ನ್ಯಾಯ, ತರ್ಕ ಇವು ಗುರುವಿನ ವಿಷಯಗಳಿರುತ್ತವೆ.

ಸ್ಥಾನ — ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ವಿದ್ಯೆಯ ಸ್ಥಾನವಾದ ಪಂಚಮಸ್ಥಾನವೇ ಈ ಕೋರ್ಸಿನ ಕಾರಕಸ್ಥಾನವಿರುತ್ತದೆ. ಕಾಯ್ದೆ ಅಭ್ಯಾಸಮಾಡಿ ವಕೀಲಿ ವೃತ್ತಿಯನ್ನು ಪ್ರಾರಂಭಿಸುವವರಿಗೆ ವೃತ್ತಿಯ ಸ್ಥಾನವಾದ ಷಷ್ಠಸ್ಥಾನದೊಂದಿಗೆ ವಕೀಲರ ಸ್ಥಾನವಾದ ದ್ವಿತೀಯ ಸ್ಥಾನವನ್ನೂ ಪರಿಶೀಲಿಸಬೇಕು. ಹೀಗೆ ಪಂಚಮ, ಷಷ್ಠ, ದ್ವಿತೀಯ ಈ ಸ್ಥಾನಗಳೂ ಹಾಗೂ ಈ ಸ್ಥಾನಾಧೀಶರೂ ಪೋಷಕರಿರದೆ ಯಾವ ವಿದ್ಯಾರ್ಥಿಯೂ ಈ ಕೋರ್ಸಿನಲ್ಲಿ ತಜ್ಞತೆ ಪಡೆಯಲಾರನು.

ಲಗ್ನ :— ಲಗ್ನದ ದೃಷ್ಟಿಯಿಂದ ಪರಿಶೀಲಿಸಿದರೆ ಈ ಕೋರ್ಸಿನ ವಿದ್ಯಾರ್ಥಿಗಳು ಹೆಚ್ಚಾಗಿ ಮೇಷ, ವೃಷಭ, ಮಿಥುನ, ತುಲಾ, ವೃಶ್ಚಿಕ, ಧನು, ಕುಂಭ, ಮೀನ ಈ ಲಗ್ನದವರೇ ಇರುರುವದು ಕಂಡುಬರುತ್ತದೆ.

ರಾಶಿ : — ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ನಿರ್ದಿಷ್ಟ ರಾಶಿಯವರೇ ಈ ಕೋರ್ಸಿನಲ್ಲಿ ತಜ್ಞತೆ ಪಡೆಯುವರೆಂದು ಹೇಳಲುಬಾರದು.

## ಡಿಪ್ಲೋಮಾ ಇನ್ ಲೇಬರ್ ವೆಲ್‌ಫೇರ್
## (ಕಾರ್ಮಿಕ ಕಲ್ಯಾಣ ಡಿಪ್ಲೊಮಾ)

ಮಾಲಕ-ಕಾರ್ಮಿಕರ ಹೋರಾಟ ನಿಬಿರವಾಗಿ ನಡೆದಿರುವ ಈ ಕಾಲದಲ್ಲಿ ಓರ್ವ ಮಾಲಕನ ಪರವಾಗಿ ಕಾರ್ಮಿಕ ಕಲ್ಯಾಣಕ್ಕೆಂದು ಅಧಿಕಾರಿಯನ್ನು ನೇಮಿಸುವದರಿಂದ ಮಾಲಕ-ಕಾರ್ಮಿಕರ ನಡುವಿನ ಸಂಬಂಧ ಸುಧಾರಿಸಬಹುದೆಂದು ಪ್ರತಿ ಕಾರಖಾನೆಯಲ್ಲಿ ಅದರಲ್ಲಿಯೂ ದೊಡ್ಡ ಉದ್ದಿಮೆಗಳಲ್ಲಿ ಒಂದೊಂದು ಕಚೇರಿಯಲ್ಲಿ ಒಬ್ಬೊಬ್ಬ ಕಾರ್ಮಿಕ ಕಲ್ಯಾಣ ಅಧಿಕಾರಿಯನ್ನು ನಿಯಮಿಸುವ ಪರಿಪಾಠ ಪ್ರಾರಂಭವಾಯಿತು. ಆ ಬಳಿಕ ಇದೊಂದು ಕಾಯ್ದೆಯಾಯಿತು. ಈ ಅಧಿಕಾರಿಯ ಹುದ್ದೆ ಪಡೆಯಬೇಕಾದರೆ "ಡಿಪ್ಲೊಮಾ ಇನ್ ಲೇಬರ್ ವೆಲ್‌ಫೇರ್" ಎಂಬ ಕೋರ್ಸನ್ನು ಮುಗಿಸಿರಬೇಕಾಗುತ್ತದೆ. ಈ ಕೋರ್ಸು ಸಾಮಾನ್ಯವಾಗಿ ಎರಡು ವರ್ಷಗಳ ಅವಧಿಯದಿದ್ದು, ಇದರಲ್ಲಿ ಕಾರ್ಮಿಕರಿಗೆ ಹಾಗೂ ಕಾರಖಾನೆಗಳಿಗೆ ಸಂಬಂಧಿಸಿದ ಎಲ್ಲ ಕಾಯ್ದೆಗಳ ಜ್ಞಾನ ಒದಗಿಸಲಾಗುತ್ತದೆ.

ಇದಲ್ಲದೆ ಮಾಲಿಕರ ಹಾಗೂ ಕಾರ್ಮಿಕರ ನಡುವೆ ಮಧುರ ಸಂಬಂಧವನ್ನು ಸ್ಥಾಪಿಸುವ ರೀತಿ, ಔದ್ಯೋಗಿಕ ತಂಟೆಗಳು ಉಂಟಾದರೆ ಅವುಗಳನ್ನು ಮಾತುಕತೆಗಳ ಮೂಲಕ ಬಗೆಹರಿಸುವ ತಂತ್ರ, ಕಾರ್ಮಿಕರ ಪ್ರಾವಿಡೆಂಟ್ ಫಂಡ್, ಗ್ರ್ಯಾಚ್ಯುಯಿಟಿ, ಎಂಪ್ಲಾಯೀಸ್ ಸ್ಟೇಟ್ ಇನ್ಸೂರೆನ್ಸ ಮೊದಲಾದ ವಿಷಯಗಳನ್ನು ಇಲ್ಲಿ ಕಲಿಸಲಾಗುತ್ತದೆ. ಕಾರ್ಮಿಕರು ಅಧಿಕ ಸಂಖ್ಯೆಯಲ್ಲಿದ್ದರೆ ಈ ಅಧಿಕಾರಿಯನ್ನು ನಿಯಮಿಸಲೇಬೇಕೆಂಬ ಕಪ್ಪಾಯವಿರುವದರಿಂದ ಈ ಡಿಪ್ಲೊಮಾ ಪಡೆದವರಿಗೆ ಹೆಚ್ಚಿನ ಬೇಡಿಕೆಯಿದೆ. ಆದುದರಿಂದ ಇಷ್ಟೊಂದು ಮಹತ್ವಪೂರ್ಣವಾದ ಕೋರ್ಸಿನ ವಿಷಯವಾಗಿ ಜ್ಯೋತಿಷ್ಯದ ವಿಚಾರವೇನು ಎಂಬುದನ್ನು ಪರಿಶೀಲಿಸುವಾ.

ಕಾರಕಗ್ರಹ :— ಕಾರ್ಮಿಕರ ಹಾಗೂ ಕಾಯ್ದೆಯ ಕಾರಕಗ್ರಹವಾದ ಶನಿಯೇ ಈ ಕೋರ್ಸಿನ ಕಾರಕಗ್ರಹನು. ಶನಿಯು ಬಲಾಢ್ಯನಿರದೆ ಯಾರಿಗೂ ಈ ಕೋರ್ಸಿನಲ್ಲಿ ತಜ್ಞತೆ ದೊರೆಯಲಾರದು. ಶನಿಯ ತರುವಾಯ ನ್ಯಾಯ, ತರ್ಕ, ತತ್ತ್ವಜ್ಞಾನ ಮೊದಲಾದ ವಿಷಯಗಳ ಕಾರಕಗ್ರಹವಾದ ಗುರುವನ್ನೂ ಪರಿಶೀಲಿಸಬೇಕು.

ಸ್ಥಾನ: — ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ದಶಮಸ್ಥಾನವೇ ಈ ಕೋರ್ಸಿನ ಕಾರಕಸ್ಥಾನವು. ದಶಮದ ನಂತರ ವೃತ್ತಿಕೋರ್ಸಿನ ಕಾರಕವಾದ ಷಷ್ಠಸ್ಥಾನವನ್ನೂ ಪರಿಶೀಲಿಸಬೇಕು. ಆದುದರಿಂದ ಈ ಸ್ಥಾನಗಳೂ ಹಾಗೂ ಸ್ಥಾನಾಧೀಶರೂ ಪೋಷಕರಿರದೆ ಯಾವ ವಿದ್ಯಾರ್ಥಿಯೂ ಈ ಕೋರ್ಸಿನಲ್ಲಿ ಯಶಸ್ವಿಯಾಗಲಾರನು.

ಲಗ್ನ :— ಲಗ್ನದ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ವೃಷಭ, ಮಿಥುನ, ಸಿಂಹ, ತುಲಾ, ವೃಶ್ಚಿಕ, ಧನು, ಮೀನ ಈ ಲಗ್ನದ ವಿದ್ಯಾರ್ಥಿಗಳೇ ಈ ಕೋರ್ಸಿನಲ್ಲಿ ಪಳಗಿದವರಿದ್ದುದು ಕಂಡುಬರುತ್ತದೆ.

ರಾಶಿ :— ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ಮಿಥುನ, ತುಲಾ, ಕುಂಭ ಈ ರಾಶಿಯ ವಿದ್ಯಾರ್ಥಿಗಳು ತದನಂತರ ಕರ್ಕ, ವೃಶ್ಚಿಕ, ಮಕರ, ಮೀನ ಈ ರಾಶಿಯವರು ಈ ಕೋರ್ಸಿನಲ್ಲಿ ತಜ್ಞರಿರುವದು ಕಂಡುಬಂದಿದೆ.

## ೫. ತಾಂತ್ರಿಕ ಶಿಕ್ಷಣದ ಕೋರ್ಸುಗಳು (ಇಂಜನಿಯರಿಂಗ್ ಕೋರ್ಸುಗಳು)

ಶಿಕ್ಷಣದ ಕ್ಷೇತ್ರದಲ್ಲಿ ತಾಂತ್ರಿಕ (ಇಂಜನಿಯರಿಂಗ) ಶಿಕ್ಷಣ ಬಹಳ ಮಹತ್ವದ ಸ್ಥಾನವನ್ನು ಪಡೆದಿದೆ. ಯೋಜಿತ ಅಭಿವೃದ್ಧಿಯ ಹಿನ್ನಲೆಯಲ್ಲಿ ತಾಂತ್ರಿಕ ಶಿಕ್ಷಣವಿರುತ್ತದೆ. ಈ ವಿಭಾಗದಲ್ಲಿ ಪದವೀಶಿಕ್ಷಣ, ಸ್ನಾತಕೋತ್ತರ ಪದವಿ ಶಿಕ್ಷಣ, ಡಿಪ್ಲೊಮಾ ಶಿಕ್ಷಣ, ಸರ್ಟಿಫಿಕೇಟ್ ಕೋರ್ಸುಗಳು ಮೊದಲಾಗಿ ಮುಖ್ಯ ಮೂರು ವಿಭಾಗಗಳನ್ನು ಮಾಡಬಹುದು. ಎಸ್. ಎಸ್. ಎಲ್. ಸಿ. ನಂತರ ಆರು ವರ್ಷಗಳ ಕೋರ್ಸು ಇಂಜನಿಯರಿಂಗ್ ಪದವಿ ಶಿಕ್ಷಣದ್ದು, ಎಸ್. ಎಸ್. ಎಲ್. ಸಿ. ಯಲ್ಲಿ ವಿಜ್ಞಾನದ ಐಚ್ಛಿಕ ವಿಷಯವನ್ನು ಪಡೆದವರು ಪಿ.ಯು. ಸಿ. ಯಲ್ಲಿ ಪಿ. ಸಿ. ಎಮ್. ಗುಂಪಿನ ಭೌತ ವಿಜ್ಞಾನ, ರಸಾಯನಶಾಸ್ತ್ರ, ಗಣಿತಶಾಸ್ತ್ರಗಳನ್ನು ಐಚ್ಛಿಕ ವಿಷಯಗಳನ್ನಾಗಿ ಆಯ್ದುಕೊಂಡು ಉತ್ತೀರ್ಣರಾಗಬೇಕು. ಪಿ. ಯು. ಸಿ. ನಂತರ ಐದು ವರ್ಷಗಳ ಕೋರ್ಸು ಇಂಜನಿಯರಿಂಗ ಪದವಿ ಶಿಕ್ಷಣಕ್ಕೆ ಅರ್ಹತೆಯನ್ನು ನೀಡುತ್ತದೆ. ಇದರಂತೆಯೇ ಎಸ್. ಎಸ್. ಎಲ್. ಸಿ. ಯಲ್ಲಿ ಪಿ. ಸಿ. ಎಮ್. ಗುಂಪಿನ ವಿಷಯವನ್ನು ಆಯ್ದುಕೊಂಡವರು ಮೂರು ವರ್ಷಗಳ ವ್ಯಾಸಂಗದ (ಕೆಲವು ಕಡೆ ೨ ವರ್ಷ ಅವಧಿಯ) ಶಿಕ್ಷಣಕ್ಕೆ ಡಿಪ್ಲೊಮಾ ತಾಂತ್ರಿಕ ಶಿಕ್ಷಣದ ಕೋರ್ಸುಗಳು ೬ ತಿಂಗಳಿಂದ ೧೮ ತಿಂಗಳ ವ್ಯಾಸಂಗದ ತಾಂತ್ರಿಕ ಶಿಕ್ಷಣದ ಸರ್ಟಿಫಿಕೇಟ್ ಕೋರ್ಸುಗಳು ಹೀಗೆ ತಾಂತ್ರಿಕ ಶಿಕ್ಷಣ ಕೋರ್ಸುಗಳಲ್ಲಿ ಮೂರು ವಿಭಾಗಗಳಿವೆ.

### ಕೋರ್ಸುಗಳಲ್ಲಿ ಪ್ರಕಾರಗಳು

ತಾಂತ್ರಿಕ ಶಿಕ್ಷಣದ ಕೋರ್ಸುಗಳನ್ನು ಕಲಿಯಲು ಜಾತಕದಲ್ಲಿಯ ಯಾವ ಯಾವ ಗ್ರಹ, ಲಗ್ನ, ಸ್ಥಾನ, ರಾಶಿಗಳು ಕಾರಕವಾಗಿ ಪ್ರಭಾವ ಬೀರಬಲ್ಲವು, ಜಾತಕವೆಂತಿರಬೇಕು, ಈ ಕೋರ್ಸಿನ ವಿಷಯವಾಗಿ ಜ್ಯೋತಿಷ್ಯದ ವಿಚಾರವೇನು ಎಂದು ಪ್ರಶ್ನಿಸಿದರೆ ಇದಕ್ಕೆ ಒಂದೇ ಮಾತಿನಲ್ಲಿ ಉತ್ತರ ಕೊಡುವದು ಕಠಿಣ. ಏಕೆಂದರೆ ಈ ಕೋರ್ಸಿನ ಶಿಕ್ಷಣದಲ್ಲಿ ಅನೇಕ ಪ್ರಕಾರಗಳಿದ್ದು ಭಿನ್ನ ಭಿನ್ನ ಕೋರ್ಸುಗಳಿಗೆ ಭಿನ್ನ ಭಿನ್ನ ಗ್ರಹ, ಸ್ಥಾನ,

ಲಗ್ನ, ರಾಶಿಗಳು ಕಾರಕವೂ, ಪೋಷಕವೂ ಇದ್ದು ಇದೊಂದೇ ಕೋರ್ಸಿನ ವಿಷಯವಾಗಿ ಪ್ರತ್ಯೇಕವಾಗಿ ಒಂದು ಸ್ವತಂತ್ರ ಪುಸ್ತಕ ಬರೆಯುವಷ್ಟು ಇದರ ವ್ಯಾಪ್ತಿಯಿರುವದರಿಂದ ಸ್ಥೂಲವಾಗಿ ಮಾತ್ರ ಇಲ್ಲಿ ಪರಿಶೀಲಿಸಲಾಗಿದ್ದು, ಪ್ರಪ್ರಥಮವಾಗಿ ಈ ಕೋರ್ಸಿನ ಪ್ರಕಾರಗಳಾವವೆಂಬುದನ್ನು ಪರಿಶೀಲಿಸುವಾ.

**ಪದವೀ ಕೋರ್ಸುಗಳು :**

೧) ಸಿವಿಲ್ ಇಂಜನಿಯರಿಂಗ
೨) ಮೆಕ್ಯಾನಿಕಲ್ ಇಂಜನಿಯರಿಂಗ
೩) ಇಲೆಕ್ಟ್ರಿಕಲ್ ಇಂಜನಿಯರಿಂಗ
೪) ಅಗ್ರಿಕಲ್ಚರಲ್ ಇಂಜನಿಯರಿಂಗ
೫) ಕೆಮಿಕಲ್ ಇಂಜನಿಯರಿಂಗ
೬) ಮೆಟಲರ್ಜಿಕಲ್ ಇಂಜನಿಯರಿಂಗ
೭) ಟೆಕ್ಸಟೈಲ್ ಇಂಜನಿಯರಿಂಗ
೮) ಏರೋನಾಟಿಕಲ್ ಇಂಜನಿಯರಿಂಗ
೯) ಬಿ. ಎಸ್‌ಸಿ. ಟೆಕ್ನಾಲಜಿ
೧೦) ಟೆಲಿಕಮ್ಯುನಿಕೇಶನ್ ಇಂಜನಿಯರಿಂಗ
೧೧) ಮರೀನ್ ಇಂಜನಿಯರಿಂಗ
೧೨) ಆರ್ಕಿಟೆಕ್ಚರಲ್ ಇಂಜನಿಯರಿಂಗ
೧೩) ಮೈನಿಂಗ ಇಂಜನಿಯರಿಂಗ

ಹೀಗೆ ಪದವೀ ಇಂಜನಿಯರಿಂಗ ಕೋರ್ಸುಗಳಲ್ಲಿ ಹದಿಮೂರು ಪ್ರಮುಖ ಕೋರ್ಸುಗಳಿವೆ.

### ಡಿಪ್ಲೊಮಾ ಕೋರ್ಸುಗಳು

೧) ಆಟೋಮೋಬಾಯಿಲ್ ಇಂಜನಿಯರಿಂಗ
೨) ರೆಫ್ರಿಜರೇಟರ ಇಂಜನಿಯರಿಂಗ
೩) ಸೌಂಡ ಇಂಜನಿಯರಿಂಗ
೪) ರೆಡಿಯೋ ಇಂಜನಿಯರಿಂಗ್

೫) ಡಿಪ್ಲೊಮಾ ಇನ್ ಸಿರೇಮಿಕ್ಸ್,
೬) ಡಿಪ್ಲೊಮಾ ಇನ್ ಡ್ರಾಫ್ಟ್ಸ್‌ಮನ್ ಕೋರ್ಸ್,
೭) ಡಿಪ್ಲೊಮಾ ಇನ್ ಬಾಯಲರ್ಸ್ ಮೆಕ್ಯಾನಿಕ್,
೮) ಡಿಪ್ಲೊಮಾ ಇನ್ ಕಮ್ಯುನಿಕೇಶನ್,
೯) ಪ್ರಿಂಟಿಂಗ್ ಟೆಕ್ನಾಲಜಿ,
೧೦) ರೇಡಿಯೋ ಮೆಕ್ಯಾನಿಕ್,
೧೧) ಸರ್ವೇಯರ್ ಕೋರ್ಸ್,
೧೨) ವೈರ್‌ಲೆಸ್ ಆಪರೇಟರ್ ಕೋರ್ಸ್,
೧೩) ಪ್ರೊಡಕ್ಶನ್ ಇಂಜನಿಯರಿಂಗ್ ಕೋರ್ಸ್,
೧೪) ಲೆದರ್ ಟೆಕ್ನಾಲಜಿ,
೧೫) ಡಿಪ್ಲೊಮಾ ಇನ್ ಸಿವ್ಹಿಲ್ ಹಾಗೂ ಮೆಕ್ಯಾನಿಕಲ್ ಇಲೆಕ್ಟ್ರಿಕಲ್ ಇಂಜನಿಯರಿಂಗ್

ಇವೇ ಪ್ರಮುಖ ಡಿಪ್ಲೊಮಾ ಇಂಜನಿಯರಿಂಗ್ ಕೋರ್ಸು-ಗಳಿರುತ್ತವೆ.

ಸರ್ಟಿಫಿಕೇಟ್ ಕೋರ್ಸುಗಳು :— ವೆಲ್ಡರ್, ಫಿಟರ್, ಟರ್ನರ್, ವೈರ್‌ಮನ್, ಮೋಲ್ಡರ್, ಲೇಥಮನ್, ಗ್ರ್ಯಾಂಡರ್, ಫೌಂಡ್ರಿಮನ್, ಟೂಲಮೇಕರ್, ಡ್ರಿಲರ್, ಪ್ಯಾಟರ್ನ ಮೇಕರ್, ಪ್ಲಂಬರ್, ಶೀಟ್ ಮೆಟಲ್ ವರ್ಕರ್, ಕೇಬಲ್ ಜಾಯಿಂಟರ್, ಮಶಿನ್ ಡ್ರೈವರ್, ಆಪರೇಟರ್ ಇಲೆಕ್ಟ್ರಿಶಿಯನ್, ಟ್ರ್ಯಾಕ್ಟರ ಡ್ರೈವರ್, ಮೋಟರ ಡ್ರೈವರ್ ಇವೇ ಪ್ರಮುಖ ತಾಂತ್ರಿಕ ಶಿಕ್ಷಣದ ಸರ್ಟಿಫಿಕೇಟ ಕೋರ್ಸುಗಳಿರುತ್ತವೆ.

ಹೀಗೆ ತಾಂತ್ರಿಕ ಶಿಕ್ಷಣದ ಕೋರ್ಸುಗಳಲ್ಲಿ ಅನೇಕ ಪ್ರಕಾರಗಳಿದ್ದು ಭಿನ್ನ ಭಿನ್ನ ಪ್ರಕಾರದ ಕೋರ್ಸುಗಳಿಗೆ ಭಿನ್ನ ಭಿನ್ನ ಪ್ರಕಾರದ ಕಾರಕಗ್ರಹ ಲಗ್ನ, ಸ್ಥಾನಗಳಿದ್ದು ಪ್ರತ್ಯೇಕವಾಗಿ ಪರಿಶೀಲಿಸುವಾ.

ಸಾಮಾನ್ಯ ನಿಯಮಗಳು :— ತಾಂತ್ರಿಕ ಶಿಕ್ಷಣದ ಯಾವದೆ ಕೋರ್ಸುಗಳಲ್ಲಿ ಶಿಕ್ಷಣ ಪಡೆಯಲು ಈ ನಾಲ್ಕು ಸಂಗತಿಗಳು ಜಾತಕದಲ್ಲಿ ಪೋಷಕವಿರಬೇಕು.

೧) ತಾಂತ್ರಿಕ ಶಿಕ್ಷಣದ ಕೋರ್ಸುಗಳ ಕಾರಕಗ್ರಹವಾದ ಕುಜನು ಜಾತಕದಲ್ಲಿ ಪೋಷಕನಿರಬೇಕು, ಕುಜನ ತರುವಾಯ ಶನಿಯು ಜಾತಕದಲ್ಲಿ ಬಲಾಢ್ಯನಿರಬೇಕು.

೨) ಈ ಕೋರ್ಸಿನ ಶಿಕ್ಷಣ ಪಡೆಯಲು ತೃತೀಯಸ್ಥಾನ ಪೋಷಕ ವಿರಬೇಕು. ತೃತೀಯ ನಂತರ ಷಷ್ಠಸ್ಥಾನ ಪೋಷಕವಿರಬೇಕು.

೩) ಅನೇಕ ಗ್ರಹಗಳು ಪುರುಷರಾಶಿಯಲ್ಲಿರಬೇಕು. (ವೃಶ್ಚಿಕ ಹಾಗೂ ಮಕರ ರಾಶಿಯನ್ನು ಹೊರತುಪಡಿಸಿ). ಹಾಗೂ ತನುಸ್ಥಾನ,ಲಗ್ನೇಶ ಪೋಷಕರಿರಬೇಕು.

೪) ಈ ಕೋರ್ಸಿನಲ್ಲಿ ಶಿಕ್ಷಣ ಪಡೆಯುವವರು ಹೆಚ್ಚಾಗಿ ಮೇಷ, ವೃಷಭ, ಕರ್ಕ, ಸಿಂಹ, ತುಲಾ, ವೃಶ್ಚಿಕ, ಧನು, ಮಕರ ಈ ಲಗ್ನದವರಿರಬೇಕು.

ಹೀಗೆ ಮೇಲ್ಕಂಡ ನಾಲ್ಕು ಸಂಗತಿಗಳು ಪೋಷಕವಿದ್ದ ಜಾತಕನು ಯಾವುದೇ ತಾಂತ್ರಿಕ ಶಿಕ್ಷಣ ಕೋರ್ಸುಗಳಲ್ಲಿ ತಜ್ಞತೆ ಪಡೆಯುತ್ತಾನೆ. ಇನ್ನು ಒಂದೊಂದು ಶಾಖೆಯನ್ನು ಆಯ್ದುಕೊಂಡ ವಿದ್ಯಾರ್ಥಿಯು ಕೆಲವು ವಿಶಿಷ್ಟ ವಿಷಯಗಳನ್ನು ಅಭ್ಯಾಸ ಮಾಡಬೇಕಾಗುವದರಿಂದ ವಿಭಿನ್ನ ಕೋರ್ಸುಗಳ ಕಾರಕಗ್ರಹ, ಲಗ್ನ, ಸ್ಥಾನಾದಿಗಳು ವಿಭಿನ್ನವಿದ್ದು ಅವುಗಳನ್ನು ಈ ಕೆಳಗಿನಂತೆ ಕೊಡಲಾಗಿದೆ.

### ೧. ಸಿವ್ಹಿಲ್ ಇಂಜನಿಯರಿಂಗ್ ಕೋರ್ಸುಗಳು

ಸಿವ್ಹಿಲ್ ಇಂಜನಿಯರಿಂಗ್ ಕೋರ್ಸುಗಳ ವ್ಯಾಸಂಗವನ್ನು ಮಾಡಲು ಈ ಕೆಳಗಿನ ನಾಲ್ಕು ಸಂಗತಿಗಳು ಜಾತಕದಲ್ಲಿ ಪೂರಕವಿರಬೇಕು.

೧) ಈ ಕೋರ್ಸಿನ ಮುಖ್ಯ ವಿಷಯಗಳಾದ ಕಟ್ಟಡ–ಇಮಾರತು ಗಳ ರಚನೆ, ನೀರಾವರಿ ಸ್ವಾಸ್ಥ್ಯ ಪರಿಪಾಲನೆ ಮುಖ್ಯ ವಿಷಯಗಳಲ್ಲದೆ ಸ್ಯಾನಿಟರೀ ಇವೆ ಮೊದಲಾದ ವಿಷಯಗಳಿರುವದರಿಂದ ಬುಧ–ಶನಿ–ಚಂದ್ರ-ಮಂಗಳರೇ ಕಾರಕಗ್ರಹಗಳಾಗಿರುತ್ತಾರೆ. ಸಿವ್ಹಿಲ್ ಇಂಜನಿಯರಿಂಗ್ ಜಾತಕದಲ್ಲಿ ಕುಜನಿಗಿಂತ ಶನಿಯೇ ಹೆಚ್ಚು ಪೋಷಕನೂ, ಕಾರಕನೂ ಇರುತ್ತಾನೆ.

ಏಕೆಂದರೆ ಸ್ಯಾನಿಟರಿ, ಪೂಲು–ಕಾಲುವೆ–ರಸ್ತೆದಾರಿ ಮೊದಲಾದ ವಿಷಯಗಳು ಶನಿಯ ಗುಣಧರ್ಮಗಳಿರುತ್ತವೆ.

೨) ಶನಿಯ ತರುವಾಯ ಬುಧನೂ ಈ ಕೋರ್ಸಿನ ಕಾರಕಗ್ರಹನು. ಏಕೆಂಕರೆ ಪೂಲು, ಕಾಲುವೆ, ಹೊಳೆ–ಹಳ್ಳಗಳ ರಚನೆಯ ಮೊದಲು ಯೋಜನೆ. ನಕ್ಷೆ, ಅಂದಾಜುಪತ್ರಿಕೆಗಳನ್ನು ಸಿದ್ಧಮಾಡಿಕೊಂಡು ನಕಾಶೆಗಳನ್ನು ಸುಂದರವಾಗಿಯೂ, ಅಚ್ಚುಕಟ್ಟುತನದಿಂದಲೂ ತಯಾರಿಸಬೇಕಾಗುತ್ತದೆ. ಈ ಗುಣಧರ್ಮಗಳು ಬುಧ–ಶುಕ್ರರಲ್ಲಿರುವದರಿಂದ ಬುಧ–ಶುಕ್ರರೂ ಕಾರಕಗ್ರಹಗಳಿದ್ದು ಈ ಕೋರ್ಸಿನ ವಿದ್ಯಾರ್ಥಿಗಳ ಜಾತಕದಲ್ಲಿ ಅವರು ಪೋಷಕರಿರಬೇಕು.

೩) ಪದವೀ ಕೋರ್ಸಿನ ಕಾರಕಸ್ಥಾನವಾದ ಪಂಚಮಸ್ಥಾನ ಹಾಗೂ ಪಂಚಮೇಶನ ಬಲದೊಂದಿಗೆ ತೃತೀಯಸ್ಥಾನ, ತೃತೀಯೇಶರೂ ಪೋಷಕರಿರಬೇಕು. ಏಕೆಂದರೆ ಅಂದಾಜು ಪತ್ರಿಕೆ ತಯಾರಿಸುವ ಜ್ಞಾನ ಹಾಗೂ ನಕ್ಷೆಗಳನ್ನು ತಯಾರಿಸುವ ಕಲೆ ಇವು ತೃತೀಯಸ್ಥಾನ, ತೃತೀಯೇಶ ಪೋಷಕರಿರದೆ ಸಾಧಿಸದು. ಆದುದರಿಂದ ಈ ಕೋರ್ಸಿನ ವಿದ್ಯಾರ್ಥಿಗಳ ಜಾತಕದಲ್ಲಿ ಈ ಎರಡೂ ಸ್ಥಾನಗಳೂ, ಸ್ಥಾನಾಧೀಶರೂ ಪೋಷಕರಿರಬೇಕು.

೪) ಈ ಕೋರ್ಸಿನ ಜ್ಞಾನ ಪಡೆಯುವ ವಿದ್ಯಾರ್ಥಿಗಳು ಹೆಚ್ಚಾಗಿ ಮೇಷ, ವೃಷಭ, ಮಿಥುನ, ತುಲಾ, ವೃಶ್ಚಿಕ, ಮಕರ, ಕುಂಭ, ಮೀನ ಈ ಲಗ್ನದವರಿರುವದು ಕಂಡುಬರುತ್ತದೆ.

## ೨. ಮೆಕ್ಯಾನಿಕಲ್ ಇಂಜನಿಯರಿಂಗ ಕೋರ್ಸುಗಳು

ಮೆಕ್ಯಾನಿಕಲ್ ಇಂಜನಿಯರಿಂಗ ಕೋರ್ಸುಗಳ ವ್ಯಾಸಂಗ ಮಾಡುವ ವಿದ್ಯಾರ್ಥಿಗಳ ಜಾತಕದಲ್ಲಿ ಈ ಕೆಳಗಿನ ನಾಲ್ಕು ಸಂಗತಿಗಳು ಪೋಷಕವಿರಬೇಕು.

೧) ಈ ಕೋರ್ಸಿನ ವಿದ್ಯಾರ್ಥಿಗಳ ಜಾತಕದಲ್ಲಿ ಶನಿ–ಮಂಗಳರು ಕಾರಕರೂ, ಪೋಷಕರೂ ಇದ್ದು ಜಾತಕದಲ್ಲಿ ಬಲಾಢ್ಯರಿರುತ್ತಾರೆ. ಅದರಲ್ಲಿಯೂ ಮಂಗಳನಿಗಿಂತ ಶನಿಯು ಹೆಚ್ಚು ಬಲಾಢ್ಯನಿರುತ್ತಾನೆ. ಏಕೆಂದರೆ

ಈ ಕೋರ್ಸುಗಳ ಅಧ್ಯಯನ ಮಾಡಲು ಮುಖ್ಯ ವಿಷಯಗಳಾದ ವರ್ಕಶಾಪ, ಕುಲುಮೆ ವಿಷಯಗಳಲ್ಲದೆ ಎಣ್ಣೆಯಿಂದ, ಉಗಿಯಿಂದ, ವಿದ್ಯುತ್ತಿನಿಂದ ನಡೆಯುವ ಬಗೆಬಗೆಯ ಯಂತ್ರಗಳ ಜ್ಞಾನ ಹಾಗೂ ಮೆಟಲ್, ಮಶಿನ್ಸ್, ಡಿಜೈನ್ ಇವೇ ಮುಖ್ಯ ವಿಷಯಗಳ ಅಭ್ಯಾಸ ಮಾಡಬೇಕಾಗಿರುವದರಿಂದ ಈ ವಿಷಯಗಳ ಕಾರಕಗ್ರಹಗಳಾದ ಶನಿ-ಮಂಗಳರು ಪೋಷಕರಿರದೇ ಯಾವ ವಿದ್ಯಾರ್ಥಿಯೂ ಈ ಕೋರ್ಸನ್ನು ಪೂರ್ತಿಗೊಳಿಸಲಾರ.

೨) ಈ ಕೋರ್ಸಿನ ಅಭ್ಯಾಸ ಮಾಡಲು ಜಾತಕದಲ್ಲಿ ತೃತೀಯ ಸ್ಥಾನ, ಷಷ್ಠಸ್ಥಾನ ಹಾಗೂ ತೃತೀಯೇಶ-ಷಷ್ಠೇಶರು ಪೋಷಕರಿರಬೇಕು. ಈ ಕೋರ್ಸಿನಲ್ಲಿ ಥೇರಿಗಿಂತ ಪ್ರಾತ್ಯಕ್ಷಿಕೆ-ಪ್ರಾಯೋಗಿಕದ ಜ್ಞಾನವೇ ಮುಖ್ಯವಿರುವದರಿಂದ ಪಂಚಮಸ್ಥಾನಕ್ಕಿಂತ ತೃತೀಯ-ಷಷ್ಠ ಸ್ಥಾನಗಳೇ ಹೆಚ್ಚು ಕಾರಕವಿರುವದರಿಂದ ಈ ಸ್ಥಾನಗಳೂ ಹಾಗೂ ಈ ಸ್ಥಾನಾಧೀಶರೂ ಪೋಷಕರಿರುವ ವಿದ್ಯಾರ್ಥಿಗಳು ಹೆಚ್ಚು ಪ್ರವೀಣರಿರುತ್ತಾರೆ.

೩) ಈ ಕೋರ್ಸಿನ ಜ್ಞಾನ ಪಡೆಯುವ ವಿದ್ಯಾರ್ಥಿಗಳು ಹೆಚ್ಚಾಗಿ ಮೇಷ, ವೃಷಭ, ಕರ್ಕ, ಸಿಂಹ, ತುಲಾ, ವೃಶ್ಚಿಕ, ಧನು, ಮಕರ ಈ ಲಗ್ನದವರಿರುವದು ಕಂಡುಬರುತ್ತದೆ.

೪) ಈ ಕೋರ್ಸಿನಲ್ಲಿ ಅಭ್ಯಾಸ ಮಾಡುವ ವಿದ್ಯಾರ್ಥಿಗಳು ಯಂತ್ರಗಳೊಡನೆ ಸೆಣೆಸಾಡಬೇಕಾಗುವದರಿಂದ ಇವರ ದೈಹಿಕ ಸ್ವಾಸ್ಥ್ಯ ಉತ್ತಮವಿರಬೇಕು. ಆದುದರಿಂದ ಲಗ್ನೇಶ ಹಾಗೂ ತನುಸ್ಥಾನ ಪೋಷಕರಿದ್ದ ವಿದ್ಯಾರ್ಥಿಗಳು ಹಾಗೂ ಮೇಷ, ವೃಷಭ, ಸಿಂಹ, ತುಲಾ, ವೃಶ್ಚಿಕ, ಧನು, ಮಕರ, ಕುಂಭ ಈ ರಾಶಿಯವರೂ ಹೆಚ್ಚಾಗಿರುವದು ಕಂಡುಬರುತ್ತದೆ.

## ೩. ಇಲೆಕ್ಟ್ರಿಕಲ್ ಇಂಜನಿಯರಿಂಗ್ ಕೋರ್ಸುಗಳು

ಇಲೆಕ್ಟ್ರಿಕಲ್ ಇಂಜನಿಯರಿಂಗ್ ಕೋರ್ಸುಗಳ ವ್ಯಾಸಂಗವನ್ನು ಮಾಡಲು ಈ ಕೆಳಗಿನ ಸಂಗತಿಗಳು ವಿದ್ಯಾರ್ಥಿಗಳ ಜಾತಕದಲ್ಲಿ ಪೋಷಕವಿರಬೇಕು.

೧) ಈ ಕೋರ್ಸಿನ ಕಾರಕಗ್ರಹವೆಂದರೆ ಮಂಗಳನು. ಏಕೆಂದರೆ ಈ ಕೋರ್ಸಿನಲ್ಲಿ ಅಭ್ಯಾಸ ಮಾಡುವ ವಿದ್ಯಾರ್ಥಿಗಳು ಇಲೆಕ್ಟ್ರಿಕಲ್ ಮಶಿನರಿ, ಇಲೆಕ್ಟ್ರಿಕಲ್ ಟ್ರಾನ್ಸ್ಮಿಶನ್ಸ ಮುಖ್ಯ ವಿಷಯಗಳಲ್ಲದೆ ರೇಡಿಯೊ, ಟೆಲಿ-ವಿಜನ್, ರಾಡಾರ್ ಮೊದಲಾದ ಇಲೆಕ್ಟ್ರಾನಿಕ್ಸ ವಿಷಯಗಳನ್ನೂ ಅಭ್ಯಾಸ ಮಾಡಬೇಕಾಗುತ್ತದೆ. ಆದುದರಿಂದ ಈ ವಿಷಯಗಳಲ್ಲಿ ಜ್ಞಾನ ಪಡೆಯಲು ಜಾತಕದಲ್ಲಿ ಕುಜನು ಬಲಾಢ್ಯನಿರದೆ ಲಭಿಸದು. ಕುಜನ ತರುವಾಯ ರಾಹು ಗ್ರಹವೂ ಈ ಕೋರ್ಸಿನ ಕಾರಕಗ್ರಹವಿರುತ್ತದೆ.

೨) ಈ ಕೋರ್ಸಿನ ಜ್ಞಾನ ಪಡೆಯಲು ಜಾತಕದಲ್ಲಿ ಲಗ್ನ, ಪಂಚಮ, ತೃತೀಯ, ಷಷ್ಠ ಈ ಸ್ಥಾನಗಳೂ ಹಾಗೂ ಈ ಸ್ಥಾನಾಧೀಶರೂ ಜಾತಕದಲ್ಲಿ ಪೋಷಕರಿರಬೇಕು.

೩) ಈ ಕೋರ್ಸಿನ ಜ್ಞಾನ ಪಡೆಯುವ ವಿದ್ಯಾರ್ಥಿಗಳು ಹೆಚ್ಚಾಗಿ ಮೇಷ, ಕರ್ಕ, ಸಿಂಹ, ವೃಶ್ಚಿಕ, ಧನು, ಮಕರ ಈ ಲಗ್ನದವರಿರುವದು ಕಂಡುಬರುತ್ತದೆ.

## ೪. ಅಗ್ರಿಕಲ್ಚರಲ್ ಇಂಜನಿಯರಿಂಗ್ ಕೋರ್ಸುಗಳು

ಕೃಷಿ ಇಂಜನಿಯರಿಂಗ್ ಕೋರ್ಸುಗಳ ವ್ಯಾಸಂಗ ಮಾಡಲು ಈ ಕೆಳಗಿನ ಸಂಗತಿಗಳು ವಿದ್ಯಾರ್ಥಿಗಳ ಜಾತಕದಲ್ಲಿ ಪೋಷಕವಿರಬೇಕು.

೧) ಈ ಕೋರ್ಸಿನ ಕಾರಕಗ್ರಹವೆಂದರೆ ಶನಿ, ಚಂದ್ರ, ಮಂಗಳ, ಅದರಲ್ಲಿಯೂ ಶನಿ-ಚಂದ್ರರು ಹೆಚ್ಚು ಕಾರಕರಿರುತ್ತಾರೆ. ಏಕೆಂದರೆ ಈ ಕೋರ್ಸಿನಲ್ಲಿ ಅಭ್ಯಾಸ ಮಾಡುವ ವಿದ್ಯಾರ್ಥಿಗಳು ತೋಟದ ಯಂತ್ರೋಪಕರಣ, ಕೃಷಿ ಆಧಾರಿತ ಉದ್ದಿಮೆಗಳು, ಮಣ್ಣಿನ ರಕ್ಷಣೆ (Soil Conservation), ಮಣ್ಣಿನ ತಂತ್ರ (Soil Mechanics) ಮೊದಲಾದ ವಿಷಯಗಳ ಜ್ಞಾನವನ್ನು ಪಡೆಯಬೇಕಾಗುತ್ತದೆ. ಮಣ್ಣು ಮತ್ತು ಕೃಷಿಯ ಮೇಲೆ ಚಂದ್ರ-ಶನಿ ಕಾರಕವಿರುವದರಿಂದ ಶನಿ-ಚಂದ್ರರೇ ಈ ಕೋರ್ಸಿನ ಮುಖ್ಯ ಕಾರಕರಿರುತ್ತಾರೆ. ಆದರೆ ಕೃಷಿಯ ಆಧಾರಿತ ಉದ್ದಿಮೆಗಳ (Agro-based industries) ಮೇಲೆ ಶನಿಯೊಂದಿಗೆ ಕುಜನ ಬಲಾಬಲವನ್ನು ಪರೀಕ್ಷಿಸಬೇಕಾಗುತ್ತದೆ.

೨) ಈ ಕೋರ್ಸಿನ ಜ್ಞಾನ ಪಡೆಯಲು ಜಾತಕದಲ್ಲಿ ಲಗ್ನ, ಚತುರ್ಥ, ಷಷ್ಠ ಈ ಸ್ಥಾನಗಳೂ, ಸ್ಥಾನಾಧೀಶರೂ ಪೋಷಕರಿರಬೇಕು. ಈ ಸ್ಥಾನಗಳ ನಂತರ ತೃತೀಯ, ದ್ವಾದಶ ಸ್ಥಾನಗಳನ್ನು ಪರಿಶೀಲಿಸಬೇಕು.

೩) ಈ ಕೋರ್ಸಿನ ಜ್ಞಾನ ಪಡೆಯುವ ವಿದ್ಯಾರ್ಥಿಗಳು ಮೇಷ, ವೃಷಭ, ಕರ್ಕ, ತುಲಾ, ವೃಶ್ಚಿಕ, ಮಕರ, ಮೀನ ಈ ಲಗ್ನದವರೇ ಹೆಚ್ಚಾಗಿರುವದು ಕಂಡುಬರುತ್ತದೆ.

### ೫. ಕೆಮಿಕಲ್ ಇಂಜನಿಯರಿಂಗ ಕೋರ್ಸುಗಳು

ಕೆಮಿಕಲ್ ಇಂಜನಿಯರಿಂಗ ಕೋರ್ಸುಗಳ ವ್ಯಾಸಂಗವನ್ನು ಮಾಡುವ ವಿದ್ಯಾರ್ಥಿಗಳ ಜಾತಕದಲ್ಲಿ ಈ ಕೆಳಗಿನ ಸಂಗತಿಗಳು ಪೋಷಕವಿರುತ್ತವೆ.

೧) ಈ ಕೋರ್ಸಿನ ಕಾರಕಗ್ರಹಗಳೆಂದರೆ ಶನಿ-ಚಂದ್ರರು. ಏಕೆಂದರೆ ಈ ಕೋರ್ಸಿನಲ್ಲಿ ಅಭ್ಯಾಸ ಮಾಡುವ ವಿದ್ಯಾರ್ಥಿಗಳು ಧಾತು ಮತ್ತು ಅಧಾತುಗಳ ತಯಾರಿಕೆ(Extraction of Metals and Non-Metals), ರಾಸಾಯನಿಕ ವಸ್ತುಗಳ ಔದ್ಯಮಿಕ ಉತ್ಪತ್ತಿ ( Chemical process ), ಪೆಟ್ರೋ ಕೆಮಿಕಲ್ಸ (Petro-chemicals) ಇವೇ ಮುಖ್ಯ ವಿಷಯಗಳ ಜ್ಞಾನ ಪಡೆಯಬೇಕಾಗುವದರಿಂದ ರಸಾಯನಶಾಸ್ತ್ರ ಹಾಗೂ ರಾಸಾಯನಿಕ ಕ್ರಿಯೆಗಳ ಮೇಲೆ ಕಾರಕವಿರುವ ಶನಿ-ಚಂದ್ರರು ಪೋಷಕರಿರದೆ ಯಾವ ವಿದ್ಯಾರ್ಥಿಯೂ ಈ ಕೋರ್ಸಿನಲ್ಲಿ ತಜ್ಞತೆ ಪಡೆಯಲಾರನು.

೨) ಈ ಕೋರ್ಸಿನ ಜ್ಞಾನ ಪಡೆಯುವ ವಿದ್ಯಾರ್ಥಿಗಳ ಜಾತಕದಲ್ಲಿ ತೃತೀಯ ಹಾಗೂ ಷಷ್ಠಸ್ಥಾನಗಳು ಹಾಗೂ ಈ ಸ್ಥಾನಾಧೀಶರು ಪೋಷಕರಿರಬೇಕು.

೩) ಈ ಕೋರ್ಸಿನಲ್ಲಿ ಜ್ಞಾನ ಪಡೆಯುವ ವಿದ್ಯಾರ್ಥಿಗಳು ಹೆಚ್ಚಾಗಿ ಮೇಷ, ವೃಷಭ, ಕರ್ಕ, ತುಲಾ, ವೃಶ್ಚಿಕ, ಕುಂಭ, ಮೀನ ಈ ಲಗ್ನದವರಿರುತ್ತಾರೆ.

## ೬. ಮೆಟಲರ್ಜಿಕಲ್ ಇಂಜನಿಯರಿಂಗ ಕೋರ್ಸುಗಳು

ಮೆಟಲರ್ಜಿಕಲ್ ಇಂಜನಿಯರಿಂಗ ಕೋರ್ಸುಗಳ ವ್ಯಾಸಂಗವನ್ನು ಮಾಡಲು ಈ ಕೆಳಗಿನ ಸಂಗತಿಗಳು ವಿದ್ಯಾರ್ಥಿಗಳ ಜಾತಕದಲ್ಲಿ ಪೋಷಕ ವಿರಬೇಕು.

೧) ಈ ಕೋರ್ಸಿನ ಕಾರಕಗ್ರಹಗಳೆಂದರೆ ಶನಿ-ಮಂಗಳರು. ಏಕೆಂದರೆ ಲೋಹಗಳ ಸಂಗ್ರಹ, ತಯಾರಿಕೆ ( Extraction of Metals), ಉಕ್ಕಿನ ಕುಲುಮೆಗಳು (Steel plants), ಫೌಂಡ್ರಿಯ ಶಿಕ್ಷಣ ( Foundry and its production on a largescale) ಇವೇ ಮೊದಲಾದ ವಿಷಯಗಳಲ್ಲಿ ಜ್ಞಾನ ಪಡೆಯಬೇಕಾಗುತ್ತದೆ. ಆದ್ದರಿಂದ ಶನಿ-ಮಂಗಳರೇ ಈ ಕೋರ್ಸಿನ ಕಾರಕಗ್ರಹಗಳು. ಅದರಲ್ಲಿಯೂ ಶನಿಯು ಪೋಷಕನಿರದೆ ಯಾವ ವಿದ್ಯಾರ್ಥಿಯೂ ಈ ಕೋರ್ಸನ್ನು ಪೂರ್ತಿಗೊಳಿಸಲಾರನು.

೨) ಈ ಕೋರ್ಸಿನಲ್ಲಿ ಜ್ಞಾನ ಪಡೆಯಲು ಮುಖ್ಯವಾಗಿ ಷಷ್ಠಸ್ಥಾನ, ಷಷ್ಠೇಶ ಪೋಷಕರಿರಲೇಬೇಕು. ಷಷ್ಠದ ನಂತರ ತೃತೀಯ ಸ್ಥಾನವನ್ನು ಪರಿಶೀಲಿಸಬೇಕು.

೩) ಈ ಕೋರ್ಸಿನ ವಿದ್ಯಾರ್ಥಿಗಳು ಮೇಷ, ವೃಷಭ, ಕರ್ಕ, ಸಿಂಹ, ತುಲಾ, ವೃಶ್ಚಿಕ, ಧನು, ಮಕರ ಈ ಲಗ್ನದವರೇ ಹೆಚ್ಚಾಗಿರುವದು ಕಂಡುಬರುತ್ತದೆ.

## ೭. ಟೆಕ್ಸ್‌ಟೈಲ್ ಇಂಜನಿಯರಿಂಗ ಕೋರ್ಸುಗಳು

ಟೆಕ್ಸಟೈಲ್ ಇಂಜನಿಯರಿಂಗ ಕೋರ್ಸುಗಳ ವ್ಯಾಸಂಗವನ್ನು ಮಾಡುವ ವಿದ್ಯಾರ್ಥಿಗಳ ಜಾತಕದಲ್ಲಿ ಈ ಕೆಳಗಿನ ಸಂಗತಿಗಳು ಪೋಷಕವಿರುತ್ತವೆ.

೧) ಈ ಕೋರ್ಸಿನ ಕಾರಕಗ್ರಹಗಳೆಂದರೆ ಶುಕ್ರ-ಚಂದ್ರರು. ಏಕೆಂದರೆ ಈ ಕೋರ್ಸಿನಲ್ಲಿ ಅಭ್ಯಾಸಮಾಡುವ ವಿದ್ಯಾರ್ಥಿಗಳು ಟೆಕ್ಸಟೈಲ್ ಮಶಿನರಿ (Textile Machinery), ನೇಯುವ ವಿಧಾನ ಕ್ರಮ (Weaving Methods), ನಕ್ಷೆಗಳ ವೈವಿಧ್ಯತೆ (Designs), ನಿಯಂತ್ರಣ ಕ್ರಮ (Quality Control) ಇವೇ ಮುಖ್ಯ ವಿಷಯಗಳ ಜ್ಞಾನ ಪಡೆಯಬೇಕಾಗುವದರಿಂದ

ಈ ವಿಷಯಗಳ ಕಾರಕಗ್ರಹಗಳಾದ ಶುಕ್ರ-ಚಂದ್ರರು ಬಲಾಢ್ಯರಿರದೆ ಯಾವ ವಿದ್ಯಾರ್ಥಿಯೂ ಈ ಕೋರ್ಸನ್ನು ಮುಗಿಸಲಾರನು.

೨) ಈ ಕೋರ್ಸಿನ ಜ್ಞಾನ ಪಡೆಯಲು ಜಾತಕದಲ್ಲಿ ತೃತೀಯ, ಷಷ್ಠ, ಚತುರ್ಥ ಈ ಸ್ಥಾನಗಳು ಹಾಗೂ ಈ ಸ್ಥಾನಾಧೀಶರು ಜಾತಕದಲ್ಲಿ ಪೋಷಕರಿರಬೇಕು. ಅದರಲ್ಲಿಯೂ ತೃತೀಯಸ್ಥಾನ ಹಾಗೂ ತೃತಿಯೇಶ ಹೆಚ್ಚು ಪೋಷಕರಿರಬೇಕು.

೩) ಈ ಕೋರ್ಸಿನ ವಿದ್ಯಾರ್ಥಿಗಳು ಹೆಚ್ಚಾಗಿ ಮೇಷ, ವೃಷಭ, ಮಿಥುನ, ಕರ್ಕ, ತುಲಾ, ವೃಶ್ಚಿಕ, ಮಕರ, ಕುಂಭ, ಮೀನ ಈ ಲಗ್ನದವರೇ ಹೆಚ್ಚಾಗಿರುವದು ಕಂಡುಬರುತ್ತದೆ. ಈ ಕೋರ್ಸಿನಲ್ಲಿ ಜ್ಞಾನ, ಪಡೆಯುವವರು ವೃಷಭ, ಮಿಥುನ, ಕರ್ಕ, ಕನ್ಯಾ, ತುಲಾ, ಕುಂಭ, ಮೀನ ಈ ರಾಶಿಯವರಿರುವದು ಕಂಡುಬರುತ್ತದೆ.

## ೮. ಏರೋನಾಟಿಕಲ್ ಇಂಜನಿಯರಿಂಗ ಕೋರ್ಸುಗಳು

ಏರೋನಾಟಿಕಲ್ ಇಂಜನಿಯರಿಂಗ ಕೋರ್ಸುಗಳ ವ್ಯಾಸಂಗವನ್ನು ಮಾಡುವ ವಿದ್ಯಾರ್ಥಿಗಳ ಜಾತಕದಲ್ಲಿ ಈ ಕೆಳಗಿನ ಸಂಗತಿಗಳು ಪೋಷಕವಿರುತ್ತವೆ.

೧) ಈ ಕೋರ್ಸಿನ ಕಾರಕಗ್ರಹವೆಂದರೆ ಕುಜನು. ಕುಜನು ಪೋಷಕನಿರದೆ ಯಾವ ವಿದ್ಯಾರ್ಥಿಯೂ ಈ ಕೋರ್ಸನ್ನು ಪೂರ್ಣಗೊಳಿಸಲಾರನು. ಏಕೆಂದರೆ ಈ ಕೋರ್ಸಿನಲ್ಲಿ ಅಭ್ಯಾಸಮಾಡುವ ವಿದ್ಯಾರ್ಥಿಗಳು ವಿಮಾನ ಯಾನ, ವಾಯುಯಾನ (Air Transport) ಹಾಗೂ ವಿಮಾನ ನಿಯಂತ್ರಣ (Ground Control) ಮೊದಲಾದ ವಿಷಯಗಳಲ್ಲಿ ತಜ್ಞತೆ ಪಡೆಯಬೇಕಾಗುತ್ತದೆ. ಈ ವಿಷಯಗಳಲ್ಲಿ ತಜ್ಞತೆ ಪಡೆಯಲು ಜಾತಕದಲ್ಲಿ ಕುಜನು ಪೋಷಕನಿರಬೇಕು.

೨) ಈ ಕೋರ್ಸಿನಲ್ಲಿ ಜ್ಞಾನ ಪಡೆಯಲು ಜಾತಕದಲ್ಲಿ ನವಮ, ತೃತೀಯ, ಷಷ್ಠ ಈ ಸ್ಥಾನಗಳು ಹಾಗೂ ಈ ಸ್ಥಾನಾಧೀಶರು ಪೋಷಕರಿರಬೇಕು.

೩) ಈ ಕೋರ್ಸಿನಲ್ಲಿ ತಜ್ಞತೆ ಪಡೆಯುವ ವಿದ್ಯಾರ್ಥಿಗಳು ಹೆಚ್ಚಾಗಿ ಮೇಷ, ಕರ್ಕ, ಸಿಂಹ, ತುಲಾ, ವೃಶ್ಚಿಕ, ಧನು, ಮಕರ ಈ ಲಗ್ನದವರೇ ಇರುತ್ತಾರೆ.

೪) ಈ ಕೋರ್ಸಿನ ಶಿಕ್ಷಣ ಪಡೆಯುವವರು ಹೆಚ್ಚಾಗಿ ಮೇಷ, ಮಿಥುನ, ಸಿಂಹ, ತುಲಾ, ವೃಶ್ಚಿಕ, ಧನು, ಮಕರ, ಕುಂಭ ಈ ರಾಶಿಯವರೇ ಇರುವದು ಕಂಡುಬರುತ್ತದೆ.

### ೯. ಆರ್ಕಿಟೆಕ್ಚರಲ್ ಇಂಜನಿಯರಿಂಗ ಕೋರ್ಸುಗಳು

ಆರ್ಕಿಟೆಕ್ಚರಲ್ ಇಂಜನಿಯರಿಂಗ ಕೋರ್ಸುಗಳ ವ್ಯಾಸಂಗವನ್ನು ಮಾಡುವ ವಿದ್ಯಾರ್ಥಿಗಳ ಜಾತಕದಲ್ಲಿ ಈ ಕೆಳಗಿನ ಸಂಗತಿಗಳು ಪೋಷಕವಿರುತ್ತವೆ.

೧) ಈ ಕೋರ್ಸಿನ ಕಾರಕಗ್ರಹಗಳೆಂದರೆ ಶುಕ್ರ, ಚಂದ್ರ, ಬುಧ ಗ್ರಹಗಳು. ಏಕೆಂದರೆ ಈ ಕೋರ್ಸಿನಲ್ಲಿ ಅಭ್ಯಾಸಮಾಡುವ ಮುಖ್ಯ ವಿಷಯಗಳೆಂದರೆ ಕಟ್ಟಡಗಳ ನಕ್ಷೆ ತಯಾರಿಸುವಿಕೆ ( Design of Houses and Orientation) ಸ್ಥಳ ಗೊತ್ತುಪಡಿಸುವಿಕೆ, ಅಂದಾಜ ಪತ್ರಿಕೆ ತಯಾರಿಸುವಿಕೆ, ನಗರಗಳ ರೂಪರೇಷೆಗಳನ್ನು ಅಭ್ಯಾಸ ಮಾಡುವಿಕೆ ( Town planning ) ಇವೇ ಮುಖ್ಯ ವಿಷಯಗಳಿರುವವರಿಂದ ಶುಕ್ರ, ಚಂದ್ರ, ಬುಧರೇ ಕಾರಕರಿರುತ್ತಾರೆ.

೨) ತೃತೀಯ ಹಾಗೂ ಷಷ್ಠ ಸ್ಥಾನಗಳು ಹಾಗೂ ಈ ಸ್ಥಾನಾಧೀಶರು ಪೋಷಕರಿದ್ದ ವಿದ್ಯಾರ್ಥಿಗಳು ಅದರಲ್ಲಿಯೂ ತೃತೀಯಸ್ಥಾನ, ತೃತೀಯೇಶರು ಜಾತಕದಲ್ಲಿ ಪೋಷಕರಿದ್ದ ವಿದ್ಯಾರ್ಥಿಗಳು ಈ ಕೋರ್ಸಿನಲ್ಲಿ ತಜ್ಞತೆ ಪಡೆಯುವರು.

೩) ಈ ಕೋರ್ಸಿನಲ್ಲಿ ತಜ್ಞತೆ ಪಡೆಯುವ ವಿದ್ಯಾರ್ಥಿಗಳು ಹೆಚ್ಚಾಗಿ ಮೇಷ, ವೃಷಭ, ಮಿಥುನ, ಕರ್ಕ, ಕನ್ಯಾ, ತುಲಾ, ಮಕರ, ಕುಂಭ ಈ ಲಗ್ನದವರೇ ಹೆಚ್ಚಾಗಿರುವದು ಕಂಡುಬರುತ್ತದೆ.

೪) ಈ ಕೋರ್ಸಿನಲ್ಲಿ ಶಿಕ್ಷಣ ಪಡೆಯುವವರು ಹೆಚ್ಚಾಗಿ ವೃಷಭ,

ಮಿಥುನ, ಕರ್ಕ, ಕನ್ಯಾ, ತುಲಾ, ಕುಂಭ, ಮೀನ ಈ ರಾಶಿಯವರೇ ಇದ್ದದ್ದು ಕಂಡುಬರುತ್ತದೆ.

## ೧೦. ಟೆಲಿಕಮ್ಯುನಿಕೇಶನ್ ಇಂಜನಿಯರಿಂಗ ಕೋರ್ಸುಗಳು

ಟೆಲಿಕಮ್ಯುನಿಕೇಶನ್ ಇಂಜನಿಯರಿಂಗ ಕೋರ್ಸುಗಳ ವ್ಯಾಸಂಗವನ್ನು ಮಾಡುವ ವಿದ್ಯಾರ್ಥಿಗಳ ಜಾತಕದಲ್ಲಿ ಈ ಕೆಳಗಿನ ಸಂಗತಿಗಳು ಪೋಷಕ ವಿರುತ್ತವೆ.

೧) ಈ ಕೋರ್ಸಿನ ಕಾರಕಗ್ರಹಗಳೆಂದರೆ ಬುಧ, ಚಂದ್ರ, ಕುಜರು. ಅದರಲ್ಲಿಯೂ ಬುಧ–ಚಂದ್ರರು ಪೋಷಕರಿರದೆ ಯಾವ ವಿದ್ಯಾರ್ಥಿಗೂ ಈ ಕೋರ್ಸಿನಲ್ಲಿ ತಜ್ಞತೆ ದೊರೆಯಲಾರದು. ಏಕೆಂದರೆ ಈ ಕೋರ್ಸಿನಲ್ಲಿ ಅಭ್ಯಾಸಮಾಡುವ ಮುಖ್ಯ ವಿಷಯಗಳೆಂದರೆ ರೇಡಿಯೋ, ಟೆಲಿವಿಜನ್, ರೆಡಾರ್, ಗಣಕಯಂತ್ರ ಇವೇ ಮುಖ್ಯ ವಿಷಯಗಳನ್ನು ಕಲಿಯಬೇಕಾಗು ತ್ತದೆ. ಈ ವಿಷಯಗಳ ಮೇಲೆ ಬುಧ–ಚಂದ್ರರ ಆಧಿಪತ್ಯವಿದೆ.

೨) ತೃತೀಯಸ್ಥಾನ ಹಾಗೂ ತೃತೀಯೇಶ ಪೋಷಕವಿರುವ ವಿದ್ಯಾರ್ಥಿಗಳು ಈ ಕೋರ್ಸಿನಲ್ಲಿ ತಜ್ಞತೆ ಪಡೆಯುವರು:

೩) ಈ ಕೋರ್ಸಿನಲ್ಲಿ ಜ್ಞಾನಪಡೆಯುವ ವಿದ್ಯಾರ್ಥಿಗಳು ಹೆಚ್ಚಾಗಿ ಮೇಷ, ವೃಷಭ, ಮಿಥುನ, ಕರ್ಕ, ಕನ್ಯಾ, ವೃಶ್ಚಿಕ, ಧನು, ಮಕರ, ಮೀನ, ಕುಂಭ ಈ ಲಗ್ನದವರೇ ಹೆಚ್ಚಾಗಿರುವದು ಕಂಡುಬರುತ್ತದೆ.

೪) ಈ ಕೋರ್ಸಿನಲ್ಲಿ ಶಿಕ್ಷಣ ಪಡೆಯುವವರು ವೃಷಭ, ಮಿಥುನ, ಕರ್ಕ, ಕನ್ಯಾ, ತುಲಾ, ಕುಂಭ, ಮೀನ ಈ ರಾಶಿಯವರಿರುವದು ಕಂಡು ಬರುತ್ತದೆ.

## ೧೧. ಮರೀನ್ ಇಂಜನಿಯರಿಂಗ ಕೋರ್ಸುಗಳು

ಮರೀನ್ ಇಂಜನಿಯರಿಂಗ ಕೋರ್ಸುಗಳ ವ್ಯಾಸಂಗವನ್ನು ಮಾಡುವ ವಿದ್ಯಾರ್ಥಿಗಳ ಜಾತಕದಲ್ಲಿ ಕೆಳಗಿನ ಸಂಗತಿಗಳು ಪೋಷಕವಿರುತ್ತವೆ.

೧) ಈ ಕೋರ್ಸಿನ ಕಾರಕಗ್ರಹವೆಂದರೆ ಚಂದ್ರನು. ಏಕೆಂದರೆ ಈ ಕೋರ್ಸಿನ ಅಭ್ಯಾಸ ಮಾಡುವ ಮುಖ್ಯ ವಿಷಯಗಳಾದ ನೌಕಾಯಾನ ಕ್ರಮ, ನೌಕಾ ರಚನೆಯ ವಿಧಾನ ಇವು ಮುಖ್ಯ ವಿಷಯಗಳಿರುತ್ತವೆ. ನೌಕೆ ಹಾಗೂ ನೌಕಾಯಾನ (ಜಲಪ್ರವಾಸ) ಇವುಗಳ ಮೇಲೆ ಚಂದ್ರನ ಆಧಿಪತ್ಯವಿರುತ್ತದೆ.

೨) ತೃತೀಯ, ಭಾಗ್ಯ ಸ್ಥಾನಗಳು ಹಾಗೂ ಈ ಸ್ಥಾನಾಧೀಶರು ಜಾತಕದಲ್ಲಿ ಪೋಷಕರದಲ್ಲಿರಬೇಕು.

೩) ಈ ಕೋರ್ಸಿನಲ್ಲಿ ಜ್ಞಾನ ಪಡೆಯುವ ವಿದ್ಯಾರ್ಥಿಗಳು ಹೆಚ್ಚಾಗಿ ಮೇಷ, ಕರ್ಕ, ತುಲಾ, ವೃಶ್ಚಿಕ, ಮಕರ, ಮೀನ ಈ ಲಗ್ನದವರೇ ಇರುವದು ಕಂಡುಬರುವದು.

## ೧೨. ಸೌಂಡ್ ಇಂಜನಿಯರಿಂಗ್ ಕೋರ್ಸುಗಳು

ಸೌಂಡ್ ಇಂಜನಿಯರಿಂಗ್ ಕೋರ್ಸುಗಳ ವ್ಯಾಸಂಗವನ್ನು ಮಾಡುವ ವಿದ್ಯಾರ್ಥಿಗಳ ಜಾತಕದಲ್ಲಿ ಕೆಳಗಿನ ಸಂಗತಿಗಳು ಪೋಷಕವಿರುತ್ತವೆ.

೧) ಈ ಕೋರ್ಸಿನ ಕಾರಕಗ್ರಹವೆಂದರೆ ಕುಜನು. ಏಕೆಂದರೆ ಈ ಕೋರ್ಸಿನಲ್ಲಿ ತಜ್ಞತೆ ಪಡೆಯಲು ಭೌತಶಾಸ್ತ್ರ, ಧ್ವನಿಮುದ್ರಣ, ಧ್ವನಿ ವರ್ಧನೆಗಳು ಇವೇ ಮುಖ್ಯ ವಿಷಯಗಳನ್ನು ಅಭ್ಯಸಿಸಬೇಕಾಗುತ್ತದೆ. ಆದುದರಿಂದ ಜಾತಕದಲ್ಲಿ ಕುಜನು ಪೋಷಕನಿರದೆ ಯಾವ ವಿದ್ಯಾರ್ಥಿಯೂ ಈ ಕೋರ್ಸಿನಲ್ಲಿ ತಜ್ಞತೆ ಪಡೆಯಲಾರನು.

೨) ಈ ಕೋರ್ಸಿನಲ್ಲಿ ತಜ್ಞತೆ ಪಡೆಯಲು ತೃತೀಯಸ್ಥಾನ, ಷಷ್ಠ ಸ್ಥಾನ ಹಾಗೂ ಸ್ಥಾನಾಧೀಶರು ಜಾತಕದಲ್ಲಿ ಪೋಷಕರಿರಬೇಕು.

೩) ಈ ಕೋರ್ಸಿನಲ್ಲಿ ಜ್ಞಾನ ಪಡೆಯುವ ವಿದ್ಯಾರ್ಥಿಗಳು ಹೆಚ್ಚಾಗಿ ಮೇಷ, ಕರ್ಕ, ಸಿಂಹ, ವೃಶ್ಚಿಕ, ಧನು, ಮಕರ ಈ ಲಗ್ನದವರೇ ಇರುವದು ಕಂಡುಬರುತ್ತದೆ.

## ೧೩. ಆಟೋಮೋಬಾಯಿಲ್ ಇಂಜನಿಯರಿಂಗ್ ಕೋರ್ಸುಗಳು

ಆಟೋಮೋಬಾಯಿಲ್ ಇಂಜನಿಯರಿಂಗ್ ಕೋರ್ಸುಗಳ ವ್ಯಾಸಂಗ

ವನ್ನು ಮಾಡುವ ವಿದ್ಯಾರ್ಥಿಗಳ ಜಾತಕದಲ್ಲಿ ಈ ಕೆಳಗಿನ ಸಂಗತಿಗಳು ಪೋಷಕವಿರುತ್ತವೆ.

೧) ಈ ಕೋರ್ಸಿನ ಕಾರಕಗ್ರಹಗಳೆಂದರೆ ಶನಿ, ಮಂಗಳ, ರಾಹು ಗ್ರಹಗಳು. ಅದರಲ್ಲಿಯೂ ಶನಿಯು ಜಾತಕದಲ್ಲಿ ಪೋಷಕನಿರದೆ ಯಾವ ವಿದ್ಯಾರ್ಥಿಯೂ ಈ ಕೋರ್ಸಿನಲ್ಲಿ ಯಶಸ್ಸು ಪಡೆಯಲಾರನು. ಏಕೆಂದರೆ ಈ ಕೋರ್ಸಿನಲ್ಲಿ ಅಭ್ಯಾಸ ಮಾಡುವ ವಿದ್ಯಾರ್ಥಿಗಳು ವಾಹನಗಳ ರಚನೆ, ಇಂಜನ್ನಿನ ಕಾರ್ಯ ಮೊದಲಾದವುಗಳನ್ನು ಅಭ್ಯಾಸ ಮಾಡಬೇಕಾಗುತ್ತದೆ.

೨) ಈ ಕೋರ್ಸಿನಲ್ಲಿ ಜ್ಞಾನ ಪಡೆಯಲು ತೃತೀಯ ಷಷ್ಠ ಈ ಸ್ಥಾನಗಳು ಹಾಗೂ ಈ ಸ್ಥಾನಾಧೀಶರು ಪೋಷಕರಿರಬೇಕು.

೩) ಈ ಕೋರ್ಸಿನಲ್ಲಿ ತಜ್ಞತೆ ಪಡೆಯುವ ವಿದ್ಯಾರ್ಥಿಗಳು ಹೆಚ್ಚಾಗಿ ಮೇಷ, ವೃಷಭ, ಕರ್ಕ, ಸಿಂಹ, ತುಲಾ, ವೃಶ್ಚಿಕ, ಧನು, ಮಕರ ಈ ಲಗ್ನದವರಿರುವುದು ಕಂಡುಬರುತ್ತದೆ.

೪) ಶಾರೀರಿಕವಾಗಿ ಸದೃಢರಿರದೆ ಯಾರೂ ಈ ಕೋರ್ಸಿನ ವ್ಯಾಸಂಗ ಮಾಡಲಾರರು. ಆದುದರಿಂದ ಇಂಥ ವಿದ್ಯಾರ್ಥಿಗಳ ಜಾತಕದಲ್ಲಿ ಲಗ್ನ, ಲಗ್ನೇಶ ಬಲಾಢ್ಯರಿರುತ್ತಾರೆ.

### ೦೪. ರೇಡಿಯೋ ಇಂಜನಿಯರಿಂಗ್ ಕೋರ್ಸುಗಳು

ರೇಡಿಯೋ ಇಂಜನಿಯರಿಂಗ್ ಕೋರ್ಸುಗಳ ವ್ಯಾಸಂಗವನ್ನು ಮಾಡುವ ವಿದ್ಯಾರ್ಥಿಗಳ ಜಾತಕದಲ್ಲಿ ಈ ಕೆಳಗಿನ ಸಂಗತಿಗಳು ಪೋಷಕವಿರುತ್ತವೆ.

೧) ಈ ಕೋರ್ಸಿನ ಕಾರಕಗ್ರಹಗಳೆಂದರೆ ಶುಕ್ರ-ಚಂದ್ರರು. ಈ ಗ್ರಹಗಳು ಪೋಷಕರಿರದೆ ಯಾವ ವಿದ್ಯಾರ್ಥಿಯೂ ರೇಡಿಯೋ ಇಂಜನಿಯರಿಂಗ್ ಕೋರ್ಸಿನಲ್ಲಿ ತಜ್ಞತೆ ಪಡೆಯಲಾರನು.

೨) ಈ ಕೋರ್ಸಿನಲ್ಲಿ ತಜ್ಞತೆ ಪಡೆಯಲು ಜಾತಕದ ತೃತೀಯ, ಷಷ್ಠ, ನವಮ ಈ ಸ್ಥಾನಗಳೂ ಹಾಗೂ ಈ ಸ್ಥಾನಾಧೀಶರೂ ಪೋಷಕರಿರಬೇಕು.

೩) ಈ ಕೋರ್ಸಿನಲ್ಲಿ ಜ್ಞಾನ ಪಡೆಯುವ ವಿದ್ಯಾರ್ಥಿಗಳು ಹೆಚ್ಚಾಗಿ ಮೇಷ, ವೃಷಭ, ಮಿಥುನ, ಕರ್ಕ, ತುಲಾ, ಮಕರ, ಕುಂಭ, ಮೀನ ಈ ಲಗ್ನದವರಿರುವದು ಕಂಡುಬರುತ್ತದೆ.

೪) ಈ ಕೋರ್ಸಿನ ವಿದ್ಯಾರ್ಥಿಗಳು ವೃಷಭ, ಮಿಥುನ, ಕರ್ಕ, ಕನ್ಯಾ, ತುಲಾ, ಕುಂಭ, ಮೀನ ಈ ರಾಶಿಯುವರಿರುವದು ಕಂಡುಬರುತ್ತದೆ.

### ೧೫. ಡಿಪ್ಲೊಮಾ ಇನ್ ಡ್ರಾಫ್ಟ್ಸಮನ್ ಕೋರ್ಸುಗಳು

೧) ಸೇತುವೆ, ಕಾಲುವೆ, ಹೊಳೆ-ಹಳ್ಳಗಳ ಯೋಜನೆಯನ್ನು ತಯಾರಿಸುವದಾಗಲಿ, ಯಂತ್ರ, ಮಶಿನರಿಗಳ ನಕ್ಷೆ (Designs) ಅಥವಾ ಕಟ್ಟಡ-ಇಮಾರತುಗಳ ನಕಾಶವನ್ನು ಸುಂದರವಾಗಿಯೂ, ಅಚ್ಚು ಕಟ್ಟು ತನದಿಂದಲೂ ತಯಾರಿಸುವ ಕಲೆಯಾಗಲಿ ಕಲಿಯಬೇಕಾಗುವದಲ್ಲದೆ ಅಂದಾಜು ಪತ್ರಿಕೆಯನ್ನು ತಯಾರಿಸುವದೂ ಸಹ ಈ ಕೋರ್ಸಿನ ಮುಖ್ಯ ವಿಷಯುಗಳಾಗಿರುವದರಿಂದ ಬುಧ, ಶುಕ್ರ, ಚಂದ್ರರೇ ಈ ಕೋರ್ಸಿನ ಕಾರಕಗ್ರಹಗಳು.

೨) ಈ ಕೋರ್ಸಿನಲ್ಲಿ ತಜ್ಞತೆ ಪಡೆಯಲು ಜಾತಕದಲ್ಲಿ ತೃತೀಯ ಸ್ಥಾನ, ತೃತೀಯೇಶ ಬಲಾಢ್ಯರಿರದೆ ಯಾವ ವಿದ್ಯಾರ್ಥಿಗೂ ಈ ವಿದ್ಯೆ ಹತ್ತಲಾರದು.

೩) ಈ ಕೋರ್ಸಿನಲ್ಲಿ ಜ್ಞಾನ ಪಡೆಯುವ ವಿದ್ಯಾರ್ಥಿಗಳು ಹೆಚ್ಚಾಗಿ ವೃಷಭ, ಮಿಥುನ, ಕರ್ಕ, ಕನ್ಯಾ, ತುಲಾ, ಮಕರ, ಕುಂಭ, ಮೀನ ಈ ಲಗ್ನದವರಿರುವದು ಕಂಡುಬರುತ್ತದೆ.

೪) ಈ ಕೋರ್ಸಿನ ವಿದ್ಯಾರ್ಥಿಗಳು ಹೆಚ್ಚಾಗಿ ವೃಷಭ, ಮಿಥುನ, ಕರ್ಕ, ಕನ್ಯಾ, ತುಲಾ, ಕುಂಭ, ಮೀನ ಈ ರಾಶಿಯವರಿರುವದು ಕಂಡುಬರುತ್ತದೆ.

### ೧೬. ಡಿಪ್ಲೊಮಾ ಇನ್ ಬಾಯಲರ್ ಮೆಕ್ಯಾನಿಕ್ಸ್ ಹಾಗೂ ರೆಫ್ರಿಜರೇಟರ್ಸ್ ಕೋರ್ಸುಗಳು

ಇದೊಂದು ಅಲ್ಪಾವಧಿಯ ಡಿಪ್ಲೋಮಾ ಕೋರ್ಸು ಇದ್ದು ಎಸ್. ಎಸ್. ಎಲ್. ಸಿ. ಆದ ಬಳಿಕ ಎರಡು-ಮೂರು ವರ್ಷಗಳ ಕೋರ್ಸು

ಇರುತ್ತದೆ. ಈ ಕೋರ್ಸಿನಲ್ಲಿ ಜ್ಞಾನ ಪಡೆಯಲು ಈ ಕೆಳಗಿನ ಸಂಗತಿಗಳು ಜಾತಕದಲ್ಲಿ ಪೋಷಕವಿರಬೇಕು.

೧) ಈ ಕೋರ್ಸುಗಳ ಕಾರಕಗ್ರಹವೆಂದರೆ ಶನಿ-ಮಂಗಳರು. ಆದುದರಿಂದ ಇವರು ಜಾತಕದಲ್ಲಿ ಬಲಾಢ್ಯರಿರಬೇಕು.

೨) ತೃತೀಯ, ಷಷ್ಠ ಈ ಸ್ಥಾನಗಳೂ ಹಾಗೂ ಈ ಸ್ಥಾನಾಧೀಶರೂ ಜಾತಕದಲ್ಲಿ ಪೋಷಕರಿರದೆ ಯಾವ ವಿದ್ಯಾರ್ಥಿಯೂ ತಜ್ಞತೆ ಪಡೆಯಲಾರನು.

೩) ಈ ಕೋರ್ಸಿನ ವಿದ್ಯಾರ್ಥಿಗಳು ಹೆಚ್ಚಾಗಿ ಮೇಷ, ವೃಷಭ, ಕರ್ಕ, ಸಿಂಹ, ತುಲಾ, ವೃಶ್ಚಿಕ, ಧನು, ಮಕರ, ಕುಂಭ ಈ ಲಗ್ನದವರಿರುತ್ತಾರೆ.

೪) ಈ ವಿದ್ಯಾರ್ಥಿಗಳ ಜಾತಕದಲ್ಲಿ ಲಗ್ನೇಶ ಹಾಗೂ ತನುಸ್ಥಾನ ಪೋಷಕವಿರಬೇಕು. ಏಕೆಂದರೆ ಈ ಕೋರ್ಸಿನಲ್ಲಿ ಪ್ರಾತ್ಯಕ್ಷಿಕೆಯೇ ಹೆಚ್ಚಿರುವದರಿಂದ ವಿದ್ಯಾರ್ಥಿಗಳು ಸದೃಢರಿರಬೇಕು.

## ೧೭. ಡಿಪ್ಲೋಮಾ ಇನ್ ಸಿರೇಮಿಕ್ಸ

ಇದೊಂದು ಎಸ್. ಎಸ್. ಎಲ್. ಸಿ. ಆದ ಬಳಿಕ ಮೂರು ವರ್ಷಗಳ ಅವಧಿಯ ಕೋರ್ಸಿದ್ದು ಭೌತಶಾಸ್ತ್ರ, ರಸಾಯನಶಾಸ್ತ್ರ, ಗಣಿತಶಾಸ್ತ್ರ ವಿಷಯಗಳನ್ನು ಐಚ್ಛಿಕ ವಿಷಯವನ್ನಾಗಿ ತೆಗೆದುಕೊಂಡಂಥ ವಿದ್ಯಾರ್ಥಿಗಳಿಗೆ ಪ್ರವೇಶ ದೊರೆಯುತ್ತದೆ. ಈ ಕೋರ್ಸಿನಲ್ಲಿ ಕಾಚು ಹಾಗೂ ಮಣ್ಣಿನ ವಸ್ತು-ಪಾತ್ರೆಗಳನ್ನು ತಯಾರಿಸುವ ವಿಧಾನ-ಕ್ರಮಗಳನ್ನು ಕಲಿಸಲಾಗುತ್ತದೆ. ಈ ಕೋರ್ಸಿನಲ್ಲಿ ತಜ್ಞತೆ ಪಡೆಯಲು ಜಾತಕದಲ್ಲಿ ಈ ಕೆಳಗಿನ ಸಂಗತಿಗಳು ಪೋಷಕವಿರಬೇಕು.

೧) ಶುಕ್ರ-ಚಂದ್ರರು ಪೋಷಕರಿರದೆ ಯಾವ ವಿದ್ಯಾರ್ಥಿಗೂ ಈ ಕಲೆ ಸಾಧಿಸದು.

೨) ತೃತೀಯಸ್ಥಾನ ಮತ್ತು ತೃತೀಯೇಶರು ಪೋಷಕರಿರಬೇಕು.

೩) ಈ ಕೋರ್ಸಿನಲ್ಲಿ ಜ್ಞಾನ ಪಡೆಯುವವರು ಹೆಚ್ಚಾಗಿ ಮೇಷ,

ವೃಷಭ, ಕರ್ಕ, ತುಲಾ, ವೃಶ್ಚಿಕ, ಮಕರ, ಕುಂಭ, ಮೀನ ಈ ಲಗ್ನದವ ರಿಯುತ್ತಾರೆ.

೧೪. ವಿವಿಧ ಬಿ. ಎಸ್‌ಸಿ. ಟೆಕ್ನಾಲಜಿ ಕೋರ್ಸುಗಳು

ಬಿ. ಎಸ್‌ಸಿ. ರಸಾಯನಶಾಸ್ತ್ರ ವಿಷಯವನ್ನು ಮುಖ್ಯ ವಿಷಯವನ್ನಾಗಿ ತೆಗೆದುಕೊಂಡು ವಿವಿಧ ವಸ್ತುಗಳ ಟೆಕ್ನಾಲಜಿ ಪದವಿಯನ್ನು ಪಡೆಯಲು ಜಾತಕದಲ್ಲಿ ಈ ಕೆಳಗಿನ ಸಂಗತಿಗಳು ಪೋಷಕವಿರುತ್ತವೆ.

೧) ಬಿ. ಎಸ್‌ಸಿ. ಟೆಕ್ನಾಲಜಿ ಶಿಕ್ಷಣ ಪಡೆಯಲು ಜಾತಕದಲ್ಲಿ ಯಾವ ಗ್ರಹ ಇಲ್ಲವೆ ಗ್ರಹಗಳು ಪೋಷಕವಾಗಬಲ್ಲವು ಎಂದು ಪ್ರಶ್ನಿಸಿದರೆ ಇದಕ್ಕೆ ಉತ್ತರ ಕೊಡುವುದು ಕ್ಲಿಷ್ಟದಾಯಕವಾದದ್ದು. ಏಕೆಂದರೆ ಟೆಕ್ನಾಲಜಿಯಲ್ಲಿ ಅನೇಕ ಪ್ರಕಾರಗಳಿದ್ದು ಅನೇಕ ಗ್ರಹಗಳು ಕಾರಕವಿರುತ್ತವೆ. ಉದಾಹರಣೆಗೆ ಪ್ಲಾಸ್ಟಿಕ್, ಪೇಂಟ್ಸ್, ವಾರ್ನಿಸ, ರಬ್ಬರ, ಸಿಂಥೆಟಿಕ್-ಫೈಬರ-ಟೆಕ್ಸಟೈಲ್ ಟೆಕ್ನಾಲಜಿಗಳಿಗೆ ಶುಕ್ರ-ಶನಿ-ಚಂದ್ರರೂ, ಪೇಪರ ಟೆಕ್ನಾಲಜಿಗೆ ಬುಧ-ಚಂದ್ರ-ಶನಿಯರೂ, ಶುಗರ್ ಟೆಕ್ನಾಲಜಿಗೆ ಗುರು-ಶನಿ-ಚಂದ್ರರೂ, ಫುಡ್-ಲೆದರ-ಟೆಕ್ನಾಲಜಿಗಳಿಗೆ ಶನಿ-ಚಂದ್ರರೂ ಕಾರಕರಿರುತ್ತಾರೆ. ಆದರೆ ಒಂದು ಸಂಗತಿ ನಿಜ. ಶನಿ-ಚಂದ್ರರು ಪೋಷಕರಿರದೆ ಯಾವ ವಿದ್ಯಾರ್ಥಿಯೂ ಯಾವುದೇ ಟೆಕ್ನಾಲಜಿಯಲ್ಲಿ ಯಶಸ್ಸು ಪಡೆಯಲಾರನು.

೨) ಎರಡನೆಯದಾಗಿ ಟೆಕ್ನಾಲಜಿಯಲ್ಲಿ ಅಭ್ಯಾಸವನ್ನು ಮಾಡುವ ವಿದ್ಯಾರ್ಥಿಗಳ ಜಾತಕದಲ್ಲಿ ತೃತೀಯ ಹಾಗೂ ಷಷ್ಠ ಈ ಸ್ಥಾನಗಳೂ ಈ ಸ್ಥಾನಾಧೀಶರೂ ಪೋಷಕರಿರುತ್ತಾರೆ.

೩) ಮೂರನೆಯದಾಗಿ ಈ ಕೋರ್ಸಿನ ವಿದ್ಯಾರ್ಥಿಗಳು ಹೆಚ್ಚಾಗಿ ಮೇಷ, ವೃಷಭ, ಮಿಥುನ, ಕರ್ಕ, ತುಲಾ, ವೃಶ್ಚಿಕ, ಮಕರ, ಕುಂಭ, ಮೀನ ಈ ರಾಶಿಯವರೇ ಹೆಚ್ಚಾಗಿರುವದು ಕಂಡುಬರುತ್ತದೆ.

೧೯. ಮುದ್ರಣ ಕಲಾಶಾಸ್ತ್ರದ ಡಿಪ್ಲೊಮಾ

(Deploma In Printing Technology)

ಜ್ಞಾನಪ್ರಸಾರದಲ್ಲಿ ಮುದ್ರಣದ ಪಾತ್ರ ಎಷ್ಟು ಮಹತ್ವವಾದುದು

ಎಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಮುದ್ರಣ ಕ್ಷೇತ್ರದಲ್ಲಿ ಆಗಿರುವ, ಆಗುತ್ತಿರುವ ಪ್ರಗತಿ ಯಾರನ್ನಾದರೂ ಬೆರಗುಗೊಳಿಸುವಂತಿದೆ. ಮುದ್ರಣ ಕಲೆ ಇಂದು ಪ್ರತ್ಯೇಕ ಶಾಸ್ತ್ರವಾಗಿ ಅಭ್ಯಸಿಸುವಷ್ಟು ಪ್ರಗತಿಯನ್ನು ಸಾಧಿಸಿದೆ. ಮುದ್ರಣಕ್ಷೇತ್ರದಲ್ಲಿರುವವರಿಗೆ ಮುದ್ರಣದ ಬಗೆಗೆ ವೈಜ್ಞಾನಿಕ ತರಬೇತಿ-ಶಿಕ್ಷಣ ಪಡೆಯಲೆಂದು ಮುದ್ರಣ ಕಲಾಶಾಸ್ತ್ರದ ಡಿಪ್ಲೊಮಾ ಅನೇಕ ಕಡೆ ಗಳಲ್ಲಿ ಪ್ರಾರಂಭವಾಗಿದೆ. ಮಾಧ್ಯಮಿಕ ಶಾಲೆಗಳಲ್ಲಿ ಮುದ್ರಣವನ್ನು ಐಚ್ಛಿಕ ವಿಷಯವನ್ನಾಗಿ ತೆಗೆದುಕೊಳ್ಳುವ ಸವಲತ್ತನ್ನು ಕೆಲ ಮಾಧ್ಯಮಿಕ ಶಿಕ್ಷಣ ಬೋರ್ಡುಗಳು ಮಾಡಿವೆ. ತಾಂತ್ರಿಕ ಶಿಕ್ಷಣ ಸಂಸ್ಥೆಗಳಲ್ಲಿ ಡಿಪ್ಲೋಮಾ ತರಬೇತಿ ನೀಡಲಾಗುತ್ತದೆ. ಕೇಂದ್ರ ಸರಕಾರವು ಅನೇಕ ಪ್ರದೇಶಗಳಲ್ಲಿ ಪ್ರಾದೇಶಿಕ ಮುದ್ರಣ ಶಾಲೆಗಳನ್ನು ನಡೆಸುತ್ತಿದ್ದಾರೆ. ಭಾರತೀಯ ವಿದ್ಯಾ ಭವನದವರೂ ಈ ಕೋರ್ಸುಗಳನ್ನು ನಡೆಯಿಸುತ್ತಿದೆ. ಪ್ರಾದೇಶಿಕ ಮುದ್ರಣಶಾಲೆಯಲ್ಲಿ ಮೂರು ವರ್ಷದ ಡಿಪ್ಲೊಮಾ ಕೋರ್ಸಿದ್ದರೆ ಮತ್ತೆ ಕೆಲವು ಸಂಸ್ಥೆಗಳಲ್ಲಿ ಎರಡು ವರ್ಷಗಳ ತರಬೇತಿಯಿರುತ್ತದೆ.

ಈ ಕೋರ್ಸಿನಲ್ಲಿ ಮುದ್ರಣಕಲಾಶಾಸ್ತ್ರ, ಶಿಲಾಮುದ್ರಣಕಲಾಶಾಸ್ತ್ರ ಹೀಗೆ ಎರಡು ಶಾಖೆಗಳ ಪ್ರತ್ಯೇಕ ಡಿಪ್ಲೊಮಾ ಇದ್ದು, ಈ ಕೋರ್ಸುಗಳಲ್ಲಿ ಮುದ್ರಣಕಲಾಶಾಸ್ತ್ರದ ಈ ಕೋರ್ಸಿನ ವ್ಯಾಸಂಗದಲ್ಲಿ ರಸಾಯನಶಾಸ್ತ್ರ, ಮಾನವಶಾಸ್ತ್ರ, ಮೊಳೆಗಳ ಜೋಡಣೆ, ಛಾಯಾಗ್ರಹಣ, ಮುದ್ರಣ ಯಂತ್ರ ಗಳ ಅಭ್ಯಾಸ, ಶಿಲಾಮುದ್ರಣಶಾಸ್ತ್ರ, ಪುಸ್ತಕ ಬೈಂಡಿಂಗ, ಮುದ್ರಣವಿಜ್ಞಾನ, ಪ್ರೂಫ್ ಓದುವ ರೀತಿ, ಲಿನೋ, ಮೋನೋ, ಬ್ಲಾಕ್ ತಯಾರಿಕೆ, ಆಡಳಿತ, ವ್ಯವಸ್ಥೆ, ವ್ಯಾಪಾರ, ಲೆಕ್ಕ ತಯಾರಿಕೆ, ಪತ್ರವ್ಯವಹಾರ ಹಾಗೂ ಮುದ್ರಣ ಸಂಬಂಧದ ಎಲ್ಲ ವಿಷಯಗಳ ಅಭ್ಯಾಸ ಹಾಗೂ ಪ್ರಾಯೋಗಿಕ ತರಬೇತಿ ಕೊಡಲಾಗುತ್ತದೆ.

ಶಿಲಾಮುದ್ರಣಶಾಸ್ತ್ರದ ವ್ಯಾಸಂಗದಲ್ಲಿ ರಸಾಯನಶಾಸ್ತ್ರ, ಮಾನವ ಶಾಸ್ತ್ರ, ಛಾಯಾಗ್ರಹಣ, ಚಿತ್ರಕಲೆ, ಶಿಲಾಪ್ಲೇಟಿನ ತಯಾರಿಕೆ, ಶಿಲಾಮುದ್ರಣ ಯಂತ್ರ, ಕಾರ್ಯಾಭ್ಯಾಸ ಮೊದಲಾದ ಶಿಲಾಮುದ್ರಣಕ್ಕೆ ಸಂಬಂಧಿಸಿದ ವಿಷಯಗಳ ಹಾಗೂ ಪ್ರಾಯೋಗಿಕ ತರಬೇತಿ ಕೊಡಲಾಗುತ್ತದೆ. ಇನ್ನು

ಫಲಜ್ಯೋತಿಷ್ಯಶಾಸ್ತ್ರದ ಮೇರೆಗೆ ಈ ಕೋರ್ಸಿನ ತರಬೇತಿ ಪಡೆಯಲು ಜಾತಕವಂತಿರಬೇಕು, ಕಾರಕಗ್ರಹ, ಲಗ್ನ, ಸ್ಥಾನಾದಿಗಳಾವವು ಎಂಬುದನ್ನು ಪರಿಶೀಲಿಸುವಾ.

**ಕಾರಕಗ್ರಹ**:— ಈ ಕೋರ್ಸಿನ ಕಾರಕಗ್ರಹಗಳೆಂದರೆ ಶನಿ-ಬುಧರು. ಏಕೆಂದರೆ ಮೊಳೆಗಳನ್ನು ಜೋಡಿಸುವದು (Composing), ಮುದ್ರಿಸುವದು, ಫ್ರೂಫ್ ತಿದ್ದುವದು ಮೊದಲಾದ ವಿಷಯಗಳಿಗೆ ಬುಧನು ಕಾರಕನಿದ್ದರೆ ಶಿಲಾಮುದ್ರಣ ಮೊದಲಾದ ಯಂತ್ರಗಳ ಮೊಳೆಗಳ ಕಟ್ಟಿಗೆ ಪೆಟ್ಟಿಗೆ (Case box), ಪುಸ್ತಕ ಬೈಂಡಿಂಗ, ಲಿಸೋ, ನೋನೋ, ಬ್ಲಾಕ್ ತಯಾರಿಕೆ, ರಸಾಯನ ವಿಷಯದ ಸಂಬಂಧ ಇವೇ ಪ್ರಮುಖ ವಿಷಯಗಳಿಗೆ ಶನಿಯು ಕಾರಕನಿರುವನು. ಆದುದರಿಂದ ಬುಧ-ಶನಿಯರು ಪೋಷಕರಿರದ ಯಾವ ವಿದ್ಯಾರ್ಥಿಯೂ ಈ ಕೋರ್ಸಿನಲ್ಲಿ ತಜ್ಞತೆ ಪಡೆಯಲಾರನು.

**ಸ್ಥಾನ**:— ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ಈ ಕೋರ್ಸಿನಲ್ಲಿ ಥೇರಿಗಿಂತ ಕರ್ಮಶಾಲೆಯಲ್ಲಿಯ ಪ್ರಾಯೋಗಿಕ ಪ್ರಾತ್ಯಕ್ಷಿಕ ವಿಧಾನಗಳಿಂದ ಕಲಿಯುವದೇ ಮುಖ್ಯವಿರುವದರಿಂದ ಪ್ರಾತ್ಯಕ್ಷಿಕೆಯ ಸ್ಥಾನವಾದ ತೃತೀಯ ಸ್ಥಾನ ಕಾರಕವಿರುತ್ತದೆ. ತೃತೀಯದ ನಂತರ ಷಷ್ಠಸ್ಥಾನವನ್ನು ಪರಿಶೀಲಿಸಬೇಕು. ಯಾಕೆಂದರೆ ಈ ಕೋರ್ಸು ವೃತ್ತಿಶಿಕ್ಷಣಕ್ಕೆ ಒಳಪಟ್ಟಿರುತ್ತದೆ. ಆದುದರಿಂದ ಈ ಸ್ಥಾನಗಳೂ ಹಾಗೂ ಸ್ಥಾನಾಧೀಶರೂ ಜಾತಕದಲ್ಲಿ ಪೋಷಕರಿರಬೇಕು.

**ಲಗ್ನ**:— ಲಗ್ನದ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ವೃಷಭ, ಕರ್ಕ, ಕನ್ಯಾ, ತುಲಾ, ವೃಶ್ಚಿಕ, ಧನು, ಮಕರ, ಕುಂಭ ಈ ಲಗ್ನದವರೇ ಈ ಕೋರ್ಸಿನಲ್ಲಿ ಪಳಗಿದವರಿರುವದು ಕಂಡುಬರುತ್ತದೆ.

**ರಾಶಿ**:— ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ವೃಷಭ, ಮಿಥುನ, ಕರ್ಕ, ಕನ್ಯಾ, ತುಲಾ, ಕುಂಭ, ಮೀನ ಈ ರಾಶಿಯ ವಿದ್ಯಾರ್ಥಿಗಳು ಈ ಕೋರ್ಸಿನಲ್ಲಿ ತಜ್ಞತೆ ಪಡೆದಿರುತ್ತಾರೆ.

## ೨೦. ಕುಶಲ ಕೈಗಾರಿಕೆಯ ಕೋರ್ಸುಗಳು

ಭಾರತವು ಉದ್ದಿಮೆರಂಗದಲ್ಲಿ ಭರದಿಂದ ಪ್ರಗತಿಪಡೆಯುತ್ತಿರುವ ಇಂದಿನ ಕಾಲದಲ್ಲಿ ಬಗೆಬಗೆಯ ಕಾರಖಾನೆಗಳು ತಲೆಯೆತ್ತುತ್ತಿರುವದು ಸ್ವಾಭಾವಿಕ. ಇಂಥ ಕಾರಖಾನೆಗಳ ಭಾರೀ ಯಂತ್ರೋಪಕರಣಗಳ ಜೊತೆಗೆ ಅವುಗಳ ಚಿಕ್ಕಪುಟ್ಟ ಬಿಡಿ ಭಾಗಗಳನ್ನು ತಯಾರಿಸಬೇಕಾಗುತ್ತದೆ. ಇದ-ರಂತೆಯೇ ಅವುಗಳನ್ನು ಜೋಡಿಸಬೇಕಾಗುತ್ತದೆ. ಈ ಕಾರ್ಯಗಳಿಗಾಗಿ ಪ್ರತ್ಯೇಕ ಸಿಬ್ಬಂಧಿಗಳು ಬೇಕು. ಸೂಕ್ಷ್ಮ ಯಂತ್ರೋಪಕರಣಗಳ ಬಿಡಿ ಭಾಗಗಳನ್ನು ತಯಾರಿಸುವದು ಹಾಗೂ ತಯಾರಿಸಿದ ಬಿಡಿ ಭಾಗಗಳು ಮೂಲ ಭಾಗಕ್ಕಿಂತ ಒಂದು ನೂಲಿನಷ್ಟಾದರೂ ಹೆಚ್ಚುಕಡಿಮೆಯಾಗದ ಸೂಕ್ಷ್ಮ ಉಪಕರಣಗಳನ್ನು ರಚಿಸಿ ಅವುಗಳನ್ನು ಜೋಡಿಸುವಿಕೆ ಇವೇ ಈ ಕೋರ್ಸಿನ ಪ್ರಮುಖ ಶಿಕ್ಷಣವಿರುತ್ತದೆ. ಇದಲ್ಲದೆ ಯಂತ್ರಗಳು, ಮಶಿನರಿಗಳು ನಾದುರಸ್ತಾದರೆ, ಅವುಗಳನ್ನು ದುರಸ್ತು ಮಾಡುವಿಕೆ ಇವೇ ಪ್ರಮುಖ ಕೆಲಸವಿರುವ ಈ ಕೋರ್ಸಿನಲ್ಲಿ ವೆಲ್ಡರ್, ಫಿಟರ್, ಟರ್ನರ್, ವೈರಮನ್, ಮೌಲ್ಡರ್, ಲೇಥಮನ್, ಗ್ರ್ಯಾಂಡರ್, ಫೌಂಡ್ರಿಮನ್, ಟೂಲ್‌ಮೇಕರ್, ಡ್ರಿಲರ್, ಪ್ಯಾಟರ್ನ, ಮೇಕರ್ಸ, ಪ್ಲಂಬರ್, ಶೀಟ-ಮೆಟಲ್ ವರ್ಕರ್, ಕೇಬಲ್ ಜಾಯಿಂಟರ್, ಮಶಿನ್ ಡ್ರೈವರ್, ಆಪರೇಟರ್, ಇಲೆಕ್ಟ್ರಿಶಿಯನ್, ಡ್ರೈವರ್, ಸರ್ವೇಯರ್ ಇವೇ ಪ್ರಮುಖ ಕೋರ್ಸುಗಳನ್ನು ಇಲ್ಲಿ ಕಲಿಸಲಾಗುತ್ತದೆ. ಈ ಕೋರ್ಸಿನ ವಿಷಯವಾಗಿ ಜ್ಯೋತಿಷ್ಯದ ಭಾಷ್ಯವೇನೆಂಬುದನ್ನು ನೋಡುವಾ.

**ಕಾರಕಗ್ರಹ:—** ಈ ಕೋರ್ಸಿನ ಕಾರಕಗ್ರಹಗಳೆಂದರೆ ಶನಿ-ಮಂಗಳರು. ಅದರಲ್ಲಿಯೂ ಮಂಗಳನಿಗಿಂತ ಶನಿಯು ಹೆಚ್ಚು ಪೋಷಕನಿರುತ್ತಾನೆ. ಈ ಕೋರ್ಸಿನ ವಿದ್ಯಾರ್ಥಿಗಳಲ್ಲಿ ಕಂಡುಬರುವ ಮಹತ್ವದ ಅಂಶವೆಂದರೆ ಶನಿ-ಮಂಗಳರು ಕೇವಲ ರಾಶಿಬಲದವರಿದ್ದು ಸ್ಥಾನಬಲದವರೂ, ಯೋಗಕಾರಕರೂ ಇರುವದಿಲ್ಲ.

**ಸ್ಥಾನ:—** ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ಈ ಕೋರ್ಸಿನಲ್ಲಿ ಕರ್ಮಶಾಲೆಯಲ್ಲಿ ಪ್ರಾತ್ಯಕ್ಷಿಕೆಯ ವಿಧಾನದಿಂದಲೇ ಜ್ಞಾನವನ್ನು ಪಡೆಯ

ಬೇಕಾಗುತ್ತದೆ. (ಪುಸ್ತಕೀಯ ಜ್ಞಾನದ ಸ್ಥಾನವಾದ ಪಂಚಮಸ್ಥಾನ ಇಲ್ಲಿ ದುರ್ಬಲವಿರುತ್ತದೆ). ಆದುದರಿಂದ ತೃತೀಯಸ್ಥಾನವೇ ಈ ಕೋರ್ಸಿನ ಕಾರಕಸ್ಥಾನವು. ತೃತೀಯದ ನಂತರ ತನುಸ್ಥಾನವನ್ನೂ ಪರಿಶೀಲಿಸಬೇಕು. ಏಕೆಂದರೆ ಉಕ್ಕು, ಕಬ್ಬಿಣ ಹಾಗೂ ಯಂತ್ರಗಳ ಉಪಕರಣಗಳೊಡನೆ ಪ್ರತಿನಿತ್ಯ ಸೆಣಸಾಟವಿರುವದರಿಂದ ಇಂಥ ವಿದ್ಯಾರ್ಥಿಗಳು ಸದೃಢವಿರ ಬೇಕಾಗುತ್ತದೆ. ವಿದ್ಯಾರ್ಥಿಗಳು ಸದೃಢವಿರಲು ಜಾತಕದಲ್ಲಿ ತನುಸ್ಥಾನ, ಲಗ್ನೇಶ ಪೋಷಕರಿರಬೇಕು. ತೃತೀಯ, ತನುಸ್ಥಾನಗಳ ನಂತರ ವೃತ್ತಿ ಸ್ಥಾನವಾದ ಷಷ್ಠಸ್ಥಾನವನ್ನು ಪರಿಶೀಲಿಸಬೇಕು. ಹೀಗೆ ಈ ಮೂರು ಸ್ಥಾನಗಳೂ, ಸ್ಥಾನಾಧಿಪರರೂ ಬಲಾಢ್ಯರಿರದೆ ಯಾವ ವಿದ್ಯಾರ್ಥಿಯೂ ಈ ಕೋರ್ಸಿನಲ್ಲಿ ಪಳಗಿದವನಿರಲಾರನು.

**ಲಗ್ನ :—** ಲಗ್ನದ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ವೃಷಭ, ಕರ್ಕ, ಸಿಂಹ, ತುಲಾ, ಧನು, ಮಕರ ಈ ಲಗ್ನದವರೇ ಹೆಚ್ಚಾಗಿರುವದು ಕಂಡುಬರುತ್ತದೆ.

**ರಾಶಿ :—** ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ಮಿಥುನ, ಸಿಂಹ, ತುಲಾ, ವೃಶ್ಚಿಕ, ಧನು, ಮಕರ, ಕುಂಭ ಈ ರಾಶಿಯವರು ಈ ಕೋರ್ಸಿನಲ್ಲಿ ತಜ್ಞರಿರುವದು ಕಂಡುಬರುತ್ತದೆ.

**ಯೋಗ :—** ಈ ಕೋರ್ಸಿನ ವಿದ್ಯಾರ್ಥಿಗಳ ಜಾತಕದಲ್ಲಿ ಅನೇಕ ಗ್ರಹಗಳು ಪುರುಷರಾಶಿಯಲ್ಲಿರುತ್ತವೆ. ಹಾಗೂ ಶನಿ-ಮಂಗಳ-ರಾಹುಗಳು ಇತರ ಗ್ರಹಗಳಿಗಿಂತ ಹೆಚ್ಚು ಬಲಾಢ್ಯರಿರುತ್ತಾರೆ.

## ೬. ವೈದ್ಯಕೀಯ ಶಿಕ್ಷಣದ ಕೋರ್ಸುಗಳು

ಶಿಕ್ಷಣರಂಗದಲ್ಲಿ ವೈದ್ಯಕೀಯ ಶಿಕ್ಷಣ ಇದೀಗ ಶಿಖರಪ್ರಾಯವಾಗಿದೆ. ಜನಸಾಮಾನ್ಯರಲ್ಲಿ ವೈದ್ಯಕೀಯ ಶಿಕ್ಷಣಕ್ಕಿರುವ ಬೇಡಿಕೆ ಇಂದು ಬೇರಾವ ಶಿಕ್ಷಣಕ್ಕೂ ಇಲ್ಲದಂತೆ ಭಾಸವಾಗುತ್ತದೆ. ಇದಕ್ಕೆ ಮುಖ್ಯ ಕಾರಣ (ಜನಸಾಮಾನ್ಯರ ದೃಷ್ಟಿಯಿಂದ) ವೈದ್ಯನಾದವನು ಹೇರಳವಾಗಿ ಗಳಿಸ ಬಹುದು ಎಂಬುದೇ. ಆದರೂ ಈ ಶಿಕ್ಷಣ ಪಡೆದವನು ಮಾನವ ಸೇವೆಗೆ

ಮಹತ್ವದ ಕಾಣಿಕೆ ಕೊಡಬಹುದೆಂಬುದನ್ನು ಅನೇಕರು ಮರೆತರೂ ಈ ಕ್ಷೇತ್ರದಲ್ಲಿ ನಡೆದಿರುವ ಸಂಶೋಧನೆ, ಪ್ರಗತಿ ಈ ಶಿಕ್ಷಣಕ್ಕೆ ವಿಶೇಷ ಆಕರ್ಷಣೆಯನ್ನೊದಗಿಸಿದೆ. 'ಜೀವದಾತ' ಎಂದು ವೈದ್ಯನನ್ನು ಗೌರವಿಸುವುದೂ ಉಂಟು. ಸಾವು-ನೋವುಗಳ ತಾಕಲಾಟದಲ್ಲಿದ್ದವನಿಗೆ ವೈದ್ಯನ ಸಹಕಾರದ ಮಹತ್ವ ತಿಳಿಯದಿರುವದಿಲ್ಲ. ಈ ಎಲ್ಲ ದೃಷ್ಟಿಗಳಿಂದ ವೈದ್ಯಕೀಯ ಶಿಕ್ಷಣ ಬಹಳ ಮಹತ್ವಪೂರ್ಣವಾದದ್ದಿದ್ದು ಇದಕ್ಕೆ ಹೆಚ್ಚಿನ ಬೇಡಿಕೆಯಿದ್ದರೆ ಅದು ಆಶ್ಚರ್ಯಪಡಬೇಕಾದ ವಿಷಯವಲ್ಲ.

ವೈದ್ಯಕೀಯ ಕ್ಷೇತ್ರದಲ್ಲಿ ಮುಖ್ಯವಾಗಿ ಐದು ಶಾಖೆಗಳಿವೆ. ೧) ಅಲೋಪಥಿ, ೨) ಆಯುರ್ವೇದ, ೩) ಹೋಮಿಯೋಪಥಿ, ೪) ಯುನಾನಿ, ೫) ನ್ಯಾಚರೋಪಥಿ. ಈ ಐದು ಶಾಖೆಗಳಲ್ಲಿಯ ಮೊದಲನೆಯದಾದ ಅಲೋಪಥಿ ಶಿಕ್ಷಣಕ್ಕೆ ಸಂಬಂಧಿಸಿದ ವಿವಿಧ ಕೋರ್ಸ್‌ಗಳ ಬಗೆಗೆ ಮೊದಲು ವಿವೇಚಿಸೋಣ.

## ಅಲೋಪತಿ ಶಿಕ್ಷಣ

ಅಲೋಪಥಿ ಶಿಕ್ಷಣವಲ್ಲಿ ಪದವೀಧರ ಶಿಕ್ಷಣ, ಸ್ನಾತಕೋತ್ತರ ಶಿಕ್ಷಣ, ಸರ್ಟಿಫಿಕೇಟ್ ಹಾಗೂ ಡಿಪ್ಲೊಮಾ ಶಿಕ್ಷಣಗಳೆಂದು ಮೂರು ಮುಖ್ಯ ವಿಭಾಗಗಳನ್ನು ಮಾಡಬಹುದು. ವೈದ್ಯಕೀಯ ಪದವೀ ಶಿಕ್ಷಣ ಪಡೆಯಬೇಕಾದರೆ ಮೂಲತಃ ಎಸ್. ಎಸ್. ಎಲ್. ಸಿ. ಯಲ್ಲಿ ವೈಜ್ಞಾನಿಕ ವಿಷಯವನ್ನು ತೆಗೆದುಕೊಂಡು ತೇರ್ಗಡೆಯಾಗಬೇಕು. ಈ ವಿದ್ಯಾರ್ಥಿಗಳು ಪಿ. ಯು. ಸಿ. ಸೇರಿದಾಗ ಮುಖ್ಯವಾಗಿ ಪಿ.ಸಿ.ಬಿ. ಗುಂಪಿನ ಭೌತಶಾಸ್ತ್ರ, ರಸಾಯನಶಾಸ್ತ್ರ, ಜೀವಶಾಸ್ತ್ರ ಅಥವಾ ಸಿ. ಬಿ. ಝಡ್. ಗುಂಪಿನ ರಸಾಯನಶಾಸ್ತ್ರ, ಪ್ರಾಣಿಶಾಸ್ತ್ರ, ಸಸ್ಯಶಾಸ್ತ್ರ ಈ ವಿಷಯಗಳ ಸಂಯೋಜನೆ ಹೊಂದಿ, ಪರೀಕ್ಷೆಯಲ್ಲಿ ಉತ್ತೀರ್ಣನಾಗಬೇಕು. ನಂತರ ವೈದ್ಯಕೀಯ ಶಿಕ್ಷಣಕ್ಕೆ ಪ್ರಾಥಮಿಕ ಪ್ರವೇಶ ಪಡೆಯಲು ಅರ್ಹನಾಗುತ್ತಾನೆ. ವೈದ್ಯಕೀಯ ಕಾಲೇಜುಗಳಲ್ಲಿ ಪ್ರವೇಶಕ್ಕಾಗಿ ಕ್ಯಾಪಿಟೇಶನ್ ಫೀ ಮುಂತಾಗಿ ಹೇರಳವಾಗಿ ಹಣವನ್ನು ಸುರಿಯಬೇಕಾಗಿರುವಂಥ ಪರಿಸ್ಥಿತಿ ಇಂದು ಕಂಡು ಬರುತ್ತಿರುವದು ನಿಜವಾದರೂ ಅದು ಬದಲಾಗುವ ಕಾಲವೂ ದೂರವಿಲ್ಲ.

ಜ್ಯೋತಿಷ್ಯಶಾಸ್ತ್ರದ ಪ್ರಕಾರ ವೈದ್ಯಕೀಯ ಪದವಿಗಳಿಗಿದ್ದ ಬೇಡಿಕೆಯ ರಭಸವು ೧೯೮೨ರ ನಂತರ ತಗ್ಗಿ ಮತ್ತೆ ಗುಣಕ್ಕೆ ಪ್ರಾಧಾನ್ಯತೆ ದೊರೆತು ಈ ಕ್ಷೇತ್ರದ ಮಟ್ಟ ಸುಧಾರಿಸುವದಿದೆ.

ಈಗಾಗಲೇ ಹೇಳಿದಂತೆ ವೈದ್ಯಕೀಯ ಶಿಕ್ಷಣಕ್ಕೆ ಮಿತಿಮೀರಿದ ಬೇಡಿಕೆಯಿರುವದರಿಂದಲೂ ಕೆಲವು ಶ್ರೀಮಂತ ವಿದ್ಯಾರ್ಥಿಗಳು ಹೇರಳವಾಗಿ ಕ್ಯಾಪಿಟೇಶನ್ ಫೀ ಕೊಟ್ಟು ಪ್ರವೇಶ ದೊರಕಿಸಿಕೊಳ್ಳುವ ಅಕ್ರಮ ವಿಧಾನವನ್ನು ಅನುಸರಿಸುತ್ತಿರುವದರಿಂದಲೂ ಸರಕಾರವು ಈ ಪ್ರವೇಶವನ್ನು ನಿಯಂತ್ರಿಸಲು ಕೆಲವು ನಿರ್ದಿಷ್ಟ ನಿಯಮಗಳನ್ನು ರೂಪಿಸಿದೆ. ಈ ನಿಯಮಗಳ ಮೇರೆಗೆ ಮುಖ್ಯತಃ ಪ್ರವೇಶದ ಆಯ್ಕೆಯಲ್ಲಿ ವಿದ್ಯಾರ್ಥಿಯು ಪಿ.ಯು.ಸಿ. ಪರೀಕ್ಷೆಯಲ್ಲಿ ಪ್ರವೇಶ ಪಡೆದ ಗುಣಾಂಕ, ಯೋಗ್ಯತೆ (Merit) ಗಳ ಆಧಾರದ ಮೇಲಿಂದ ಆಯ್ಕೆ ಮಾಡಲಾಗುತ್ತದೆ. ಇದರಿಂದಾಗಿ ಯಾವ ವಿದ್ಯಾರ್ಥಿ ಸಾಮಾನ್ಯವಾಗಿ ಶೇಕಡಾ ೮೦-೯೦ರಷ್ಟು ಗುಣಗಳನ್ನು ಪಡೆದಿರುತ್ತಾನೋ ಅವನು ಪ್ರವೇಶ ಪಡೆಯುತ್ತಾನೆ. ಆದರೆ ಈ ಪ್ರವೇಶವು ತಾತ್ಪೂರ್ತಿಕವಾದದ್ದಿರುತ್ತದೆ. ಏಕೆಂದರೆ, ಬಿ. ಎಸ್‌ಸಿ. ೧ರ ವರೆಗೂ ಸಾಮಾನ್ಯವಾಗಿಡಲಾಗುತ್ತದೆ. (ಹಿಂದಿನ ಪಿ. ಪಿ. ಸಿ. ಯ ಕೋರ್ಸು) ಬಿ. ಎಸ್‌ಸಿ. ೧ ರ ಪರೀಕ್ಷೆಯಲ್ಲಿ ಪ್ರವೇಶ ಪಡೆದ ವಿದ್ಯಾರ್ಥಿಯು ಆ ಪರೀಕ್ಷೆಯಲ್ಲಿ ಶೇಕಡಾ ೫೦ ರಷ್ಟು ಗುಣಾಂಶವನ್ನು ಪಡೆದು ಉತ್ತೀರ್ಣನಾದ ನಂತರ ಎಮ್. ಬಿ. ಬಿ. ಎಸ್. ಕೋರ್ಸಿಗೆ ಅರ್ಹನಾಗುತ್ತಾನೆ.

ಹೀಗೆ ಪ್ರವೇಶ ಪಡೆದ ನಂತರ ೫॥ ವರ್ಷಗಳ ಎಮ್. ಬಿ. ಬಿ. ಎಸ್. ಕೋರ್ಸಿನ ವ್ಯಾಸಂಗ ಮಾಡಬೇಕಾಗುತ್ತದೆ. ಎಮ್. ಬಿ. ಬಿ. ಎಸ್. ಪ್ರಥಮ ವರ್ಷದ ಕೋರ್ಸು ೧॥ ವರ್ಷದ ಅವಧಿಯದಿದ್ದು ಈ ಅವಧಿಯಲ್ಲಿ ದೇಹ ರಚನಾಶಾಸ್ತ್ರ (Anatomy), ಜೀವಕಾರ್ಯಶಾಸ್ತ್ರ (Physiology) ಈ ವಿಷಯಗಳ ಪರೀಕ್ಷೆಗಳಲ್ಲಿ ಉತ್ತೀರ್ಣನಾದ ಬಳಿಕ ೨ ನೆಯ ಎಮ್. ಬಿ. ಬಿ. ಎಸ್. ತರಗತಿಗೆ ಪ್ರವೇಶ ದೊರೆಯುತ್ತದೆ. ಈ ಕೋರ್ಸು ಎರಡು ವರ್ಷಗಳದಿದ್ದು ಔಷಧಿಶಾಸ್ತ್ರ (Pharmacology), ಪೆಥಾಲಜಿ (Pathology), ವೈದ್ಯಕೀಯ ನ್ಯಾಯಶಾಸ್ತ್ರ (Jurisprudence) ಈ ವಿಷಯಗಳ ಪರೀಕ್ಷೆ

ಗಳಲ್ಲಿ ತೇರ್ಗಡೆಯಾದ ನಂತರ ಮೂರನೆಯ ವರ್ಷದ ಎಮ್. ಬಿ. ಬಿ. ಎಸ್. ಕೋರ್ಸಿಗೆ ಪ್ರವೇಶ ಲಭಿಸುತ್ತದೆ. ಈ ಕೋರ್ಸು ಎರಡು ವರ್ಷಗಳ ಅವಧಿಯದಿದ್ದು ಔಷಧಿಶಾಸ್ತ್ರ, ಶಸ್ತ್ರಕ್ರಿಯಾಶಾಸ್ತ್ರ (Surgery), ಪ್ರಸೂತಿ-(Metarnary), ತಂತ್ರ ಪ್ರತಿಬಂಧಕ ಹಾಗೂ ಸಮಾಜವೈದ್ಯಶಾಸ್ತ್ರ (Preventive and Social Medicine) ಈ ವಿಷಯಗಳ ಪರೀಕ್ಷೆಯಲ್ಲಿ ತೇರ್ಗಡೆ ಯಾಗಬೇಕಾಗುತ್ತದೆ. ಇದೇ ಕೊನೆಯ ಪರೀಕ್ಷೆಯಾಗಿರುತ್ತದೆ. ಇನ್ನೊಂದು ಮಹತ್ವದ ಅಂಶವೆಂದರೆ ಎಮ್. ಬಿ. ಬಿ. ಎಸ್. ದ ಮೂರೂ ಪರೀಕ್ಷೆ ಗಳಲ್ಲಿ ಶೇಕಡಾ ೫೦ ರಷ್ಟು ಗುಣಗಳನ್ನು ಪಡೆದ ವಿದ್ಯಾರ್ಥಿಗಳೇ ತೇರ್ಗಡೆ ಯಾಗುತ್ತಾರೆ. ಇದಾದ ಬಳಿಕ ಒಂದು ವರ್ಷದ ಆಸ್ಪತ್ರೆಯ ಕಾರ್ಯವನ್ನು ಕಡ್ಡಾಯವಾಗಿ ಮಾಡಬೇಕಾಗುತ್ತದೆ.

ಈ ಕೋರ್ಸಿನ ಇಷ್ಟೊಂದು ಹಿನ್ನೆಲೆಯಲ್ಲಿ ಈ ಕೋರ್ಸಿನ ವಿಷಯ ವಾಗಿ ಜ್ಯೋತಿಷ್ಯದ ವಿಚಾರವೇನು, ಈ ಕೋರ್ಸಿನ ಶಿಕ್ಷಣ ಪಡೆಯಲು ಜಾತಕದಲ್ಲಿಯ ಯಾವ ಗ್ರಹ, ಲಗ್ನ, ಸ್ಥಾನಾದಿಗಳು ಕಾರಕವಾಗಿ ಪ್ರಭಾವ ಬೀರಬಲ್ಲವು ಮೊದಲಾದವುಗಳನ್ನು ಪರಿಶೀಲಿಸುವಾ.

**ಕಾರಕಗ್ರಹ:—** ವೈದ್ಯಕೀಯ ಕೋರ್ಸು ಆದ ಎಮ್. ಬಿ. ಬಿ. ಎಸ್. ಶಿಕ್ಷಣ ಪಡೆಯಲು ಜಾತಕದಲ್ಲಿ ಯಾವ ಗ್ರಹಗಳು ಪೋಷಕವಾಗಿರ ಬೇಕು, ಕಾರಕವಾಗಿರಬೇಕು ಎಂದು ಪ್ರಶ್ನಿಸಿದರೆ ಉತ್ತರ ಕೊಡುವದು ತುಂಬ ಕ್ಲಿಷ್ಟಕರವಾದ ಸಂಗತಿ. ಏಕೆಂದರೆ ಈ ಕೋರ್ಸಿನಲ್ಲಿ ಅನೇಕ ವಿಷಯ ಗಳಿದ್ದು, ಭಿನ್ನ ಭಿನ್ನ ವಿಷಯಗಳಿಗೆ ಭಿನ್ನ ಭಿನ್ನ ಗ್ರಹಗಳು ಕಾರಕವಿರುತ್ತವೆ. ಇದಲ್ಲದೆ ಯಾವುದೊಂದು ವಿಷಯಕ್ಕೆ ಅನೇಕ ಗ್ರಹಗಳು ಕಾರಕವಿರುವವಲ್ಲದೆ ಯಾವುದೊಂದು ಗ್ರಹವು ಅನೇಕ ವಿಷಯಗಳಿಗೆ ಕಾರಕವಿರುತ್ತದೆ. ಆದುದ ರಿಂದ ನಿರ್ದಿಷ್ಟ ಗ್ರಹವೇ ವೈದ್ಯಕೀಯ ಶಿಕ್ಷಣಕ್ಕೆ ಕಾರಕವೆಂದು ಹೇಳಲು ಬಾರದು.

ಶರೀರಶಾಸ್ತ್ರ (Anatomy), ಜೀವಕಾರ್ಯವಿಜ್ಞಾನ (Physiology), ಪೆಥಾಲಜಿ (Pathalogy) ಈ ವಿಷಯಗಳಿಗೆ ರವಿಯೂ, ಔಷಧಿ (Medicine) ಗೆ ಚಂದ್ರನೂ, ಔಷಧಿಶಾಸ್ತ್ರಕ್ಕೆ (Pharmacology) ರವಿ-ಚಂದ್ರರೂ,

ವೈದ್ಯಕೀಯ ನ್ಯಾಯಶಾಸ್ತ್ರಕ್ಕೆ (Medical Jurisprudence) ಶನಿಯೂ, ಶಸ್ತ್ರಕ್ರಿಯಾಶಾಸ್ತ್ರಕ್ಕೆ ಕುಜನೂ, ಸೂಲಗಿತ್ತಿ ಶಾಸ್ತ್ರ ಹಾಗೂ ಪ್ರಸೂತಿತಂತ್ರ (Gynacology and Maternity) ಶಾಸ್ತ್ರಗಳಿಗೆ ಶುಕ್ರ–ಚಂದ್ರರೂ ಕಾರಕ ಗ್ರಹಗಳಿರುತ್ತಾರೆ. ಹೀಗೆ ಭಿನ್ನ ಭಿನ್ನ ವಿಷಯಗಳಿಗೆ ಭಿನ್ನ ಭಿನ್ನ ಗ್ರಹಗಳು ಕಾರಕವಿರುವದರಿಂದ ಈ ಕೋರ್ಸಿಗೆ ಅನೇಕ ಗ್ರಹಗಳು ಕಾರಕವಿರುತ್ತವೆ. ಆದರೆ ಒಂದು ಸಂಗತಿ ನಿಜ. ಈ ಕೋರ್ಸಿನ ವಿದ್ಯಾರ್ಥಿಗಳ ಜಾತಕದಲ್ಲಿ ರವಿ–ಶನಿ–ಚಂದ್ರರು ಅದರಲ್ಲಿಯೂ ರವಿ–ಚಂದ್ರರು ಇತರ ಗ್ರಹಗಳಿಗಿಂತ ಹೆಚ್ಚು ಬಲಾಢ್ಯರಿರುವದು ಕಂಡುಬರುತ್ತದೆ.

ಅನೇಕ ಜ್ಯೋತಿಷಿಗಳು ವೈದ್ಯಕೀಯ ಕೋರ್ಸಿಗೆ ಕುಜನೇ ಹೆಚ್ಚು ಕಾರಕಗ್ರಹನಿರುವನೆಂದು ಅಭಿಪ್ರಾಯಪಡುತ್ತಾರೆ. ಆದರೆ ನಮ್ಮ ಅಭಿಪ್ರಾಯದಲ್ಲಿ ವೈದ್ಯಕೀಯದಲ್ಲಿಯ ಶಸ್ತ್ರಕ್ರಿಯೆ ಕೋರ್ಸಿಗೆ ಹಾಗೂ ಸರ್ಜನರಿಗೆ ಮಾತ್ರ ಕುಜನು ಜಾತಕದಲ್ಲಿ ಪೋಷಕನಿರಬೇಕು. ಉಳಿದ ಎಲ್ಲ ವೈದ್ಯರಿಗೂ ಹಾಗೂ ವೈದ್ಯಕೀಯ ಕೋರ್ಸುಗಳಿಗೂ ಕುಜನು ಕಾರಕನಿರುವದಿಲ್ಲ. ಇದಲ್ಲದೆ ಎಲ್ಲ ವೈದ್ಯರೂ ಶಸ್ತ್ರಚಿಕಿತ್ಸೆಯಲ್ಲಿ ನಿಷ್ಣಾತರಾಗಿರುವದಿಲ್ಲ. ಆದುದರಿಂದ ರವಿ–ಚಂದ್ರ–ಶನಿಯರೇ ಈ ಕೋರ್ಸಿನ ಕಾರಕಗ್ರಹಗಳು.

ಸ್ಥಾನ :— ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ಥೇರಿ ಶಿಕ್ಷಣಕ್ಕಾಗಿ ಪಂಚಮಸ್ಥಾನವು, ಪ್ರಾಯೋಗಿಕ ಹಾಗೂ ಪ್ರಾತ್ಯಕ್ಷಿಕ ಶಿಕ್ಷಣಕ್ಕಾಗಿ ತೃತೀಯ ಸ್ಥಾನವು ಕಾರಕಸ್ಥಾನವಿರುವದಲ್ಲದೆ ಈ ಕೋರ್ಸು ವೃತ್ತಿಶಿಕ್ಷಣದಲ್ಲಿ ಬರುವದರಿಂದ ವೃತ್ತಿಶಿಕ್ಷಣದ ಕಾರಕಸ್ಥಾನವಾದ ಷಷ್ಠಸ್ಥಾನವು ಕಾರಕವಿರುತ್ತದೆ, ಆದುದರಿಂದ ಈ ಸ್ಥಾನಗಳೂ ಹಾಗೂ ಈ ಸ್ಥಾನಾಧೀಶರೂ ಪೋಷಕರಿರುವ ವಿದ್ಯಾರ್ಥಿಗಳು ಈ ಕೋರ್ಸಿನಲ್ಲಿ ಯಶಸ್ಸು ಪಡೆಯುತ್ತಾರೆ.

ಲಗ್ನ :— ಲಗ್ನದ ದೃಷ್ಟಿಯಿಂದ ಪರಿಶೀಲಿಸಿದರೆ ನಿರ್ದಿಷ್ಟ ಲಗ್ನದ ವಿದ್ಯಾರ್ಥಿಗಳೇ ಈ ಕೋರ್ಸಿನ ಜ್ಞಾನಪಡೆಯುವರೆಂದು ಹೇಳುವದು ಕಠಿಣ. ಮೇಷ, ವೃಷಭ, ಕರ್ಕ, ಸಿಂಹ, ವೃಶ್ಚಿಕ ಈ ಲಗ್ನದ ವಿದ್ಯಾರ್ಥಿಗಳು ತದನಂತರ ತುಲಾ, ಧನು ಈ ಲಗ್ನದ ವಿದ್ಯಾರ್ಥಿಗಳು ಹೆಚ್ಚಾಗಿರುವದು ಕಂಡುಬರುತ್ತದೆ.

ರಾಶಿ :— ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ನಿರ್ದಿಷ್ಟ ರಾಶಿಯವರೇ ಈ ಕೋರ್ಸನ್ನು ಮುಗಿಸುವರೆಂದು ಹೇಳಲು ಬಾರದು.

## ಸ್ನಾತಕೋತ್ತರ ಕೋರ್ಸುಗಳು

ವೈದ್ಯಕೀಯ ವ್ಯಾಸಂಗದಲ್ಲಿ ಸ್ನಾತಕೋತ್ತರ ಪದವಿ ಹಾಗೂ ಸ್ನಾತಕೋತ್ತರ ಡಿಪ್ಲೊಮಾಗಳು ಅನೇಕವಿವೆ. ಅವುಗಳಲ್ಲಿ ಕೆಲವೊಂದು ಕೋರ್ಸುಗಳ ವಿಷಯವಾಗಿ ಇಲ್ಲಿ ವಿವೇಚಿಸಲಾಗಿದೆ.

### ೧. ಡಿ. ಪಿ. ಎಚ್. ಹಾಗೂ ಎಮ್. ಪಿ. ಎಚ್.
### ( Diploma in Public Health and Master in Public Health )

ಡಿಪ್ಲೊಮಾ ಇನ್ ಪಬ್ಲಿಕ್ ಹೆಲ್ತ್ ಹಾಗೂ ಮಾಸ್ಟರ ಇನ್ ಪಬ್ಲಿಕ್ ಹೆಲ್ತ್ ಈ ಕೋರ್ಸುಗಳು ಎಮ್. ಬಿ. ಬಿ. ಎಸ್. ಪದವಿಯ ನಂತರ ಒಂದು ವರ್ಷದ ಡಿಪ್ಲೊಮಾ ಹಾಗೂ ಎರಡು ವರ್ಷದ ಪದವಿಯ ಕೋರ್ಸುಗಳಿರುತ್ತವೆ. ಈ ಕೋರ್ಸುಗಳಲ್ಲಿ ಶಿಕ್ಷಣ ಪಡೆಯಲು ಜಾತಕದಲ್ಲಿ ಶನಿ ಗ್ರಹವು ಹಾಗೂ ದಶಮಸ್ಥಾನ, ದಶಮೇಶ, ಪೋಷಕರಿರುವ ವಿದ್ಯಾರ್ಥಿಗಳಿಗೆ ಹೆಚ್ಚು ಅನುಕೂಲವಾಗುತ್ತದೆ.

### ೨. ಡಿ. ಸಿ. ಎಚ್. ( Diploma in Child Health )

ಡಿಪ್ಲೊಮಾ ಇನ್ ಚೈಲ್ಡ ಹೆಲ್ತ್ ಎಂಬ ಕೋರ್ಸು ಎಮ್. ಬಿ. ಬಿ. ಎಸ್. ದ ನಂತರ ಒಂದು ವರ್ಷದ ಅವಧಿಯದಿರುತ್ತದೆ. ಈ ಕೋರ್ಸಿನಲ್ಲಿ ತಜ್ಞತೆಹೊಂದಲು ಜಾತಕದಲ್ಲಿ ಚಂದ್ರ-ಲಗ್ನೇಶ, ಚತುರ್ಥೇಶ, ಲಗ್ನ, ಚತುರ್ಥಸ್ಥಾನ ಪೋಷಕರಿರಬೇಕು.

### ೩. ಡಿ. ವಿ. ಡಿ. (Diploma in Venereal Diseases)

ಡಿಪ್ಲೊಮಾ ಇನ್ ವೆನರಲ್ ಡಿಸಿಜೆಸ್ ಎಂಬ ಕೋರ್ಸು ಎಮ್. ಬಿ. ಬಿ. ಎಸ್. ದ ನಂತರ ಒಂದು ವರ್ಷದ ಅವಧಿಯದಿದ್ದು ಈ ಕೋರ್ಸಿನಲ್ಲಿ ತಜ್ಞತೆ ಪಡೆಯಲು ಜಾತಕದಲ್ಲಿ ಶುಕ್ರ-ಚಂದ್ರರು ಪೋಷಕರಿರಬೇಕು.

೪. ಎಮ್. ಡಿ. ( Doctor of Medicine)
ಎಮ್, ಎಸ್. (Master of Surgery )

ಮಾಸ್ಟರ ಆಫ್ ಮೆಡಿಸಿನ್ ಇದು ಸ್ನಾತಕೋತ್ತರ ಪದವಿಯಿದ್ದು ಎಮ್. ಬಿ. ಬಿ. ಎಸ್. ದ ನಂತರ ಎರಡು ವರ್ಷಗಳ ವ್ಯಾಸಂಗವಿರುತ್ತದೆ. ಈ ಕೋರ್ಸಿನಲ್ಲಿ ತಜ್ಞತೆ ಪಡೆಯಲು ಜಾತಕದಲ್ಲಿ ಮೂರು ಸಂಗತಿಗಳು ಪೋಷಕವಿರಬೇಕು.

೧) ಶನಿ, ಚಂದ್ರ, ಗುರುಗಳು ಜಾತಕದಲ್ಲಿ ಬಲಾಢ್ಯವಿರಬೇಕು.

೨) ಈ ಕೋರ್ಸಿನ ವಿದ್ಯಾರ್ಥಿಗಳು ಹೆಚ್ಚಾಗಿ ಮೇಷ, ಕರ್ಕ, ತುಲಾ, ವೃಶ್ಚಿಕ, ಸಿಂಹ, ಮಿನ ಈ ಲಗ್ನದವರಿರುತ್ತಾರೆ.

೩) ಈ ಕೋರ್ಸಿನ ವಿದ್ಯಾರ್ಥಿಗಳು ಹೆಚ್ಚಾಗಿ ವೃಷಭ, ಮಿಥುನ, ಕನ್ಯಾ, ಮೀನ, ತುಲಾ, ಕುಂಭ ಈ ರಾಶಿಯವರಿರುತ್ತಾರೆ.

ಮಾಸ್ಟರ್ ಆಫ್ ಸರ್ಜರಿ ಈ ಕೋರ್ಸು ಎಮ್. ಬಿ. ಬಿ. ಎಸ್.ದ ನಂತರ ಎರಡು ವರ್ಷಗಳ ವ್ಯಾಸಂಗವಿದ್ದು ಈ ಕೋರ್ಸಿನಲ್ಲಿ ತಜ್ಞತೆ ಪಡೆಯಲು ಈ ಕೆಳಗಿನ ಸಂಗತಿಗಳು ಪೋಷಕವಿರಬೇಕು.

೧) ಮಂಗಳನು ಜಾತಕದಲ್ಲಿ ಬಲಾಢ್ಯನೂ, ಯೋಗಕಾರಕನೂ ಇರದೆ ವಿದ್ಯಾರ್ಥಿಗಳು ಶಸ್ತ್ರಚಿಕಿತ್ಸೆಯಲ್ಲಿ ತಜ್ಞತೆ ಪಡೆಯಲಾರರು. ಏಕೆಂದರೆ ಶಸ್ತ್ರಚಿಕಿತ್ಸೆ ಮಾಡುವದೆಂದರೆ ಹೊಸದಾಗಿ, ಪ್ರತ್ಯೇಕವಾಗಿ ರಕ್ತ, ಮಾಂಸಗಳನ್ನು ನಿರ್ಮಿಸುವದು, ಶರೀರದ ಅವಯವಗಳನ್ನು ದುರಸ್ತು ಮಾಡುವದು, ಶರೀರದ ಭಾಗವನ್ನು ಕೊಯ್ಯುವದು, ಜೋಡಿಸುವದು, ಕೆಟ್ಟ ಹಾಗೂ ಹೊಲಸು ಮಾಂಸ, ರಕ್ತವನ್ನು ಬೇರ್ಪಡಿಸುವದು ಇವೇ ಪ್ರಮುಖ ಕೆಲಸಗಳಿರುತ್ತವೆ. ಮಾಂಸ ಹಾಗೂ ರಕ್ತದ ಮೇಲೆ ಮಂಗಳನ ಪ್ರಭುತ್ವವಿರುವದರಿಂದ ಜಾತಕದಲ್ಲಿ ಮಂಗಳನು ಬಲಾಢ್ಯನಿರಲೇಬೇಕು.

೨) ಎರಡನೆಯದಾಗಿ ಮಂಗಳನ ತರುವಾಯ ರವಿಯನ್ನು ಪರಿಶೀಲಿಸಬೇಕು. ಏಕೆಂದರೆ ಅಂಗರಚನಾಶಾಸ್ತ್ರ, ಜೀವಕಾರ್ಯವಿಜ್ಞಾನ ವಿಷಯಗಳಲ್ಲಿ ತಜ್ಞತೆ ಪಡೆಯಲು ಜಾತಕದಲ್ಲಿ ರವಿಯು ಬಲಾಢ್ಯನಿರಬೇಕು. ಸರ್ಜನ್ನರಿಗೆ ಈ ವಿಷಯಗಳಲ್ಲಿ ತಜ್ಞತೆಯಿರಬೇಕು.

೩) ಮೂರನೆಯದಾಗಿ ಈ ವಿದ್ಯಾರ್ಥಿಗಳು ಹೆಚ್ಚಾಗಿ ಮೇಷ, ಕರ್ಕ, ಸಿಂಹ, ವೃಶ್ಚಿಕ, ಧನು, ಮಕರ ಈ ಲಗ್ನದವರಿರುತ್ತಾರೆ.

೪) ನಾಲ್ಕನೆಯದಾಗಿ ಶಸ್ತ್ರಚಿಕಿತ್ಸೆ ಮಾಡುವದೆಂದರೆ ಜಾತಕನು ದೃಢನಿಶ್ಚಯಿ ಹಾಗೂ ಕಠೋರ ಹೃದಯದವನಿರಬೇಕು. ರಕ್ತ ಕಂಡರೆ ಅಂಜುವ ಅಳ್ಳೆದೆಯವನಿರಕೂಡದು. ಆದುದರಿಂದ ಈ ಶಿಕ್ಷಣದಲ್ಲಿ ತಜ್ಞತೆ ಹೊಂದಿದವರು ಹೆಚ್ಚಾಗಿ ಮೇಷ, ಸಿಂಹ, ತುಲಾ, ವೃಶ್ಚಿಕ, ಧನು, ಮಕರ, ಕುಂಭ ಈ ರಾಶಿಯವರಿರುತ್ತಾರೆ.

ಹೀಗೆ ಮೇಲ್ಕಾಣಿಸಿದ ನಾಲ್ಕು ಸಂಗತಿಗಳು ಪೋಷಕವಿದ್ದ ವಿದ್ಯಾರ್ಥಿಗಳು ಶಸ್ತ್ರಚಿಕಿತ್ಸೆಯ ಕೋರ್ಸಿನಲ್ಲಿ ಯಶಸ್ವಿಯಾಗುತ್ತಾರೆ.

## ನಾನ್-ಕ್ಲಿನಿಕಲ್ ಕೋರ್ಸುಗಳು

ಬಿ. ಎಸ್‌ಸಿ. ಪದವೀಧರರಿಗೆ ಕೂಡ ಒಂದು ಬಗೆಯ ವೈದ್ಯಕೀಯ ಸ್ನಾತಕೋತ್ತರ ವ್ಯಾಸಂಗ ಮಾಡಲು ಬರುತ್ತದೆ. ಇದಕ್ಕೆ ನಾನ್-ಕ್ಲಿನಿಕಲ್ ಕೋರ್ಸ್ ಎನ್ನುತ್ತಾರೆ. ಈ ಕೋರ್ಸ್ ಎರಡು ವರ್ಷಗಳ ಅವಧಿಯ ವ್ಯಾಸಂಗವಿದ್ದು ಇದರಲ್ಲಿ ನಾಲ್ಕು ಎನಾಟಮಿ, ಫಿಜಿಯಾಲಜಿ. ಬಯೋಕೆಮಿಸ್ಟ್ರಿ ಮೊದಲಾದ ವಿಷಯಗಳನ್ನು ಅಭ್ಯಾಸಮಾಡಬೇಕಾಗುತ್ತದೆ. ಈ ಕೋರ್ಸಿನ ವ್ಯಾಸಂಗ ಪಡೆಯಲು ಜಾತಕದಲ್ಲಿ ಈ ಕೆಳಗಿನ ಸಂಗತಿಗಳು ಪೋಷಕವಿರಬೇಕು.

೧) ಮೊದಲನೆಯದಾಗಿ ಎನಾಟಮಿ ಹಾಗೂ ಫಿಜಿಯಾಲಜಿಗೆ ಕಾರಕ ಗ್ರಹವಾದ ರವಿಯೂ, ಬಯೋಕೆಮಿಸ್ಟ್ರಿಯ ಕಾರಕಗ್ರಹವಾದ ಶನಿಯೂ ಜಾತಕದಲ್ಲಿ ಪೋಷಕರಿರಬೇಕು.

೨) ಎರಡನೆಯದಾಗಿ ಈ ಕೋರ್ಸನ್ನು ಅಭ್ಯಾಸ ಮಾಡಿದವರು ಹೆಚ್ಚಾಗಿ ಅಧ್ಯಾಪಕ ವೃತ್ತಿಯನ್ನು ಕೈಕೊಳ್ಳುವದರಿಂದ ಶಿಕ್ಷಕವೃತ್ತಿಯ ಸ್ಥಾನವಾದ ಪಂಚಮ, ದ್ವಿತೀಯ ಸ್ಥಾನಗಳೂ ಹಾಗೂ ಸ್ಥಾನಾಧೀಶರೂ ಪೋಷಕರಿರಬೇಕಾದದಲ್ಲದೆ ಶಿಕ್ಷಕವೃತ್ತಿಯ ಗ್ರಹವಾದ ಗುರುವೂ ಜಾತಕದಲ್ಲಿ ಪೋಷಕನಿರಬೇಕು.

೩) ಮೂರನೆಯದಾಗಿ ಈ ಸ್ನಾತಕೋತ್ತರ ಅಧ್ಯಯನದ ಅವಧಿಯಲ್ಲಿ ಗೋಚರೀ ಗ್ರಹವು ಅನುಕೂಲವಿರಬೇಕು.

ಎಮ್. ಬಿ. ಬಿ. ಎಸ್. ಪದವೀಧರರಿಗೂ ಕೂಡ ನಾನ್-ಕ್ಲಿನಿಕಲ್ ಕೋರ್ಸುಗಳಿವೆ. ಇವರು ಪೆಥಾಲಜಿ, ಫಾರ್ಮಾಕಾಲಜಿ, ಮೆಡಿಕಲ್ ಜ್ಯೂರಿಸ್‌ಪ್ರುಡನ್ಸ್ ಮೊದಲಾದ ವಿಷಯಗಳ ವ್ಯಾಸಂಗದ ಎರಡು ವರ್ಷದ ಕೋರ್ಸಿರುತ್ತದೆ. ಈ ಕೋರ್ಸಿನಲ್ಲಿ ಪದವಿಯನ್ನು ಪಡೆಯಲು ಜಾತಕದಲ್ಲಿ ಈ ಕೆಳಗಿನ ಸಂಗತಿಗಳು ಪೋಷಕವಿರಬೇಕು.

೧) ಪೆಥಾಲಜಿ ಕಾರಕಗ್ರಹವಾದ ರವಿಯೂ, ಫಾರ್ಮಾಕಾಲಜಿ ಕಾರಕ ಗ್ರಹವಾದ ಶನಿ-ಚಂದ್ರರೂ, ಜ್ಯೂರಿಸ್‌ಪ್ರುಡನ್ಸಿಗೆ ಕಾರಕರಾದ ಗುರು-ಶನಿಯರೂ ಜಾತಕದಲ್ಲಿ ಪೋಷಕರಿರಬೇಕು.

೨) ಎರಡನೆಯದಾಗಿ ಎಮ್. ಬಿ. ಬಿ. ಎಸ್. ಕೋರ್ಸಿನ ಕಾರಕ ಸ್ಥಾನಗಳೇ ಈ ಕೋರ್ಸಿಗೂ ಕಾರಕಸ್ಥಾನಗಳಾಗಿರುತ್ತವೆ.

೩) ಮೂರನೆಯದಾಗಿ ಈ ಕೋರ್ಸು ಮುಗಿಸಿದವರೂ ಕೂಡ ಹೆಚ್ಚಾಗಿ ಅಧ್ಯಾಪಕವೃತ್ತಿಯನ್ನು ಕೈಕೊಳ್ಳುವದರಿಂದ ಅಧ್ಯಾಪಕವೃತ್ತಿಯ ಕಾರಕಸ್ಥಾನ, ಗ್ರಹಗಳು ಪೋಷಕವಿರಬೇಕು.

ಹೀಗೆ ಮೇಲೆ ಹೇಳಿದ ಎರಡು ಪ್ರಕಾರದ ಸ್ನಾತಕೋತ್ತರ ನಾನ್ ಕ್ಲಿನಿಕಲ್ ಕೋರ್ಸುಗಳಿಗೆ ಅಧ್ಯಯನ ಮಾಡಲು ಮೇಲಿನ ಸಂಗತಿಗಳು ಜಾತಕದಲ್ಲಿ ಪೋಷಕವಿರಬೇಕು.

### ಬಿ. ಡಿ. ಎಸ್., ಬಿ. ಫಾರ್ಮಾ, ಬಿ. ವಿ. ಎಸ್. ಮೊದಲಾದ ಕೋರ್ಸುಗಳು

ವೈದ್ಯಕೀಯ ಶಿಕ್ಷಣದಲ್ಲಿ ಪಿ. ಯು. ಸಿ. (ವಿಜ್ಞಾನ)ದಲ್ಲಿ ಪಿ. ಸಿ. ಬಿ. ವಿಷಯಗಳ ಸಂಯೋಜನೆ ಪಡೆದ ವಿದ್ಯಾರ್ಥಿಗಳು ದಂತವೈದ್ಯ, ಔಷಧೀಯಶಾಸ್ತ್ರ, ಪಶುವೈದ್ಯ ವಿಜ್ಞಾನ ಇವುಗಳ ಅಭ್ಯಾಸ ಮಾಡಬಹುದು. ಇವೇ ಬಿ. ಡಿ. ಎಸ್., ಬಿ. ಫಾರ್ಮಾ, ಬಿ. ವಿ. ಎಸ್. ಪದವಿಗಳು. ಇವು ಮಹತ್ವದ ಕೋರ್ಸುಗಳಿದ್ದು ನಾಲ್ಕು ವರ್ಷದ ವ್ಯಾಸಂಗದವಿರುತ್ತವೆ.

ಈ ಪದವಿಗಳನ್ನು ಪಡೆಯಲು ಜಾತಕ ಎಂತಿರಬೇಕು ಎಂಬುದನ್ನು ಪರಿಶೀಲಿಸುವಾ.

೧. ಫಾರ್ಮಾಕಾಲಜಿ ( ಬಿ. ಫಾರ್ಮಾ ) ಕೋರ್ಸುಗಳು:— ಫಾರ್ಮಸಿಗೆ ಸಂಬಂಧಿಸಿದ ವಿಜ್ಞಾನದ ಅಭ್ಯಾಸವೆಂದಕೂಡಲೆ ನಮ್ಮೆಲ್ಲರ ಕಣ್ಣಿಗೆ ಬೀಳುವದು ಕಾಂಪೌಂಡರ್ ಉದ್ಯೋಗ. ಕಾಂಪೌಂಡರ್ ಅಂದ ಕೂಡಲೆ ನಮ್ಮ ಮನದ ಎದುರಿಗೆ ನಿಲ್ಲುವ ವ್ಯಕ್ತಿಯೆಂದರೆ ಔಷಧಿಗಳ ಮಿಶ್ರಣವನ್ನು ತಯಾರಿಸಿ ಅರ್ಥಾತ್ ಔಷಧಿಗಳನ್ನು ಕುಟ್ಟಿ ಪುಡಿಮಾಡಿ ಬೆರೆಸಿ ಚೀಟಕಟ್ಟುವ, ಬಾಟ್ಲಿ ತುಂಬುವ, ರೋಗಿಗಳಿಗೆ ಕೊಡುವ ವ್ಯಕ್ತಿಯೆಂದು ಭಾಸವಾಗುತ್ತದೆ. ಆದುದರಿಂದ ಈ ವೃತ್ತಿಯನ್ನು ಕಂಡು ಕೆಲವರು ಮೂಗು ಮುರಿಯಬಹುದು, ಆದರೆ ನಿಜವಾಗಿ ನೋಡಿದರೆ ಫಾರ್ಮಸಿ ಶಾಸ್ತ್ರದಲ್ಲಿಯ ಅನೇಕ ಶಾಖೆಗಳಲ್ಲಿ ಕಾಂಪೌಂಡರ್ ಕೆಲಸಗಳಲ್ಲದ ಅನೇಕ ಬೇರೆ ಬೇರೆ ಕೆಲಸಗಳಿರುತ್ತವೆ. ಇದೂ ಅಲ್ಲದೆ ಕಾಂಪೌಂಡರ್ ಈ ಶಬ್ದವು ಪುರಾತನ ಶಬ್ದವಿದ್ದು ಅದು ಅರ್ಥಹೀನವಿರುತ್ತದೆ. ಆಧುನಿಕ ಜೀವನದಲ್ಲಿ ಔಷಧ ತಯಾರಿಸುವ ಶಾಸ್ತ್ರಕ್ಕೆ ( ಫಾರ್ಮಾಕಾಲಜಿ ) ಇರುವ ಮಹತ್ವ ಬೇರೆ ಯಾವ ಶಾಸ್ತ್ರಕ್ಕೂ ಇರುವದಿಲ್ಲ. ಔಷಧ ತಯಾರಿಯ ಶಾಸ್ತ್ರದ ಮೇಲೆಯೇ ಜನಜೀವನದ ನಾಡಿಯು ಅವಲಂಬಿಸಿರುತ್ತದೆ (ಮಿಡಿಯುತ್ತದೆ) ಎಂದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ.

ಔಷಧ ವ್ಯಾಪಾರವು ಉಳಿದ ವ್ಯಾಪಾರಕ್ಕಿಂತ ಅಂದರೆ ಕಾಯಿಪಲ್ಲೆ, ಕಿರಾಣಿ ಮೊದಲಾದವುಗಳಿಗಿಂತ ಭಿನ್ನವಿರುತ್ತದೆ. ಔಷಧಿಯ ವ್ಯಾಪಾರಿಯ ಮೇಲೆ ದೊಡ್ಡ ಜವಾಬ್ದಾರಿಯಿರುತ್ತದೆ. ಅವನು ಬೇಕಾದ ಔಷಧವನ್ನು ಬೇಕಾದ ಹಾಗೆ ಮಾರಲಾರನು. ಜನರ ಜೀವನ-ಮರಣದ ಸಮಸ್ಯೆಯಿರುತ್ತದೆ. ಈ ವೃತ್ತಿ ಜನಸಾಮಾನ್ಯರಿಗೆ ಉಪಯುಕ್ತವಿರುವದಲ್ಲದೆ ಗೌರವಪೂರ್ಣವೂ ಇರುತ್ತದೆ. ಜನರ ಕಲ್ಯಾಣ ಹಾಗೂ ಆರೋಗ್ಯದ ಹೊಣೆಗಾರಿಕೆಯುಳ್ಳದ್ದೂ ಇರುತ್ತದೆ. ಹೀಗೆ ಜನತಾ ಜನಾರ್ದನ ಸೇವೆ ಮಾಡುವ ಸುದೈವಿಗಳೆಂದರೆ ಈ ವ್ಯಕ್ತಿಯವರೇ ಇರುತ್ತಾರೆ. ಈ ವೃತ್ತಿಯನ್ನು ಕೈಕೊಳ್ಳುವವರು ಔಷಧಿಯಶಾಸ್ತ್ರದ ಕೋರ್ಸಿನ ಪದವಿಯನ್ನು ಪಡೆಯ

ಬೇಕಾಗುತ್ತದೆ. ಈ ಪದವಿ ಒಡೆದವರು ಸ್ವತಂತ್ರ ಫಾರ್ಮಸಿ ತೆಗೆಯ ಬಹುದು, ಅಥವಾ ಔಷಧಿಯ ಏಜೆಂಟರೆಂದು ಕಾರ್ಯ ಮಾಡಬಹುದು, ಅಥವಾ ಔಷಧಿ ತಯಾರಿಸುವ ಕಾರಖಾನೆಗಳಲ್ಲಿ ಮೇಲ್ವಿಚಾರಕರೆಂದು ನೌಕರಿ ಮಾಡಬಹುದು. ಇವಲ್ಲದೆ ಔಷಧ ಕಾರಖಾನೆಗಳಲ್ಲಿ ಸಂಶೋಧಕರೆಂದು ಕೆಲಸ ಮಾಡಿ ಹೊಸ ಹೊಸ ಔಷಧಗಳನ್ನು ಕಂಡುಹಿಡಿದು ಪೇಟೆಗಳಲ್ಲಿ ಅವನ್ನು ತರಬಹುದು. ಯಾವದೇ ಔಷಧ ಪೇಟೆಯಲ್ಲಿ ರಾಮಬಾಣವೆಂದು ಪ್ರಸಿದ್ಧವಾಗಿದ್ದರೆ ಇವುಗಳ ಹಿಂದೆ ಪೆನ್ಸಲವಿನಂತಿರುವ ಫಾರ್ಮಸಿ ಕೋರ್ಸ ಗಳನ್ನು ಮುಗಿಸಿದ ಈ ವ್ಯಕ್ತಿಗಳಿಗೆ ಸಲ್ಲುತ್ತದೆ. ಹೀಗೆ ಈ ಕೋರ್ಸ ದಿನೇ ದಿನೇ ಜನಪ್ರಿಯವಾಗುತ್ತಿದ್ದು ಅನೇಕ ವಿದ್ಯಾರ್ಥಿಗಳನ್ನು ಆಕರ್ಷಿಸುವದರಲ್ಲಿ ಆಶ್ಚರ್ಯವಿಲ್ಲ. ಇಂಥ ಉಪಯುಕ್ತವಾದ — ಕೋರ್ಸಿನ ವಿಷಯವಾಗಿ ಜ್ಯೋತಿಷ್ಯದ ವಿಚಾರವೇನು, ಈ ಕೋರ್ಸಿನ ಶಿಕ್ಷಣ ಪಡೆಯಲು ಜಾತಕ ವೆಂತಿರಬೇಕು, ಕಾರಕ, ಲಗ್ನ, ಗ್ರಹ, ಸ್ಥಾನಾದಿಗಳಾವವು ಎಂಬುದನ್ನು ವಿಚಾರಿಸುವಾ.

ಈ ಕೋರ್ಸಿನ ಪದವಿಯನ್ನು ಪಡೆಯಲು ಕಾರಕಗ್ರಹಗಳಾವವು ಎಂಬುದನ್ನು ಪರಿಶೀಲಿಸುವ ಮೊದಲು ಈ ಕೋರ್ಸಿನ ವಿಷಯಗಳ ವೈವಿ-ಧ್ಯತೆಯೇನು, ಈ ಕೋರ್ಸಿನ ಶಿಕ್ಷಣದ ಪ್ರವೇಶ ಪಡೆಯಲು ಶಿಕ್ಷಣಾರ್ಹತೆ ಗಳಾವವು ಎಂಬುದನ್ನು ಪರಿಶೀಲಿಸುವದು ಮೊದಲು ಅವಶ್ಯವಿರುತ್ತದೆ.

ಈ ಕೋರ್ಸಿನಲ್ಲಿ ಡಿಪ್ಲೊಮಾ, ಪದವಿ, ಸ್ನಾತಕೋತ್ತರ ಪದವಿ ಹೀಗೆ ಮೂರು ಪ್ರಕಾರದ ಕೋರ್ಸಗಳಿದ್ದು, ಅವುಗಳ ಪ್ರವೇಶ ಪಡೆಯಲು ಶಿಕ್ಷಣಾರ್ಹತೆ ವಿಭಿನ್ನವಿರುತ್ತವೆ.

೧) ಫಾರ್ಮಸಿ ಇನ್ ಡಿಪ್ಲೊಮಾ ಇದು ಎರಡು ವರ್ಷಗಳ ಅವ-ಧಿಯದಿದ್ದು ಎಸ್.ಎಸ್.ಸಿ.ಯಲ್ಲಿ ವಿಜ್ಞಾನ ವಿಷಯಗಳನ್ನು ತೆಗೆದುಕೊಂಡ ವಿದ್ಯಾರ್ಥಿಗಳಿಗೆ ಪ್ರವೇಶವಿರುತ್ತದೆ. ಈ ಕೋರ್ಸಿನಲ್ಲಿ ಮೊದಲನೆಯ ವರ್ಷ ಭೌತವಿಜ್ಞಾನ, ರಸಾಯನಶಾಸ್ತ್ರ, ಸಸ್ಯಶಾಸ್ತ್ರ, ಪ್ರಾಣಿಶಾಸ್ತ್ರ ಈ ವಿಷಯಗಳನ್ನು ಕಲಿಸಿ ಎರಡನೆಯ ವರ್ಷ ಸಾಮಾನ್ಯ ಫಾರ್ಮಸಿ, ಸಿದ್ಧಾಂತ ಗಳು, ಗೈನೋನಿಕಲ್ ಫಾರ್ಮಸಿ, ಜೈವಿಕ ಫಾರ್ಮಸಿ, ಔಷಧಿಯ

ಅರ್ಥಶಾಸ್ತ್ರ ಇವುಗಳನ್ನು ಕಲಿಯುವುದಲ್ಲದೆ ಔಷಧ ತಯಾರಿಸುವ, ಮಾತ್ರೆಗಳನ್ನು ತಯಾರಿಸುವನ್ನೂ ಶಾಸ್ತ್ರಗಳ ಸಿದ್ಧಾಂತಗಳು ಡಿಸ್ಪೆನ್ಸಿಂಗ್ ಫಾರ್ಮಸಿಯನ್ನೂ ಕಲಿಸಲಾಗುತ್ತದೆ. ಇದೂ ಅಲ್ಲದೆ ಫಾರ್ಮಸಿಗೆ ಸಂಬಂಧಿಸಿದ ಕಾಯ್ದೆ, ಕಟ್ಟಳೆ ಮೊದಲಾದವುಗಳ ಅಭ್ಯಾಸದ ಫಾರೆನ್ಸಿಕ್ ಫಾರ್ಮಸಿ ವಿಷಯವನ್ನೂ ಮತ್ತು ರಸಾಯನಶಾಸ್ತ್ರದ ಘಟಕಗಳಾದ ಸೇಂದ್ರಿಯ ರಸಾಯನಶಾಸ್ತ್ರ, ನಿರಿಂದ್ರಿಯಶಾಸ್ತ್ರಗಳನ್ನೂ ಕಲಿಸುವದಲ್ಲದೆ ವನಸ್ಪತಿ, ಖನಿಜ ಹಾಗೂ ಪ್ರಾಣಿಗಳ ಗುಣಧರ್ಮಗಳನ್ನೂ ಕಲಿಸಲಾಗುತ್ತದೆ. ಇದೂ ಅಲ್ಲದೆ ಮಾನವನ ಅಂಗರಚನೆ (ಎನಾಟಮಿ), ಶರೀರಶಾಸ್ತ್ರ, ಜೀವಕಾರ್ಯ ವಿಜ್ಞಾನ, ಶರೀರಸ್ವಾಸ್ಥ್ಯ, ಪ್ರಥಮೋಪಚಾರ ಈ ವಿಷಯಗಳನ್ನು ಕಲಿಸುವದರೊಡನೆ ಮಾನವನ ಶರೀರದ ಮೇಲೆ ಔಷಧದ ಪರಿಣಾಮ ಹಾಗೂ ಅವುಗಳ ಅಭ್ಯಾಸ, ಪ್ರಾಣಿಗಳ ಮೇಲೆ ಔಷಧವನ್ನು ಪ್ರಯೋಗಿಸುವ ರೀತಿ ಈ ಮೊದಲಾದ ವಿಷಯಗಳ ಜ್ಞಾನವನ್ನು ಈ ಕೋರ್ಸಿನಲ್ಲಿ ಪಡೆದು ಅಭ್ಯಾಸ ಪೂರೈಯಿಸಿದ ನಂತರ ಮೂರು ತಿಂಗಳ ಕಾಲ ವ್ಯಾವಹಾರಿಕ ತರಬೇತಿ ಕಲಿಸಿ ಕೊಡಲಾಗುತ್ತದೆ.

೨) ಇನ್ನು ಪದವಿ ಪಡೆಯುವ ಶಿಕ್ಷಣದ ಕೋರ್ಸು ನಾಲ್ಕು ವರ್ಷಗಳ ಅವಧಿಯಿರುತ್ತವೆ. ಕೆಲವು ವಿಶ್ವವಿದ್ಯಾಲಯಗಳಲ್ಲಿ ಮೂರು ವರ್ಷಗಳ ವ್ಯಾಸಂಗದ ಕೋರ್ಸು ಇರುತ್ತದೆ. ಈ ಕೋರ್ಸಿನ ಪ್ರವೇಶ ಪಡೆಯಲು ಪಿ. ಯು. ಸಿ. (ವಿಜ್ಞಾನ)ದಲ್ಲಿ ಪಿ. ಸಿ. ಬಿ. ವಿಷಯಗಳ ಸಂಯೋಜನೆ ಪಡೆದ ವಿದ್ಯಾರ್ಥಿಗಳಿಗೆ ಪ್ರವೇಶಾರ್ಹತೆ ದೊರೆಯುತ್ತದೆ. ಈ ಕೋರ್ಸಿನಲ್ಲಿ ಮೊದಲನೆಯ ವರ್ಷ ಜನರಲ್ ಫಾರ್ಮಸಿ, ಡಿಸ್ಪೆನ್ಸಿಂಗ್ ಫಾರ್ಮಸಿ, ಫಾರೆನ್ಸಿಕ್ ಫಾರ್ಮಸಿ, ಫಾರ್ಮಾಕಾಲಜಿ ಮೊದಲಾದ ವಿಷಯಗಳನ್ನು ಅಭ್ಯಾಸ ಮಾಡಬೇಕಾಗುತ್ತದೆ. ಬಿ. ಎಸ್‌ಸಿ. ೧ ಪರೀಕ್ಷೆ ಪಾಸಾದವರಿಗೆ ಅಥವಾ ಇಂಟರ್ ಫಾರ್ಮಸಿ ಪಾಸಾದವರಿಗೆ ಮೊದಲನೆಯ ವರ್ಷ ಫಾರೆನ್ಸಿಕ್ ಫಾರ್ಮಸಿ ಹಾಗೂ ಡಿಸ್ಪೆನ್ಸಿಂಗ್ ಫಾರ್ಮಸಿಗಳ ಅಭ್ಯಾಸದಿಂದ ವಿಮುಕ್ತತೆ (Exemption)ಯಿದೆ. ಎರಡನೆಯ ವರ್ಷ ಉತ್ಪಾದನೆಯ ಫಾರ್ಮಸಿ, ಔಷಧಗಳನ್ನು ತಯಾರಿಸುವ ರೀತಿ, ಸೂಕ್ಷ್ಮಜೀವಾಣುವಿಜ್ಞಾನ, ಜೀವರಸಾಯನ ವಿಜ್ಞಾನ, ಆರೋಗ್ಯ

ಶಾಸ್ತ್ರ, ಔಷಧೀಯಶಾಸ್ತ್ರ, ಮಾರುಕಟ್ಟೆಯ ಶಾಸ್ತ್ರ ಈ ಮೊದಲಾದ ವಿಷಯಗಳನ್ನು ಅಭ್ಯಾಸ ಮಾಡಬೇಕಾಗುತ್ತದೆ. ಈ ಕೋರ್ಸಿನ ಕೊನೆಯ ವರ್ಷದಲ್ಲಿ ಔಷಧ, ತಾಂತ್ರಿಕವಿಜ್ಞಾನ, ಔಷಧಿಕ ಸೂಕ್ಷ್ಮ ಜೀವವಿಜ್ಞಾನ, ಔಷಧ-ಇಂಜನಿಯರಿಂಗ್, ಉಚ್ಚ ಔಷಧ, ರಸಾಯನಶಾಸ್ತ್ರ, ಔಷಧ ಪ್ರಭಾವ ವಿಜ್ಞಾನ ಮೊದಲಾದ ವಿಷಯಗಳನ್ನು ಕಲಿಯಬೇಕಾಗುತ್ತದೆ. ಶಿಕ್ಷಣ ಪೂರ್ತಿಯಾದ ಬಳಿಕ ಯಾವುದೊಂದು ಔಷಧ ತಯಾರಿಸುವ ಕಾರಖಾನೆಯಲ್ಲಿ ಮೂರು ತಿಂಗಳ ಕಡ್ಡಾಯದ ತರಬೇತಿ ಪಡೆದ ಬಳಿಕವೇ ಪದವೀ ಪ್ರಾಪ್ತಿಯಾಗುತ್ತದೆ.

೨) ಇದೇ ಕೋರ್ಸಿನ ಉಚ್ಚ ಶಿಕ್ಷಣದ ಕೋರ್ಸಿನ ಅವಧಿಯು ಎರಡಾ ವರ್ಷದ್ದಿರುತ್ತದೆ. ಈ ಪರೀಕ್ಷೆಯು ಕೆಲವೊಂದು ನಿರ್ದಿಷ್ಟ ವಿಷಯಗಳಲ್ಲಿ ಹೆಚ್ಚಿನ ಪರಿಣತಿಯನ್ನು ಪಡೆಯಬಹುದು. ಇನ್ನು ಫಲಜ್ಯೋತಿಷ್ಯದಲ್ಲಿ ಈ ಕೋರ್ಸಿನ ಕಾರಕಗ್ರಹಗಳಾವವೆಂಬುದನ್ನು ನೋಡುವಾ.

ಕಾರಕಗ್ರಹ :— ಮೇಲೆ ಹೇಳಿದ ಎಲ್ಲ ವಿಷಯಗಳಿಗೂ ಕಾರಕಗ್ರಹವೆಂದರೆ ಶನಿ-ಚಂದ್ರರು. ಶನಿ-ಚಂದ್ರರು ಪೋಷಕರೂ, ಪೂರಕರೂ ಇರದೆ ಯಾವ ವಿದ್ಯಾರ್ಥಿಯೂ ಈ ಕೋರ್ಸಿನಲ್ಲಿ ತಜ್ಞತೆ ಪಡೆಯಲಾರನು. ಏಕೆಂದರೆ ಔಷಧವನ್ನು ತಯಾರಿಸುವ ಕೆಲಸ ಬಹಳ ಕಷ್ಟಕರವಾದದ್ದೂ, ಸೂಕ್ಷ್ಮವೂ ಇರುತ್ತದೆ. ಆಯುರ್ವೇದದ ಪದ್ಧತಿಯ ಭಟ್ಟಿಗಳಿಂದಾಗಲಿ ಅಥವಾ ಅಲೋಪಥಿಯ ಕಾರಖಾನೆಯಲ್ಲಿಯೇ ಆಗಲಿ ರಸಾಯನ ಮಿಶ್ರಣವನ್ನು ಮಾಡುವಾಗ ದ್ರವ್ಯಗಳ ಪ್ರಮಾಣದಲ್ಲಿ ಒಂದು ಹನಿ ಕೂಡ ಹೆಚ್ಚು-ಕಡಿಮೆಯಾಗದಂತೆ ದಕ್ಷತೆ ವಹಿಸಬೇಕಾಗುವದು. ಈ ಕೆಲಸ ತುಂಬ ಎಚ್ಚರಿಕೆಯಿಂದ ಮಾಡಬೇಕಾಗುತ್ತದೆ. ಅದರಲ್ಲಿಯೂ ವಿಷಾರಿ ಗುಣಧರ್ಮದ ಔಷಧವನ್ನು ಬಳಸುವಾಗ ಬಹಳ ಎಚ್ಚರ ವಹಿಸಬೇಕಾಗುತ್ತದೆ. ಇದು ಜಾತಕದಲ್ಲಿ ಚಂದ್ರನು ಪೋಷಕನಿರದೆ ಸಾಧಿಸದು. ಇದರಂತೆಯೇ ಈ ಕೋರ್ಸಿನಲ್ಲಿಯ ರಸಾಯನಶಾಸ್ತ್ರ, ಶರೀರಸ್ವಾಸ್ಥ್ಯ, ಫಾರೆನ್ಸಿಕ್ ಫಾರ್ಮಸಿ ಮೊದಲಾದ ವಿಷಯಗಳ ಕಾರಕಗ್ರಹವಾದ ಶನಿಯೂ ಜಾತಕದಲ್ಲಿ ಪೋಷಕನಿರಬೇಕು. ಚಂದ್ರ-ಶನಿಯರ ತರುವಾಯ ರವಿಯನ್ನೂ

ಪರಿಶೀಲಿಸಬೇಕಾಗುತ್ತದೆ. ಏಕೆಂದರೆ ಈ ಕೋರ್ಸಿನಲ್ಲಿ ಶರೀರಶಾಸ್ತ್ರ, ಜೀವಕಾರ್ಯವಿಜ್ಞಾನ ಮೊದಲಾದ ವಿಷಯಗಳ ಅಭ್ಯಾಸ ಮಾಡಬೇಕಾಗುತ್ತದೆ. ಈ ವಿಷಯಗಳ ಕಾರಕಗ್ರಹವಾದ ರವಿಯೂ ಜಾತಕದಲ್ಲಿ ಪೋಷಕನಿರಬೇಕು. ರವಿಯು ಕೇವಲ ರಾಶಿಬಲದವನಿದ್ದರೆ ಸಾಕು. ಶನಿ–ಚಂದ್ರರು ಮಾತ್ರ ರಾಶಿಬಲದವರೂ, ಸ್ಥಾನಬಲದವರೂ, ಯೋಗಕಾರಕರೂ ಇದ್ದು ಜಾತಕದಲ್ಲಿ ಬಲಾಢ್ಯರಿರಬೇಕು.

ಸ್ಥಾನ :— ಸ್ಥಾನ ದೃಷ್ಟಿಯಿಂದ ಪರಿಶೀಲಿಸಿದರೆ ತೃತೀಯ ಸ್ಥಾನವೇ ಈ ಕೋರ್ಸಿನ ಕಾರಕಸ್ಥಾನವಿರುತ್ತದೆ. ಏಕೆಂದರೆ ಔಷಧಗಳನ್ನು ತಯಾರಿಸುವದು, ಕುಟ್ಟುವದು, ಜೀಟುಕುಟ್ಟುವದು, ಜತನದಿಂದ ಕಾಪಾಡುವದು, ಭಟ್ಟಿ ಹಾಗೂ ಕಾರಖಾನೆಗಳಲ್ಲಿ, ಫಾರ್ಮಸಿಯಲ್ಲಿ ಪ್ರಾತ್ಯಕ್ಷಿಕವಾಗಿ ಕಾರ್ಯ ಮಾಡುವದು ಇವೇ ಪ್ರಮುಖ ವಿಷಯಗಳಿರುವದರಿಂದ ತೃತೀಯಸ್ಥಾನ, ತೃತೀಯೇಶ ಪೋಷಕರಿರದೆ ಯಾರಿಗೂ ಈ ಕೋರ್ಸಿನಲ್ಲಿ ತಜ್ಞತೆ ಸಿಗಲಾರದು. ತೃತೀಯದ ನಂತರ ವೃತ್ತಿಸ್ಥಾನವಾದ ಷಷ್ಠಸ್ಥಾನ, ಷಷ್ಠೇಶರ ಬಲಾಬಲವನ್ನೂ ಪರಿಶೀಲಿಸಬೇಕು.

ಲಗ್ನ :— ಲಗ್ನದ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ವೃಷಭ, ಕರ್ಕ, ತುಲಾ, ವೃಶ್ಚಿಕ, ಮಕರ, ಕುಂಭ, ಮೀನ ಈ ಲಗ್ನದವರೇ ಈ ಕೋರ್ಸಿನಲ್ಲಿ ಪಳಗಿದವರಿದ್ದುದು ಕಂಡುಬರುತ್ತದೆ.

ರಾಶಿ :— ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ರಸಾಯನಿಕ ಕೆಲಸದಂತಹ ಸೂಕ್ಷ್ಮ ವಿಷಯಗಳನ್ನು ತಿಳಿದುಕೊಳ್ಳುವದಾಗಲೀ, ಔಷಧಗಳ ಗುಣಧರ್ಮಗಳನ್ನು ತಿಳಿದುಕೊಂಡು ತಯಾರಿಸುವ ಕೆಲಸವಾಗಲಿ ನಾಜೂಕದ್ದು ಇರುವದರಿಂದ ಮಿಥುನ, ತುಲಾ, ಕುಂಭ ಈ ರಾಶಿಯವರು ಈ ಕೋರ್ಸಿನಲ್ಲಿ ಒಳ್ಳೆಯ ದಕ್ಷರಿರುತ್ತಾರೆ. ಈ ರಾಶಿಯವರ ನಂತರ ವೃಷಭ, ಕರ್ಕ, ಕನ್ಯಾ, ಮೀನ, ಈ ರಾಶಿಯವರೂ ಈ ಕೋರ್ಸಿನಲ್ಲಿ ಪಳಗಿದವರಿದ್ದುದು ಕಂಡುಬರುತ್ತದೆ.

೨. ದಂತವೈದ್ಯ ಕೋರ್ಸ್ (ಬಿ. ಡಿ. ಎಸ್.): – ದಂತವೈದ್ಯಕೀಯ ಕೋರ್ಸನ್ನು ವ್ಯಾಸಂಗ ಮಾಡಲು ಪ್ರಥಮತಃ ವಿದ್ಯಾರ್ಥಿಯ

ಪಿ. ಯು. ಸಿ. (ವೈಜ್ಞಾನಿಕ) ಕೋರ್ಸಿನಲ್ಲಿ ಪಿ. ಸಿ. ಬಿ. ಗುಂಪಿನ ವಿಷಯಗಳ ಸಂಯೋಜನೆಯೊಂದಿಗೆ ಉತ್ತೀರ್ಣನಾಗಿ ಬಿ.ಎಸ್‌ಸಿ. ೧ರಲ್ಲಿ ತೇರ್ಗಡೆಯಾಗಬೇಕು. ಆಗ ಅವನಿಗೆ ಈ ಕೋರ್ಸಿನ ಪ್ರವೇಶಾರ್ಹತೆ ದೊರೆಯುತ್ತದೆ. ಇನ್ನು ಫಲಜ್ಯೋತಿಷ್ಯದ ಮೇರೆಗೆ ಈ ಕೋರ್ಸಿನ ಕಾರಕಗ್ರಹ, ಲಗ್ನ, ಸ್ಥಾನಾದಿಗಳಾವವೆಂಬುದನ್ನು ಪರಿಶೀಲಿಸುವಾ.

ಕಾರಕಗ್ರಹ :— ಪಿ. ಸಿ. ಬಿ. ಗುಂಪಿನ ವಿಷಯಗಳ ಸಂಯೋಜನೆಯೇ ಈ ಕೋರ್ಸಿನ ಅರ್ಹತೆಗೆ ಅವಕಾಶ ಕೊಡುವದರಿಂದ ರವಿ-ಶನಿ-ಚಂದ್ರರು ಈ ಕೋರ್ಸಿನ ಕಾರಕಗ್ರಹಗಳು. ಅದರಲ್ಲಿಯೂ ರವಿ–ಶನಿಯರೇ ಹೆಚ್ಚು ಕಾರಕಗ್ರಹಗಳಿರುತ್ತಾರೆ. ಏಕೆಂದರೆ ದಂತವಿಕಾರವಾಗಲು ಅಸ್ಥಿಯಲ್ಲಿಯ ವಿಕೃತಿಯೇ ಕಾರಣವೆಂದು ಆಯುರ್ವೇದ ಶಾಸ್ತ್ರದ ಅಭಿಪ್ರಾಯ. ಅಸ್ಥಿಯ ಮೇಲೆ ರವಿಯೂ ಕಾರಕನಾಗಿರುತ್ತಾನೆ; ಇದರಂತೆಯೇ ಈ ಕೋರ್ಸಿನಲ್ಲಿ ಒಸಡಿಗಳ ಬಾಯುವಿಕೆಯ ಕಾರಣ ಕೀವು, ಶೂಲಿ ಮೊದಲಾದ ವಿಕೃತಿಗೆ ಕಾರಣಗಳಾವವು, ಇವೇ ಮೊದಲಾದ ವಿಷಯಗಳನ್ನು ಇಲ್ಲಿ ಕಲಿಸಬೇಕಾಗುತ್ತದೆ. ಈ ವಿಷಯಗಳ ಮೇಲೆ ಶನಿಯು ಕಾರಕನಿರುತ್ತಾನೆ. ಇದಲ್ಲದೆ ಕೋರ್ಸಿನ ಹೆಸರೇ ಸೂಚಿಸುವಂತೆ ಅಂದರೆ "ಡೆಂಟಲ್ ಸರ್ಜರಿ" ಅರ್ಥಾತ್ ಸರ್ಜರಿ ವಿಷಯವೇ ಮುಖ್ಯವಿರುವದರಿಂದ ಸರ್ಜರಿ ಕಾರಕ ಗ್ರಹವಾದ ಕುಜನೂ ಈ ಕೋರ್ಸಿನ ಕಾರಕಗ್ರಹವಿರುತ್ತಾನೆ.

ಲಗ್ನ :— ಲಗ್ನದ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ವೃಷಭ, ಕರ್ಕ, ಸಿಂಹ, ತುಲಾ, ವೃಶ್ಚಿಕ, ಧನು, ಮಕರ ಈ ಲಗ್ನದವರೇ ಈ ಕೋರ್ಸಿನಲ್ಲಿ ಪಳಗಿದವರಿದ್ದುದು ಕಂಡುಬರುತ್ತದೆ.

ಸ್ಥಾನ :— ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ಪ್ರಾತ್ಯಕ್ಷಿಕೆಯ ಜ್ಞಾನವೇ ಮುಖ್ಯವಿರುವದರಿಂದ ತೃತೀಯಸ್ಥಾನವೂ, ಇದೊಂದು ವೃತ್ತಿ ತಕ್ಷಣವಿರುವದರಿಂದ ಷಷ್ಠಸ್ಥಾನವೂ ಕಾರಕಸ್ಥಾನಗಳಿರುತ್ತವೆ. ಆದ್ದರಿಂದ ಈ ಸ್ಥಾನಾಧೀಶರೂ, ಈ ಸ್ಥಾನಗಳೂ ಪೋಷಕರಿದ್ದ ವಿದ್ಯಾರ್ಥಿಗಳು ಈ ಕೋರ್ಸಿನಲ್ಲಿ ಪ್ರವೀಣರಿರುತ್ತಾರೆ.

ರಾಶಿ :— ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ಮಿಥುನ, ಸಿಂಹ, ತುಲಾ, ವೃಶ್ಚಿಕ, ಧನು, ಮಕರ, ಕುಂಭ ಈ ರಾಶಿಯವರೇ ಈ ಕೋರ್ಸಿನಲ್ಲಿ ಹೆಚ್ಚು ಪಳಗಿದವರಿದ್ದದ್ದು ಕಂಡುಬರುತ್ತದೆ. ಇನ್ನು ಬಿ. ವಿ. ಎಸ್. ಕೋರ್ಸಿನ ವಿಷಯವಾಗಿ ಪ್ರತ್ಯೇಕವಾಗಿ ಪರಿಶೀಲಿಸುವಾ.

## ನರ್ಸಿಂಗ್, ಕಂಪೌಂಡರ್ ಹಾಗೂ ವಿಭಿನ್ನ ಟೆಕ್ನಿಶಿಯನ್ಸ್ ಕೋರ್ಸುಗಳು

ವೈದ್ಯಕೀಯ ಪದವಿ, ಸ್ನಾತಕೋತ್ತರ ಶಿಕ್ಷಣಗಳು ಒಂದು ಬಗೆಯ ವೈದ್ಯಕೀಯ ಶಿಕ್ಷಣವಾದರೆ ವೈದ್ಯಕೀಯ ರಂಗದಲ್ಲಿ ಪ್ರಾಯೋಗಿಕ, ಪ್ರಾತ್ಯಕ್ಷಿಕ ಹಾಗೂ ಕ್ರಿಯಾತ್ಮಕ ಔಷಧೋಪಚಾರಕ್ಕಾಗಿ ಬೇರೆ ವಿಶಿಷ್ಟ ಸಿಬ್ಬಂದಿಯೇ ಬೇಕಾಗುತ್ತದೆ. ಈ ಸಿಬ್ಬಂದಿಯ ತಯಾರಿಕೆಯು ಒಂದು ವಿಶೇಷ ಕಾರ್ಯವೇ ಇದ್ದು ಇದೂ ಕೂಡ ವೈದ್ಯಕೀಯ ಶಿಕ್ಷಣವೇ ಇರುತ್ತದೆ. ಈ ವಿಧವಾದ ಶಿಕ್ಷಣಕ್ಕೆ ಕೇವಲ ಎಸ್. ಎಸ್. ಎಲ್. ಸಿ. ಯಲ್ಲಿ ವೈಜ್ಞಾನಿಕ ವಿಷಯಗಳನ್ನು ಆಯ್ದುಕೊಂಡ ವಿದ್ಯಾರ್ಥಿಗಳು ಪ್ರವೇಶ ಪಡೆಯಬಹುದು. ಈ ಶಿಕ್ಷಣವನ್ನು ಮೂರು ಮುಖ್ಯ ವಿಭಾಗಗಳನ್ನಾಗಿ ಮಾಡಬಹುದು.

೧) ನರ್ಸಿಂಗ ಕೋರ್ಸು
೨) ಕಂಪೌಂಡರ್ ಕೋರ್ಸ
೩) ವಿಭಿನ್ನ ಟೆಕ್ನಿಶಿಯನ್ ಕೋರ್ಸುಗಳು

ಹೀಗೆ ಮೂರು ಪ್ರಕಾರದ ಕೋರ್ಸುಗಳಲ್ಲಿ ತಜ್ಞತೆ ಪಡೆಯಲು ಜಾತಕವೆಂತಿರಬೇಕು, ಕಾರಕಗ್ರಹ, ಲಗ್ನ, ಸ್ಥಾನಾದಿಗಳೆಂತಿರಬೇಕು ಎಂಬುದನ್ನು ಪ್ರತ್ಯೇಕವಾಗಿ ಪರಿಶೀಲಿಸುವಾ.

೧. ನರ್ಸಿಂಗ ಕೋರ್ಸು :— ಈ ಕೋರ್ಸು ಮೂರು ವರ್ಷ ಒಂಬತ್ತು ತಿಂಗಳ ಅವಧಿಯದಿರುತ್ತದೆ. ಕೆಲವು ಕಡೆ ಎರಡು ವರ್ಷಗಳ ಅವಧಿಯದು ಇರುತ್ತದೆ. ಈ ಅವಧಿಯಲ್ಲಿ ಫಿಜಿಯಾಲಜಿ, ನರ್ಸಿಂಗ್, ಮಿಡ್‌ವೈಫರಿ, ಎನಾಟಮಿ, ಮೆಡಿಸಿನ್ ಮೊದಲಾದ ವಿಷಯಗಳನ್ನು ಕಲಿಸುವದರೊಡನೆ ರೋಗಿಗಳಿಗೆ ಉಪಚಾರ ಮಾಡುವ ಪ್ರಾಯೋಗಿಕ

ಶಿಕ್ಷಣವನ್ನು ನೀಡಲಾಗುತ್ತದೆ. ಈ ಕೋರ್ಸನ್ನು ಮುಗಿಸಿದ ಅಭ್ಯರ್ಥಿಗಳು ಸ್ಟಾಫ್ ನರ್ಸ ಹುದ್ದೆಗೆ ಅರ್ಹರಾಗುತ್ತಾರೆ. ಈ ಕೋರ್ಸಿನ ನಂತರ ಎರಡು ವರ್ಷಗಳ ಅವಧಿಯ ಡಿಪ್ಲೊಮಾ ಇನ್ ನರ್ಸಿಂಗ ಕೋರ್ಸಿಗೆ ಅರ್ಹತೆ ಪಡೆಯುತ್ತಾರೆ. ಈ ಡಿಪ್ಲೊಮಾ ಕೋರ್ಸನ್ನು ಪಾಸಾದವರು ಟ್ಯೂಟರ್, ಮೆಟ್ರನ್ಸ. ಹುದ್ದೆಗಳಿಗೆ ಅರ್ಹರಾಗುತ್ತಾರೆ. ಇಷ್ಟೊಂದು ಈ ಕೋರ್ಸಿನ ಹಿನ್ನೆಲೆಯಲ್ಲಿ ಜ್ಯೋತಿಷ್ಯದ ವಿಚಾರವೇನು ಎಂಬುದನ್ನು ಪರಿಶೀಲಿಸುವಾ.

ಕಾರಕಗ್ರಹ :— ಜೀವಶಾಸ್ತ್ರವಿಜ್ಞಾನ, ಶರೀರಶಾಸ್ತ್ರ ಈ ಮೊದಲಾದ ವಿಷಯಗಳ ಕಾರಕಗ್ರಹವಾದ ರವಿಯೂ, ಮಿಡ್‌ವೈಫರಿ, ನರ್ಸಿಂಗ, ಔಷಧಿ ಶಾಸ್ತ್ರ ಮೊದಲಾದ ವಿಷಯಗಳ ಕಾರಕಗ್ರಹವಾದ ಚಂದ್ರನೂ ಈ ಕೋರ್ಸಿನ ಕಾರಕಗ್ರಹಗಳಿರುತ್ತಾರೆ.

ಸ್ಥಾನ :— ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ತೃತೀಯಸ್ಥಾನವೇ ಈ ಕೋರ್ಸಿನ ಕಾರಕಸ್ಥಾನವಿರುತ್ತದೆ. ಆದುದರಿಂದ ತೃತೀಯಸ್ಥಾನ ಹಾಗೂ ತೃತಿಯೇಶರು ಪೋಷಕರಿರದೆ ಯಾವ ವಿದ್ಯಾರ್ಥಿಯೂ ಈ ಕೋರ್ಸಿನಲ್ಲಿ ತಜ್ಞನಾಗುವದಿಲ್ಲ.

ಲಗ್ನ :— ಲಗ್ನದ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ವೃಷಭ, ಕರ್ಕ, ಸಿಂಹ, ತುಲಾ, ವೃಶ್ಚಿಕ, ಧನು, ಮೀನ ಈ ಲಗ್ನದ ವಿದ್ಯಾರ್ಥಿಗಳೇ ಈ ಕೋರ್ಸಿನಲ್ಲಿ ತಜ್ಞರಿರುವದು ಕಂಡುಬರುತ್ತದೆ.

ರಾಶಿ :— ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ಮಿಥುನ, ತುಲಾ, ವೃಶ್ಚಿಕ, ಧನು, ಮಕರ, ಕುಂಭ ಈ ರಾಶಿಯವರೇ ಈ ಕೋರ್ಸಿನಲ್ಲಿ ತಜ್ಞತೆ ಪಡೆದಿರುವದು ಕಂಡುಬರುತ್ತದೆ. ಇನ್ನೊಂದು ಮಹತ್ವದ ಅಂಶ ವೆಂದರೆ ಪುರುಷ ನರ್ಸರು (Male Nurses) ಹೆಚ್ಚಾಗಿ ವೃಷಭ, ಕರ್ಕ, ಕನ್ಯಾ, ಮೀನ ಈ ರಾಶಿಯವರೇ ಇರುವರಲ್ಲದೆ ಅನೇಕ ಗ್ರಹಗಳು ಸ್ತ್ರೀರಾಶಿ ಯಲ್ಲಿರುತ್ತವೆ. ಅದರ ವಿರುದ್ಧ ಸ್ತ್ರೀ ನರ್ಸಗಳು (Female Nurses) ಮೇಷ, ಮಿಥುನ, ಸಿಂಹ, ತುಲಾ, ವೃಶ್ಚಿಕ, ಧನು, ಮಕರ, ಕುಂಭ ಈ ರಾಶಿಯವರಿರುವರಲ್ಲದೆ ಇವರ ಜಾತಕದಲ್ಲಿ ಅನೇಕ ಗ್ರಹಗಳು ಪುರುಷ ರಾಶಿಯಲ್ಲಿರುತ್ತವೆ.

೨. ಕಾಂಪೌಂಡರ ಕೋರ್ಸು :— ಕಾಂಪೌಂಡರ ಕೋರ್ಸು ಒಂದು ವರ್ಷದ ಅವಧಿಯದಿದ್ದು ಎಸ್. ಎಸ್. ಎಲ್. ಸಿ.ಯಲ್ಲಿ ವಿಜ್ಞಾನದ ವಿಷಯವನ್ನು ತೆಗೆದುಕೊಂಡು ಉತ್ತೀರ್ಣರಾದವರು ಈ ಕೋರ್ಸಿಗೆ ಅರ್ಹರಾಗುತ್ತಾರೆ. ಇಲ್ಲಿ ಬಾಯೋಕೆಮಿಸ್ಟ್ರಿ, ಫಾರ್ಮಾಕಾಲಜಿ, ಫಾರ್ಮಸಿ (ಡಗ್ಸ್) ಔಷಧವನ್ನು ತಯಾರಿಸುವ ಕ್ರಮ ಇವೇ ಮೊದಲಾದ ವಿಷಯ ಗಳನ್ನು ಕಲಿಸಲಾಗುತ್ತದೆ.

ಕಾರಕಗ್ರಹ :— ಔಷಧಶಾಸ್ತ್ರ ಮತ್ತು ಔಷಧಗಳಿಗೆ ಸಂಬಂಧಿಸಿದ ವಿಷಯಗಳನ್ನೇ ಮುಖ್ಯವಾಗಿ ಕಲಿಯಬೇಕಾಗುತ್ತದೆ. ಆದುದರಿಂದ ಶನಿ ಚಂದ್ರರೇ ಈ ಕೋರ್ಸಿನ ಕಾರಕಗ್ರಹಗಳು. ಈ ಗ್ರಹಗಳು ಪೋಷಕರಿರದೆ ಯಾವ ವಿದ್ಯಾರ್ಥಿಯೂ ಈ ಕೋರ್ಸಿನಲ್ಲಿ ತಜ್ಞತೆ ಪಡೆಯಲಾರನು.

ಸ್ಥಾನ :— ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ತೃತೀಯಸ್ಥಾನವೇ ಈ ಕೋರ್ಸಿನ ಕಾರಕಸ್ಥಾನವಿರುತ್ತದೆ. ಆದುದರಿಂದ ಈ ಸ್ಥಾನ ಹಾಗೂ ಸ್ಥಾನಾಧೀಶರು ಪೋಷಕರಿರದೆ ಯಾವ ವಿದ್ಯಾರ್ಥಿಯೂ ಈ ಕೋರ್ಸನ್ನು ಪೂರ್ಣಗೊಳಿಸಲಾರನು.

ಲಗ್ನ :— ಲಗ್ನದ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ವೃಷಭ, ಕರ್ಕ, ಸಿಂಹ, ತುಲಾ, ವೃಶ್ಚಿಕ, ಕುಂಭ, ಮೀನ ಈ ಲಗ್ನದವರೇ ಈ ಕೋರ್ಸಿನಲ್ಲಿ ಪಳಗಿದವರಿದ್ದುದು ಕಂಡುಬರುತ್ತದೆ.

ರಾಶಿ :— ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ಮಿಥುನ, ತುಲಾ, ಕುಂಭ ಈ ರಾಶಿಯ ವಿದ್ಯಾರ್ಥಿಗಳು ಹಾಗೂ ವೃಷಭ, ಕರ್ಕ, ಕನ್ಯಾ, ಮೀನ ಈ ರಾಶಿಗಳ ವಿದ್ಯಾರ್ಥಿಗಳು ಈ ಕೋರ್ಸಿನಲ್ಲಿ ಪ್ರವೀಣರಿದ್ದದ್ದು ಕಂಡುಬರುತ್ತದೆ.

೩. ವಿವಿಧ ಟೆಕ್ನಿಶಿಯನ್ ಕೋರ್ಸುಗಳು :— ಎಸ್. ಎಸ್. ಎಲ್. ಸಿ.ಯಲ್ಲಿ ವಿಜ್ಞಾನ ವಿಷಯಗಳ ಸಂಯೋಜನೆಯ ವಿಷಯಗಳನ್ನು ತೆಗೆದುಕೊಂಡು ಉತ್ತೀರ್ಣರಾದವರು ವಿವಿಧ ಟೆಕ್ನಿಶಿಯನ್ ಕೋರ್ಸಿಗೆ ಅರ್ಹರಾಗುತ್ತಾರೆ. ಇದರಂತೆಯೇ ಪಿ. ಯು. ಸಿ.ಯಲ್ಲಿ ಪಿ. ಸಿ. ಬಿ. ಗುಂಪಿನ ವಿಷಯವನ್ನು ತೆಗೆದುಕೊಂಡವರು ಕೂಡ ಅರ್ಹರಿರುತ್ತಾರೆ. ಈ

ಕೋರ್ಸುಗಳು ಒಂದು ವರ್ಷದ ಅವಧಿಯವಿರುತ್ತವೆ. ಈ ಕೋರ್ಸುಗಳು ಸಾಮಾನ್ಯವಾಗಿ ಐದು ಪ್ರಕಾರದವಿರುತ್ತವೆ. ೧) ಎಕ್ಸರೇ ಟೆಕ್ನಿಶಿಯನ್, ೨) ಫಿಜಿಯೋಥೆರಪೀ, ೩) ಲ್ಯಾಬೋರೇಟರಿ ಟೆಕ್ನಿಶಿಯನ್, ೪) ಲೆಪ್ರಸೀ-ಟ್ಯುಬರ್ ಕುಲಾಸಿಸ್ ಟೆಕ್ನಿಶಿಯನ್, ೫) ವ್ಯಾಕ್ಸಿನೇಟರ್. ಈ ಕೋರ್ಸುಗಳ ವಿಷಯವಾಗಿ ಜ್ಯೋತಿಷ್ಯದ ವಿಚಾರವೇನು ಎಂಬುದನ್ನು ಪರಿಶೀಲಿಸುವಾ.

ಕಾರಕಗ್ರಹ:— ಈ ವಿಭಿನ್ನ ಅಲ್ಪಾವಧಿ ಕೋರ್ಸುಗಳ ವಿದ್ಯಾರ್ಥಿಗಳಿಗೆ ವಿಷಯಗಳು ವಿಭಿನ್ನವಿರುವದರಿಂದ ಕಾರಕಗ್ರಹಗಳೂ ವಿಭಿನ್ನವಿರುತ್ತವೆ. ಹೇಗೆಂದರೆ ಎಕ್ಸರೇ ಟೆಕ್ನಿಸಿಯನ್ ಕೋರ್ಸಿಗೆ ಭೌತಶಾಸ್ತ್ರವೇ ಪ್ರಾಮುಖ್ಯವಿರುವದರಿಂದ ಋಜನೇ ಈ ಕೋರ್ಸಿನ ಕಾರಕಗ್ರಹವಿರುತ್ತಾನೆ. ಲ್ಯಾಬೋರೇಟರಿ ಟೆಕ್ನಿಶಿಯನ್ ಕೋರ್ಸಿಗೆ ಫಾರ್ಮಾಕಾಲಜಿ, ಫಿಜಿಯಾಲಜಿ, ಪಥಾಲಜಿ, ಬಯೋಫಿಜಿಕ್ಸ್ (ಜೀವಭೌತಶಾಸ್ತ್ರ), ಜೀವ-ರಸಾಯನಶಾಸ್ತ್ರ, ಹೆಮೆಟಾಲಜಿ-ಬ್ಲಡ್ ಇವೇ ಮೊದಲಾದ ವಿಷಯಗಳನ್ನು ಕಲಿಯಬೇಕಾಗುವದರಿಂದ ರವಿ-ಶನಿ-ಚಂದ್ರರೇ ಕಾರಕರಿರುತ್ತಾರೆ. ಇದರಂತೆ ಲೆಪ್ರಸಿ, ಟ್ಯುಬರ್ಕ್ಯುಲಾಸಿಸ್ ಮೊದಲಾದ ವಿಭಿನ್ನ ರೋಗಗಳ ಟೆಕ್ನಿಶಿಯನ್ ಕೋರ್ಸಿಗೆ ರವಿ-ಶನಿ-ಚಂದ್ರರು ಕಾರಕರಿರುತ್ತಾರೆ. ಇನ್ನು ಯಾವುದೇ ವ್ಯಾಕ್ಸಿನೇಟರ್ ಕೋರ್ಸಿಗೆ ಕೇವಲ ಶನಿಯೋರ್ವನೇ ಕಾರಕನು. ಹೀಗೆ ಈ ವಿಭಿನ್ನ ಅಲ್ಪಾವಧಿ ಕೋರ್ಸಿಗೆ ವಿಭಿನ್ನ ಗ್ರಹಗಳು ಕಾರಕರಿರುತ್ತಾರೆ.

ಸ್ಥಾನ :— ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ಪ್ರಾತ್ಯಕ್ಷಿಕೆಯೇ ಪ್ರಾಧಾನ್ಯವಿರುವ ಈ ಕೋರ್ಸುಗಳಿಗೆ ತೃತೀಯಸ್ಥಾನ, ತೃತೀಯೇಶ ಪೋಷಕರರದೆ ಯಾವ ವಿದ್ಯಾರ್ಥಿಯೂ ಈ ಕೋರ್ಸಿನಲ್ಲಿ ತಜ್ಞನಾಗಲಾರನು.

ಲಗ್ನ :— ಲಗ್ನದ ದೃಷ್ಟಿಯಿಂದ ಪರಿಶೀಲಿಸಿದರೆ ವೃಷಭ, ಮಿಥುನ, ಕರ್ಕ, ಕನ್ಯಾ, ತುಲಾ, ವೃಶ್ಚಿಕ, ಮಕರ, ಕುಂಭ, ಮೀನ ಈ ಲಗ್ನದವರೇ ಹೆಚ್ಚಾಗಿರುವದು ಕಂಡುಬರುತ್ತದೆ.

ರಾಶಿ:— ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ವೃಷಭ, ಮಿಥುನ,

ಕರ್ಕ, ಕನ್ಯಾ, ತುಲಾ, ಕುಂಭ, ಮೀನ ಈ ರಾಶಿಯವರೇ ಈ ಕೋರ್ಸಿನಲ್ಲಿ ಪಳಗಿದವರಿದ್ದುದು ಕಂಡುಬರುತ್ತದೆ.

## ೨. ಆಯುರ್ವೇದ ಕೋರ್ಸುಗಳು

## ( ಬಿ. ಎಸ್. ಎ. ಎಮ್. ಕೋರ್ಸುಗಳು )

ಭಾರತದಲ್ಲಿ ಆಯುರ್ವೇದದಷ್ಟು ಪುರಾತನವಾದ ಯಾವುದೇ ವೈದ್ಯ ಶಾಸ್ತ್ರವು ಇಲ್ಲವೆಂದು ಹೇಳಿದರೆ ಆಶ್ಚರ್ಯವಾಗಬೇಕಿಲ್ಲ. ಏಕೆಂದರೆ ಆಯುರ್ದಾಯ ವಿವೇಚನೆಯನ್ನು ಮಾಡುವ ವಿದ್ಯೆಯೇ ಆಯುರ್ವೇದವು. ಆದರೆ ಇಂದಿನ ಶಿಕ್ಷಣಪದ್ಧತಿಯ ಚೌಕಟ್ಟಿನಲ್ಲಿ ಆಯುರ್ವೇದಕ್ಕೆ ಎಂದು ಸ್ಥಾನ ಸಿಕ್ಕಿತು ಎಂದು ತಿಳಿಯಲು ಪರಿಶೋಧನೆ ಮಾಡಬೇಕಾಗುತ್ತದೆ. ಬಹು ಪುರಾತನ ಕಾಲದಿಂದ ಅಂದರೆ ತ್ರೇತಾಯುಗ, ದ್ವಾಪರಯುಗದ ಕಿಂತಲೂ ಪೂರ್ವದಿಂದಲೂ ಋಷಿ-ಮುನಿಗಳ ಮೂಲಕ ಆಯುರ್ವೇದ ಶಾಸ್ತ್ರ ವಂಶಪಾರಂಪಯವಾಗಿ ಬಂದ ಶಾಸ್ತ್ರವಿರುತ್ತದೆ. ಈಗಲೂ ಈ ಪದ್ಧತಿಯು ಕೆಲವು ಮನೆತನಗಳಲ್ಲಿ ಉಳಿದುಕೊಂಡು ಬಂದಿದೆ. ಆದುದರಿಂದಲೇ ಏಕಮೂಲಿಕಾ ಪ್ರಯೋಗದ ಅರ್ಥಾತ್ ಒಂದೊಂದೇ ಗಿಡ ಮೂಲಿಕೆಗಳಿಂದ ಒಂದೊಂದೇ ರೋಗವನ್ನು ಗುಣಮುಖಮಾಡುವ ವರ್ಗದವರನ್ನೂ ಕಾಣುತ್ತೇವೆ. ಇದರಂತೆಯೇ ವಿಶಿಷ್ಟ ಅನುಭವದ ವಿಶಿಷ್ಟ ನಿದಾನ-ಚಿಕಿತ್ಸಾ ಪದ್ಧತಿಯು ವಂಶಪಾರಂಪರ್ಯ ವೈದ್ಯರನ್ನೂ ನಾವು ಕಾಣಬಹುದು.

ಗುರುಕುಲ ಪದ್ಧತಿಯು ಹೋಗಿ ಸಂಸ್ಥೆಯ ಮೂಲಕ. ಸರಕಾರದ ಮೂಲಕ ಸಾರ್ವತ್ರಿಕವಾಗಿ ಆಯುರ್ವೇದ ಶಿಕ್ಷಣ ಪ್ರಾರಂಭವಾದದ್ದು ೨೦ನೆಯ ಶತಕದ ಪ್ರಾರಂಭದಲ್ಲಿ. ಭಾರತೀಯ ವೈದ್ಯಕೀಯ ಶಾಸ್ತ್ರದ ಉನ್ನತಿಯ ಕಡೆಗೆ ಭಾರತದ ಎಲ್ಲ ಪ್ರಾಂತದ ವೈದ್ಯರ ಲಕ್ಷ್ಯ ಹೊರಳಿತು. ಮದ್ರಾಸ, ಮುಂಬಯಿ, ಮಧ್ಯಪ್ರಾಂತ, ಹಿಂದಿನ ಹೈದರಾಬಾದ, ಪಂಜಾಬ, ಕಾಶ್ಮೀರ, ಬಂಗಾಲ, ಸಿಂಧ ಈ ಪ್ರಾಂತಗಳಲ್ಲಿ ವೈದ್ಯರು ಬಹಳವಾಗಿ ಆಂದೋಲನ ಹೂಡಿದ್ದರು. ಇಡೀ ಹಿಂದುಸ್ತಾನದಲ್ಲಿ ಆಯುರ್ವೇದದ ಪ್ರಗತಿಗಾಗಿ ಪ್ರಯತ್ನಗಳು ಪ್ರಾರಂಭವಾದವು. ಇದೇ ವೇಳೆಗೆ

ಮಹಾರಾಷ್ಟ್ರ, ಗುಜರಾಥಗಳಲ್ಲಿ ಕೂಡ ಚಟುವಟಿಕೆಗಳು ಪ್ರಾರಂಭವಾದವು. ಇಪ್ಪತ್ತನೆಯ ಶತಕದ ಮೂರನೆಯ ದಶಕದಲ್ಲಿ ಸಾತಾರ, ಪುಣೆ, ಮುಂಬಯಿ, ಬೆಳಗಾವಿ, ವಿಜಾಪುರ, ಹುಬ್ಬಳ್ಳಿ, ಬಳ್ಳಾರಿ ಮೊದಲಾದ ಸ್ಥಳಗಳಲ್ಲಿ ಆಯುರ್ವೇದ ವಿದ್ಯಾಲಯಗಳು ಸ್ಥಾಪಿತವಾದವು.

ಆಯುರ್ವೇದಕ್ಕೆ ಸರಕಾರದಿಂದ ಮಾನ್ಯತೆ ಸಿಗದ ಹೊರತು ಅದರ ಪ್ರಗತಿ, ಸಂಶೋಧನೆಗಳು ಆಗಲಾರವೆಂದು ಆಲೋಚಿಸಿ ಇದಕ್ಕೆ ಸರಕಾರದ ಮಾನ್ಯತೆ ದೊರಕಿಸುವ ಸಲುವಾಗಿ ವಿದ್ಯಾಲಯಗಳನ್ನು ನಡೆಸಿದ ವೈದ್ಯರೂ ಮತ್ತು ಆಯುರ್ವೇದದ ಅಭಿಮಾನಿಗಳೂ ನಡೆಯಿಸಿದ ಪ್ರಯತ್ನದ ಫಲವಾಗಿ ಮುಂಬಯಿ ಸರಕಾರವು ೧೯೩೮ರಲ್ಲಿ ಕಾಯ್ದೆಯನ್ನು ನಿರ್ಮಿಸಿ ಆಯುರ್ವೇದದ ಬೋರ್ಡುಗಳನ್ನು ಸ್ಥಾಪಿಸಿತು. ಮತ್ತು ಆಗಿನ ವಿದ್ಯಾಲಯಗಳಿಗೆ ಮಾನ್ಯತೆ ಕೊಟ್ಟು ದ್ರವ್ಯಸಹಾಯ ನೀಡಿತು. ಅಂದಿನಿಂದ ಅಭ್ಯಾಸಕ್ರಮ ಗೊತ್ತುಮಾಡುವದು, ಪದವಿಗಳನ್ನು ಕೊಡುವದು ಮುಂತಾದ ಕಾರ್ಯಗಳು ಪ್ರಾರಂಭವಾದವು. ಅರ್ಥಾತ್ ಗುರುಕುಲ ಶಿಕ್ಷಣ ಪದ್ಧತಿ ಹೋಗಿ ಸರಕಾರಿ ಶಿಕ್ಷಣ ಪದ್ಧತಿಯು ಜಾರಿಗೆ ಬಂದಿತು. ಮುಂಬಯಿ ಸರಕಾರವು ಮಾನ್ಯಮಾಡಿದ ಈ ಶಿಕ್ಷಣ ಪದ್ಧತಿಯಲ್ಲಿ ಆಯುರ್ವೇದ, ಪಾಶ್ಚಿಮಾತ್ಯ ವೈದ್ಯಶಾಸ್ತ್ರ ಇವುಗಳನ್ನು ಕೂಡಿಸಿದ್ದ (Integrated) ಮಿಶ್ರ ಶಿಕ್ಷಣ ಪದ್ಧತಿ ಜಾರಿಗೆ ಬಂದಿತು. ಇಂತು L. M. & S., L. A. M. S., D. A. S. F., G. F. A. M. G. C. I. M. ಮೊದಲಾದ ಕೋರ್ಸುಗಳಿದ್ದವು. ಅದರ ಮುಂದೆ ೧೯೫೪ರಲ್ಲಿ ಶ್ರೀ ಮುರಾರಜಿ ದೇಸಾಯಿಯವರು ಮುಂಬಯಿ ರಾಜ್ಯದ ಮುಖ್ಯ ಮಂತ್ರಿಗಳಿದ್ದಾಗ ಶುದ್ಧ ಆಯುರ್ವೇದ ಚಳವಳಿಯ ಪರಿಣಾಮವಾಗಿ ಶುದ್ಧ ಆಯುರ್ವೇದ ಪಠ್ಯಕ್ರಮ ನಿರ್ಮಾಣವಾಯಿತು. D. S. A. C. ಕೋರ್ಸು ಜಾರಿಯಲ್ಲಿ ಬಂದಿತು. ಮುಂದೆ ೧೯೫೬ರಲ್ಲಿ ರಾಜ್ಯ ಪುನರ್ಘಟನೆಯಾಗಿ ಮೈಸೂರು-ರಾಜ್ಯವಾದ ಬಳಿಕ ಇದೇ ಕೋರ್ಸನ್ನು ಮುಂದುವರಿಸಿದರು. ೧೯೬೭ ಜೂನ್ ತಿಂಗಳಿಂದ ಕರ್ನಾಟಕ ವಿಶ್ವವಿದ್ಯಾಲಯ ಹಾಗೂ ಬೆಂಗಳೂರು ವಿಶ್ವವಿದ್ಯಾಲಯದವರು ಆಯುರ್ವೇದದ ಪದವೀ ಪರೀಕ್ಷೆಗಳನ್ನು ಪ್ರಾರಂಭಿಸಿದ್ದಾರೆ. ಇಷ್ಟೊಂದು ಸುದೀರ್ಘವಾದ ಆಯುರ್ವೇದ ಕೋರ್ಸಿನ ಹಿನ್ನೆಲೆ

ಯಲ್ಲಿ ಜ್ಯೋತಿಷ್ಯದ ವಿಚಾರವೇನು, ಈ ಕೋರ್ಸನ್ನು ಅಧ್ಯಯನ ಮಾಡಲು ಜಾತಕವೆಂತಿರಬೇಕು, ಗ್ರಹ, ಲಗ್ನ, ಸ್ಥಾನಾದಿಗಳಾವವು, ಎಂಬುದನ್ನು ಪರಿಶೀಸುವಾ.

ಆಯುರ್ವೇದ ಕೋರ್ಸಿನ ಕಾರಕಗಳಾವವು ಎಂದು ಪ್ರಶ್ನಿಸಿದರೆ ಒಂದೇ ಶಬ್ದದಲ್ಲಿ ಉತ್ತರ ಕೊಡುವದು ಕಠಿಣ. ಏಕೆಂದರೆ ಈ ಕೋರ್ಸಿನಲ್ಲಿ ಅನೇಕ ವಿಷಯಗಳಿದ್ದು ಭಿನ್ನ ಭಿನ್ನ ವಿಷಯಗಳಿಗೆ ಭಿನ್ನ ಭಿನ್ನ ಗ್ರಹಗಳು ಕಾರಕವಿರುತ್ತವೆ. ಇದೂ ಅಲ್ಲದೆ ಯಾವುದೊಂದು ವಿಷಯಕ್ಕೆ ಅನೇಕ ಗ್ರಹಗಳು ಕಾರಕವಿರುತ್ತವೆ. ಆದುದರಿಂದ ಈ ಕೋರ್ಸಿನಲ್ಲಿ ಕಲಿಯಬೇಕಾದ ವಿಷಯಗಳಾವವು ಎಂಬುದನ್ನು ಪರಿಶೀಲಿಸಿದ ನಂತರ ಕಾರಕಗ್ರಹಗಳ ಬಗ್ಗೆ ನಿರ್ಣಯಿಸುವಾ.

**ಕಾರಕಗ್ರಹ :**— ಈ ಕೋರ್ಸಿನ ಪ್ರವೇಶಕ್ಕೆ ಪಿ.ಯು.ಸಿ. ಯಲ್ಲಿ ಪಿ.ಸಿ.ಬಿ. ಗುಂಪಿನ ವಿಷಯಗಳನ್ನು ಆಯ್ದುಕೊಳ್ಳಬೇಕೆಂಬ ನಿಯಮವಿರುವದರಿಂದ ರವಿ-ಚಂದ್ರ-ಶನಿಯರು ಕಾರಕರಿದ್ದೇ ಇರುತ್ತಾರೆ. ಇದೂ ಅಲ್ಲದೆ ಸಂಸ್ಕೃತ, ಪದಾರ್ಥವಿಜ್ಞಾನ, ದೋಷಧಾತುಮಲವಿಜ್ಞಾನ ಈ ವಿಷಯಗಳನ್ನೂ ಕಲಿಯಬೇಕಾಗಿರುವದರಿಂದ ಈ ವಿಷಯಗಳ ಕಾರಕಗ್ರಹವಾದ ಗುರುವೂ ಈ ಕೋರ್ಸಿನ ಕಾರಕಗ್ರಹವಾಗಿರುತ್ತಾನೆ. ಇದಲ್ಲದೆ ಶರೀರಶಾಸ್ತ್ರ (Anatomy), ಜೀವಕಾರ್ಯವಿಜ್ಞಾನ, ಸ್ವಸ್ಥವೃತ್ತ ಈ ಮೊದಲಾದ ವಿಷಯಗಳಿಗೆ ರವಿಯು ಕಾರಕನಿರುತ್ತಾನೆ. ಇದರಂತೆ ಈ ಕೋರ್ಸಿನ ವಿಷಯಗಳಾದ ರಸಶಾಸ್ತ್ರ, ವನಸ್ಪತಿ ಪರಿಚಯ, ದ್ರವ್ಯಗುಣ, ಔಷಧೀಕರಣ ಈ ಮೊದಲಾದ ವಿಷಯಗಳಿಗೆ ಶನಿ-ಚಂದ್ರರೂ, ಪ್ರಸೂತಿತಂತ್ರಕ್ಕೆ ಶುಕ್ರ-ಚಂದ್ರರೂ, ವಿಷತಂತ್ರದ ವಿಷಯಕ್ಕೆ ರಾಹುಗ್ರಹವೂ, ಶಲ್ಯ-ಶಾಲಕ್ಯ ವಿಷಯಗಳಿಗೆ ಕುಜನೂ ಕಾರಕ ಗ್ರಹಗಳಿರುತ್ತಾರೆ. ಹೀಗೆ ಅನೇಕ ಗ್ರಹಗಳು ಈ ಕೋರ್ಸಿನ ಕಾರಕಗ್ರಹಗಳಿದ್ದರೂ ರವಿ, ಚಂದ್ರ, ಶನಿ, ಗುರು ಈ ಗ್ರಹಗಳೇ ಈ ಕೋರ್ಸಿನ ಕಾರಕ ಗ್ರಹಗಳು. ಅವರಲ್ಲಿಯೂ "ಗುರು ಗ್ರಹವೇ" ಈ ಕೋರ್ಸಿನ ಪ್ರಮುಖ ಕಾರಕಗ್ರಹವು. ಏಕೆಂದರೆ ಈ ಕೋರ್ಸಿನ ವೈಶಿಷ್ಟ್ಯವೆಂದರೆ ಆಪ್ತವಾಕ್ಯವೇ ಪ್ರಧಾನವಿರುತ್ತದೆ. ಇದಲ್ಲದೆ ರೋಗವಿಜ್ಞಾನ, ಸರ್ವರೋಗಸಂಪ್ರಾಪ್ತಿ

ವಿಜ್ಞಾನ, ಕಾಯಚಿಕಿತ್ಸೆ, ನ್ಯಾಯವೈದ್ಯಶಾಸ್ತ್ರ ಈ ಮೊದಲಾದ ವಿಷಯಗಳಿಗೂ ಗುರುಗ್ರಹವೇ ಕಾರಕವಿರುತ್ತಾನೆ. ಇನ್ನೊಂದು ಮಹತ್ವದ ಸಂಗತಿಯೆಂದರೆ ಆಯುರ್ವೇದದ ಮೂಲ, ಮುಖ್ಯ ಹಾಗೂ ಆಧಾರಿತ ಗ್ರಂಥಗಳು ಸಂಸ್ಕೃತದಲ್ಲಿರುವವು. ಸಂಸ್ಕೃತದಲ್ಲಿ ತಜ್ಞನಾಗಲು ಗುರುವು ಜಾತಕದಲ್ಲಿ ಬಲಾಢ್ಯನಿರಬೇಕು.

ಸ್ಥಾನ :— ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ಥೇರಿ ಶಿಕ್ಷಣದ ಸ್ಥಾನವಾದ ಪಂಚಮವೂ, ಪ್ರಾಯೋಗಿಕ ಹಾಗೂ ಪ್ರಾತ್ಯಕ್ಷಿಕೆಯ ಸ್ಥಾನವಾದಂಥ ತೃತೀಯವೂ, ವೃತ್ತಿಶಿಕ್ಷಣದ ಸ್ಥಾನವಾದ ಷಷ್ಠವೂ ಕಾರಕ ಸ್ಥಾನಗಳಿರುವದರಿಂದ ಈ ಸ್ಥಾನಗಳೂ ಹಾಗೂ ಈ ಸ್ಥಾನಾಧೀಶರೂ ಜಾತಕದಲ್ಲಿ ಪೋಷಕರಿರುವ ವಿದ್ಯಾರ್ಥಿಗಳು ಈ ಕೋರ್ಸಿನಲ್ಲಿ ಯಶಸ್ಸು ಪಡೆಯುತ್ತಾರೆ.

ಲಗ್ನ :— ಲಗ್ನದ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ವೃಷಭ, ಕರ್ಕ, ಸಿಂಹ, ತುಲಾ, ವೃಶ್ಚಿಕ, ಧನು, ಕುಂಭ, ಮೀನ ಈ ಲಗ್ನದ ವಿದ್ಯಾರ್ಥಿಗಳೇ ಈ ಕೋರ್ಸಿನಲ್ಲಿ ಪರಿಣಿತರಿರುವದು ಕಂಡುಬರುತ್ತದೆ.

ರಾಶಿ : — ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ಮಿಥುನ, ತುಲಾ, ಕುಂಭ ಈ ರಾಶಿಯವರು ತದನಂತರ ವೃಷಭ, ಧನು, ಕರ್ಕ, ಮೀನ ಈ ರಾಶಿಯ ವಿದ್ಯಾರ್ಥಿಗಳು ಈ ಕೋರ್ಸಿನಲ್ಲಿ ತಜ್ಞರಿರುವರು.

### ೩. ಹೋಮಿಯೋಪಥಿ ಶಿಕ್ಷಣ ( G. H. M. S., L. C. H., D. H. M. S., D. M. S., D. H. S. ) ಮೊದಲಾದ ಕೋರ್ಸುಗಳು

ಹೋಮಿಯೋಪಥಿಯು ವೈದ್ಯಕೀಯ ಕ್ಷೇತ್ರದಲ್ಲಿ ಒಂದು ವಿಶಿಷ್ಟ ಅಭ್ಯಾಸವಿರುತ್ತದೆ. ರೋಗಿಯ ನಾಡಿಪರೀಕ್ಷೆ, ಹೃದಯಪರೀಕ್ಷೆ, ಎದೆಯ ಪರೀಕ್ಷೆ ಮೊದಲಾದ ಯಾವ ವಿಧವಾದ ಪರೀಕ್ಷೆಯನ್ನೂ ಮಾಡದೇ ಕೇವಲ ರೋಗಿಯ ಲಕ್ಷಣಗಳ ಆಧಾರದ ಮೇಲಿಂದ ರೋಗಚಿಕಿತ್ಸೆಯನ್ನು ಮಾಡುವ ವೈಶಿಷ್ಟ್ಯವು ಹೋಮಿಯೋಪಥಿಯದಿರುತ್ತದೆ.

ಹೋಮಿಯೋಪಥಿ ಶಿಕ್ಷಣವನ್ನು ರಾಷ್ಟ್ರದಲ್ಲಿ ಅನೇಕ ಕಡೆಗಳಲ್ಲಿ ನೀಡಲಾಗುತ್ತದೆ. ಅನೇಕ ಕಡೆಗಳಲ್ಲಿ ಕೇವಲ ಡಿಪ್ಲೋಮಾ ಕೋರ್ಸು ಮಾತ್ರ ಇದ್ದರೆ ಆಗ್ರಾ ವಿಶ್ವವಿದ್ಯಾಲಯದರು ಮಾತ್ರ ಈ ವಿಷಯದಲ್ಲಿ ಪದವೀ ಶಿಕ್ಷಣವನ್ನು ಕಲಿಸಲು ಅನುವು ಮಾಡಿಕೊಟ್ಟಿದ್ದಾರೆ. ಈ ಪದವಿಯ ಅವಧಿಯ ಶಿಕ್ಷಣವಾದ ನಂತರ ಜಿ. ಎಚ್. ಎಮ್. ಎಸ್. ಪದವಿ ಕೊಡಲಾಗುತ್ತದೆ, ಇತರ ಕಡೆಯಲ್ಲಿ ಡಿಪ್ಲೋಮಾ ತರಬೇತಿಯಾದ ನಂತರ ಡಿ. ಎಚ್. ಎಮ್. ಎಸ್. ಪದವಿಯನ್ನು ಕೊಡಲಾಗುತ್ತದೆ. ಈ ಡಿಪ್ಲೋಮಾದ ಕೋರ್ಸುಗಳು ಕೆಲವು ಕಡೆ ೪ ವರ್ಷದವಿದ್ದರೆ ಕೆಲವು ಕಡೆ ೩ ವರ್ಷದ ಅವಧಿಯದಿರುತ್ತದೆ.

ಈ ಹೋಮಿಯೋಪಥಿ ಶಿಕ್ಷಣದಲ್ಲಿ ಭೌತಶಾಸ್ತ್ರ, ರಸಾಯನಶಾಸ್ತ್ರ, ಜೀವಶಾಸ್ತ್ರ, ಶರೀರಶಾಸ್ತ್ರ, ಜೀವಕಾರ್ಯವಿಜ್ಞಾನ, ಹೋಮಿಯೋ ಫಾರ್ಮಸಿ, ಮಟೀರಿಯಾಮೆಡಿಕಾ, ರೋಗಶಾಸ್ತ್ರ, ಆರೋಗ್ಯಶಾಸ್ತ್ರ, ನ್ಯಾಯವೈದ್ಯಶಾಸ್ತ್ರ, ಔಷಧಶಾಸ್ತ್ರ, ಶಸ್ತ್ರಕ್ರಿಯೆ, ಪ್ರಸೂತಿತಂತ್ರ ಈ ಮೊದಲಾದ ವಿಷಯಗಳನ್ನು ಕಲಿಸುವದರೊಡನೆ ಹಳೆಯ ರೋಗಗಳ ಅಭ್ಯಾಸ, ರೆಪರ್ಟರೀ ಹಾಗೂ ಆರ್ಗಾನನ್ ಈ ಗ್ರಂಥಗಳ ವಿಶಿಷ್ಟಪೂರ್ಣ ಅಭ್ಯಾಸವನ್ನೂ ಮಾಡಿಸಲಾಗುತ್ತದೆ. ಈ ಕೋರ್ಸಿನ ಇಷ್ಟೊಂದು ಹಿನ್ನೆಲೆಯಲ್ಲಿ ಜ್ಯೋತಿಷ್ಯದ ವಿಚಾರವೇನು, ಕಾರಕಗ್ರಹ, ಲಗ್ನ, ಸ್ಥಾನಾದಿಗಳಾವವು ಎಂಬುದನ್ನು ಪರಿಶೀಲಿಸುವಾ.

ಕಾರಕಗ್ರಹ :— ಯಾವುದೇ ವೈದ್ಯಕೀಯ ಕೋರ್ಸಿಗೆ ಕಾರಕಗ್ರಹಗಳಾದ ರವಿ, ಚಂದ್ರ, ಶನಿಯರಂತೂ ಕಾರಕರಿದ್ದೇ ಇರುತ್ತಾರೆ. ಹಾಗೂ ಯಾವುದೇ ಔಷಧಶಾಸ್ತ್ರಕ್ಕೆ ಹಾಗೂ ಔಷಧಿಗೆ ಚಂದ್ರ-ಶನಿಯರಂತೂ ಕಾರಕರಿದ್ದೇ ಇರುತ್ತಾರೆ. ಇದರಂತೆಯೇ ಯಾವುದೇ ವೈದ್ಯಕೀಯ ಕೋರ್ಸಿನ ಶರೀರಶಾಸ್ತ್ರ, ಜೀವಕಾರ್ಯವಿಜ್ಞಾನ, ಜೀವಶಾಸ್ತ್ರ ಈ ಶಾಸ್ತ್ರಗಳ ಅಧ್ಯಯನಕ್ಕೆ ರವಿಯು ಪೋಷಕನಾಗಲೇಬೇಕಾಗುತ್ತದೆ. ಆದರೆ ಈ ಕೋರ್ಸಿನಲ್ಲಿ ತಜ್ಞತೆ ಪಡೆಯಲು ಜಾತಕದಲ್ಲಿ ಶನಿಯೇ ಹೆಚ್ಚು ಪೋಷಕ

ನಿರಬೇಕು. ಶನಿಯೇ ಏಕೆ ಹೆಚ್ಚು ಪೋಷಕನಿರಬೇಕು ಎಂಬುದನ್ನು ತಿಳಿಯುವ ಮೊದಲು ಜ್ಞಾನಗಳಿಸುವ ವೈವಿಧ್ಯವನ್ನು ಮೊದಲು ಪರಿಶೀಲಿಸುವಾ.

**ಜ್ಞಾನದಲ್ಲಿಯ ಪ್ರಕಾರಗಳು :—** ಜ್ಞಾನ ಪಡೆಯುವದರಲ್ಲಿ ೧) ಪ್ರತ್ಯಕ್ಷ, ೨) ಅನುಮಾನ ೩) ಆಪ್ತವಾಕ್ಯ ಹೀಗೆ ಮೂರು ಮುಖ್ಯ ಪ್ರಕಾರಗಳಿವೆ.

೧). ಪ್ರತ್ಯಕ್ಷದ ವೈವಿಧ್ಯವೆಂದರೆ ಯಾವುದೊಂದು ವಿಷಯದ ಜ್ಞಾನ ಪಡೆಯಲು ಪ್ರಯೋಗಶಾಲೆಯಲ್ಲಿ ಪ್ರಯೋಗಮಾಡಿ ಪ್ರತ್ಯಕ್ಷ ಕಣ್ಣಿನಿಂದ ತಿಳಿದುಕೊಂಡು ಜ್ಞಾನಪಡೆಯುವ ರೀತಿಗೆ ಪ್ರತ್ಯಕ್ಷ ಜ್ಞಾನವೆನ್ನುತ್ತಾರೆ.

೨) ಅನುಮಾನ ರೀತಿಯಿಂದ ಜ್ಞಾನಪಡೆಯುವ ರೀತಿಯೆಂದರೆ ಯಾವುದೊಂದು ವಿಷಯದಲ್ಲಿ ಪ್ರತ್ಯಕ್ಷ ಪ್ರಯೋಗ ಮಾಡದೆ ಕೇವಲ ತರ್ಕ, ಊಹೆ, ಹಿಂದಿನ ಅನುಭವಗಳ ಆಧಾರದ ಮೇಲಿಂದ ಜ್ಞಾನ ಪಡೆಯುವಿಕೆ. ಉದಾಹರಣೆಗೆ : " ಯತ್ರ ಯತ್ರ ಧೂಮಃ ತತ್ರ ತತ್ರ ವಹ್ನಿಃ " ಅಂದರೆ ಹೊಗೆ ಇದ್ದಲ್ಲಿ ಬೆಂಕಿ ಇರುತ್ತದೆ. ಇದು ಬೆಂಕಿಯನ್ನು ಪ್ರತ್ಯಕ್ಷ ನೋಡದೆ ಕೂಡ ಹೊಗೆಯ ಆಧಾರದ ಮೇಲಿಂದ ಬೆಂಕಿಯ ಅಸ್ತಿತ್ವವನ್ನು ನಿರ್ಧರಿಸುವಿಕೆ.

೩) ಕೊನೆಯವಾಗಿ ಕೇವಲ ಆಪ್ತವಾಕ್ಯದ ಮೇಲಿಂದಾಗಲೀ, ಗ್ರಂಥೋಕ್ತಿಯಿಂದಾಗಲೀ ಜ್ಞಾನ ಪಡೆಯುವ ರೀತಿಗೆ ಆಪ್ತವಾಕ್ಯ ವೆನ್ನಬಹುದು. ಉದಾಹರಣೆಗೆ: ವಿಷ ತಿಂದರೆ ಸಾಯುವನು ಅಥವಾ ಅಗ್ನಿ ಸ್ಪರ್ಶ ಮಾಡಿದರೆ, ಸುಡುವದು. ಇದಕ್ಕಾಗಿ ಪ್ರಾತ್ಯಕ್ಷಿಕೆಯಾಗಲಿ, ಅನುಮಾನ ವಾಗಲಿ ಅವಶ್ಯವಿಲ್ಲ. ಇದನ್ನು ನಾವು ಪ್ರತ್ಯಕ್ಷ ನೋಡದೆ ಕೂಡ ಜ್ಞಾನ ಪಡೆಯಬಹುದು. ಹೀಗೆ ಜ್ಞಾನದಲ್ಲಿ ಮೂರು ಪ್ರಕಾರಗಳಿವೆ.

ಇನ್ನು ವೈದ್ಯಕೀಯ ಕೋರ್ಸುಗಳಾದ ಅಲೋಪಥಿ ಶಿಕ್ಷಣಕ್ಕೆ ಪ್ರತ್ಯಕ್ಷ ರೀತಿಯಿಂದ ಜ್ಞಾನ ಪಡೆಯಬೇಕಾಗುತ್ತದೆ. ಇದರಂತೆಯೇ ಆಯುರ್ವೇದ ಶಿಕ್ಷಣದ ಅಧ್ಯಯನದಲ್ಲಿ ಆಪ್ತವಾಕ್ಯಕ್ಕೆ ಪ್ರಾಧಾನ್ಯತೆಯಿರುತ್ತದೆ. ಇನ್ನು ಹೋಮಿಯೊಪಥಿ ಶಿಕ್ಷಣಕ್ಕೆ ಅನುಮಾನವೇ ಹೆಚ್ಚು ಪ್ರಧಾನವಿರುತ್ತದೆ.

ಇನ್ನು ಜ್ಯೋತಿಷ್ಯಶಾಸ್ತ್ರದಂತೆ ಪ್ರತ್ಯಕ್ಷ ರೀತಿಯ ವಿಧಾನಕ್ಕೆ ರವಿ-ಮಂಗಳರೂ, ಅನುಮಾನಕ್ಕೆ ಶನಿಯೂ, ಆಪ್ತವಾಕ್ಯವಿಧಾನಕ್ಕೆ ಗುರುವೂ

ಕಾರಕರಿರುತ್ತಾರೆ. ಇದರಂತೆಯೇ ಪ್ರತ್ಯಕ್ಷ ರೀತಿಯ ಜ್ಞಾನಕ್ಕೆ ತೃತೀಯ, ಷಷ್ಠ ಸ್ಥಾನಗಳೂ ಅನುಮಾನಕ್ಕೆ ಪಂಚಮ, ಲಗ್ನ ಸ್ಥಾನವೂ, ಆಪ್ತ ವಾಕ್ಯಕ್ಕೆ ಕೇವಲ ಪಂಚಮ ಸ್ಥಾನವೂ ಕಾರಕಸ್ಥಾನಗಳಿರುತ್ತವೆ. ಆದುದರಿಂದ ಈ ಕೋರ್ಸಿನ ಕಾರಕಗ್ರಹವೆಂದರೆ ಶನಿಯು. ಜಾತಕದಲ್ಲಿ ಶನಿಯು ಬಲಾಢ್ಯನೂ, ಪೋಷಕನೂ ಇರದೆ ಯಾವ ವಿದ್ಯಾರ್ಥಿಯೂ ಈ ಕೋರ್ಸಿನಲ್ಲಿ ತಜ್ಞತೆ ಪಡೆಯಲಾರನು. ಶನಿಯ ತರುವಾಯ ಗುರುಗ್ರಹವನ್ನು ಪರಿಶೀಲಿಸಬೇಕು. ಏಕೆಂದರೆ ತರ್ಕಶಾಸ್ತ್ರಕ್ಕೆ ಗುರುಕಾರಕನಿರುವನು. ತರ್ಕಜ್ಞಾನವು ಹೋಮಿಯೋಪಥಿ ಶಿಕ್ಷಣದಲ್ಲಿ ಅತ್ಯವಶ್ಯವಿರುತ್ತದೆ. ಏಕೆಂದರೆ ಕೇವಲ ಲಕ್ಷಣಗಳ ಮೇಲಿಂದ ನಿದಾನಮಾಡಿ ಚಿಕಿತ್ಸೆ ಕೊಡಬೇಕಾದರೆ ತರ್ಕದ ಅವಶ್ಯಕತೆಯಿರಬೇಕಾಗುವದಲ್ಲವೆ? ಆದುದರಿಂದ ಶನಿ-ಗುರುಗಳು ಪೋಷಕರಿದ್ದ ವಿದ್ಯಾರ್ಥಿಗಳು ಈ ಕೋರ್ಸಿನಲ್ಲಿ ತಜ್ಞರಿರುತ್ತಾರೆ.

ಸ್ಥಾನ :— ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ಈ ಕೋರ್ಸಿನ ಸ್ಥಾನವಾದ ಪಂಚಮ, ಲಗ್ನ ಈ ಸ್ಥಾನಗಳೂ ಹಾಗೂ ವೃತ್ತಿಶಿಕ್ಷಣದ ಸ್ಥಾನವಾದ ಷಷ್ಠಸ್ಥಾನವೂ ಈ ಕೋರ್ಸಿನ ಕಾರಕಸ್ಥಾನಗಳಾಗಿರುವದರಿಂದ ಈ ಸ್ಥಾನಗಳೂ, ಈ ಸ್ಥಾನಾಧೀಶರೂ ಪೋಷಕರಿರುವ ವಿದ್ಯಾರ್ಥಿಗಳು ಈ ಕೋರ್ಸಿನಲ್ಲಿ ತಜ್ಞತೆ ಪಡೆಯುತ್ತಾರೆ.

ಲಗ್ನ :— ಲಗ್ನದ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ವೃಷಭ, ಸಿಂಹ, ತುಲಾ, ವೃಶ್ಚಿಕ, ಧನು, ಕುಂಭ, ಮೀನ ಈ ಲಗ್ನದ ವಿದ್ಯಾರ್ಥಿಗಳು ಈ ಕೋರ್ಸಿನಲ್ಲಿ ತಜ್ಞರಿರುವದು ಕಂಡುಬರುತ್ತದೆ.

ರಾಶಿ :— ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ಮಿಥುನ, ತುಲಾ, ಕುಂಭ ಈ ರಾಶಿಯ ವಿದ್ಯಾರ್ಥಿಗಳು ಈ ಕೋರ್ಸಿನಲ್ಲಿ ತಜ್ಞರಿರುತ್ತಾರೆ. ಈ ರಾಶಿಯವರ ನಂತರ ವೃಷಭ, ಕನ್ಯಾ, ಕರ್ಕ, ಮೀನ ಈ ರಾಶಿಯವರನ್ನು ಕಾಣಬಹುದು.

೯. ಯುನಾನಿ ಶಿಕ್ಷಣ :— ಪುರಾತನ ವೈದ್ಯಕೀಯ ಶಾಸ್ತ್ರಗಳಲ್ಲಿ ಒಂದಾದ ಯುನಾನಿ ವೈದ್ಯಕೀಯಶಾಸ್ತ್ರವು ಮಧ್ಯಪೂರ್ವದಿಂದ ಬಂದಿದೆ.

ಇದಲ್ಲದೆ ಈ ಔಷಧಿಗಳನ್ನು ಹೆಚ್ಚಾಗಿ ಅಫಗಾಣಿಸ್ತಾನ, ಬಲೂಚಿಸ್ತಾನ ಮೊದಲಾದ ದೇಶಗಳಿಂದ ತರಿಸುತ್ತಾರೆ ಎಂಬುದು ಮೇಲಿನ ಅಂಶಕ್ಕೆ ಪುಷ್ಟಿಕೊಡುತ್ತದೆ. ಭಾರತದಲ್ಲಿ ಮುಸ್ಲಿಮ್ ರಾಜರು ಆಕ್ರಮಿಸಿ ರಾಜ್ಯಾಡಳಿತ ವಹಿಸಿಕೊಂಡಂದಿನಿಂದ ಈ ಶಾಸ್ತ್ರವು ಭಾರತದಲ್ಲಿ ನೆಲಸಿದೆ ಎನ್ನಬಹುದು.

ಯುನಾನಿ ಹಾಗೂ ಆಯುರ್ವೇದ ಶಾಸ್ತ್ರಗಳ ತುಲನಾತ್ಮಕ ವಿವೇಚನೆ ಮಾಡಿದಾಗ ಅಂದರೆ ಔಷಧಿಗಳ ತಯಾರಿಕೆಯ ರೀತಿ, ಕೊಡುವ ಪದ್ಧತಿ, ರೋಗನಿದಾನ, ಚಿಕಿತ್ಸಾಪದ್ಧತಿ ಇವುಗಳಲ್ಲಿ ಬಹಳಷ್ಟು ಸಾಮ್ಯವಿದೆ. ಯುನಾನಿಯಲ್ಲಿಯ ವೈಶಿಷ್ಟ್ಯವೆಂದರೆ ಪ್ರಾಣಿಜನ್ಯ ಔಷಧವನ್ನು ತಯಾರಿಸುವಿಕೆ. ಆಯುರ್ವೇದದಲ್ಲಿ ಕೇವಲ ಸಸ್ಯ-ಮೂಲಿಕೆ, ದ್ರವ್ಯ, ಖನಿಜ ಪದಾರ್ಥಗಳ ಸೇಂದ್ರಿಯ, ನಿರೀಂದ್ರಿಯ ದ್ರವ್ಯಗಳನ್ನು ಬಳಸಿದರೆ ಯುನಾನಿಯಲ್ಲಿ ಇವುಗಳೊಡನೆ ಪ್ರಾಣಿಜನ್ಯ ಔಷಧವನ್ನೂ ಕೊಡುತ್ತಾರೆ. ಯುನಾನಿ ವೈದ್ಯಶಾಸ್ತ್ರದ ಸಕ್ರಮ ಶಿಕ್ಷಣ ಭಾರತದಲ್ಲಿ ಇತ್ತೀಚೆಗೆ ರೂಪುಗೊಂಡಿದೆ. ಕೇವಲ ಆನುವಂಶೀಯ ಹಕೀಮ ವೃತ್ತಿಯ ಶಿಕ್ಷಣವು ಈಗ ಸಾರ್ವಜನಿಕರಿಗೆ ತೆರವಾಗಿದೆ ಎನ್ನಬಹುದು. ಈ ಆಧುನಿಕ ಕೋರ್ಸಿನಲ್ಲಿ ಶರೀರಶಾಸ್ತ್ರ, ಜೀವಕಾರ್ಯವಿಜ್ಞಾನ, ಪೆಥಾಲಜಿ, ನಿದಾನ, ಚಿಕಿತ್ಸಾಪದ್ಧತಿ ಮೊದಲಾದ ಆಧುನಿಕ ಶಿಕ್ಷಣವನ್ನು ಮಿಶ್ರಪದ್ಧತಿಯಿಂದ ಕಲಿಸಲಾಗುತ್ತದೆ. ಇಷ್ಟೊಂದು ಈ ಕೋರ್ಸಿನ ಹಿನ್ನೆಲೆಯಲ್ಲಿ ಜೋತಿಷ್ಯದ ವಿಚಾರವೇನೆಂಬುದನ್ನು ಪರಿಶೀಲಿಸುವಾ.

**ಕಾರಕಗ್ರಹ :—** ಎಲ್ಲ ವೈದ್ಯಕೀಯ ಕೋರ್ಸುಗಳ ಕಾರಕಗ್ರಹಗಳಾದ ರವಿ-ಚಂದ್ರ-ಶನಿಯರಂತೂ ಜಾತಕದಲ್ಲಿ ಬಲಾಢ್ಯರಿರಲೇಬೇಕು. ಇದಲ್ಲದೆ ಈ ಕೋರ್ಸಿನಲ್ಲಿಯೂ ಹಾಗೂ ಆಯುರ್ವೇದ ಕೋರ್ಸಿನಲ್ಲಿಯೂ ಅನೇಕ ವಿಷಯಗಳಲ್ಲಿ ನಿಕಟ ಸಾಮ್ಯವಿರುವದರಿಂದ ಆಯುರ್ವೇದ ಶಿಕ್ಷಣದ ಕಾರಕ ಗ್ರಹವಾದ ಗುರುವೂ ಕೂಡ ಈ ಕೋರ್ಸಿನ ಕಾರಕಗ್ರಹವಿರುತ್ತಾನೆ.

**ಸ್ಥಾನ : —** ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ಪಂಚಮ, ಷಷ್ಠ

ಈ ಸ್ಥಾನಗಳೇ ಕಾರಕವಿರುವದರಿಂದ ಈ ಸ್ಥಾನಗಳೂ ಹಾಗೂ ಈ ಸ್ಥಾನಾಧೀಶರೂ ಪೋಷಕರಿರದೆ ಯಾವ ವಿದ್ಯಾರ್ಥಿಯೂ ಈ ಕೋರ್ಸಿನಲ್ಲಿ ತಜ್ಞತೆ ಪಡೆಯಲಾರನು.

ಲಗ್ನ :— ಲಗ್ನದ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ವೃಷಭ, ಮಿಥುನ, ಕರ್ಕ, ಸಿಂಹ, ತುಲಾ, ವೃಶ್ಚಿಕ, ಧನು, ಮೀನ ಈ ಲಗ್ನದವರೇ ಈ ಕೋರ್ಸಿನಲ್ಲಿ ತಜ್ಞರಿರುವದು ಕಂಡುಬರುತ್ತದೆ.

ರಾಶಿ :— ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ಮಿಥುನ, ತುಲಾ, ಕುಂಭ ಈ ರಾಶಿಯ ವಿದ್ಯಾರ್ಥಿಗಳು ತದನಂತರ ವೃಷಭ, ಕರ್ಕ, ಕನ್ಯಾ ಕುಂಭ, ಮೀನ ಈ ರಾಶಿಯವರೇ ಈ ಕೋರ್ಸಿನಲ್ಲಿ ಪ್ರವೀಣರಿರುವದು ಕಂಡುಬರುತ್ತದೆ.

೫. ನಿಸರ್ಗಚಿಕಿತ್ಸಾ ಶಿಕ್ಷಣ :— ಭಾರತದಲ್ಲಿ ವೈದ್ಯಕೀಯ ಕ್ಷೇತ್ರದಲ್ಲಿ ನಿಸರ್ಗಚಿಕಿತ್ಸಾಶಾಸ್ತ್ರವೂ ಒಂದು ಸ್ಥಾನವನ್ನು ಪಡೆದಿದೆ. ಗಾಂಧೀಜಿಯವರು ನಿಸರ್ಗಚಿಕಿತ್ಸೆಗೆ ಹೆಚ್ಚು ಮಹತ್ವ ಕೊಟ್ಟನಂತರ ಕೇಂದ್ರ ಸರಕಾರವು ನಿಸರ್ಗಚಿಕಿತ್ಸಾ ಶಾಸ್ತ್ರಕ್ಕೂ ಮಹತ್ವಕೊಟ್ಟು ನಿಸರ್ಗಚಿಕಿತ್ಸೆಗಳಿಗೆ ಧನ ಸಹಾಯ ಮಾಡುವ ಕ್ರಮವನ್ನು ಕೈಕೊಂಡಿತು. ಅನೇಕ ಶಾಲೆಗಳಲ್ಲಿ ಒಂದು ವರ್ಷದ ಸರ್ಟಿಫಿಕೇಟ್ ಕೋರ್ಸು ನಡೆಸುತ್ತಾರೆ. ಈ ಕೋರ್ಸಿನಲ್ಲಿ ಪ್ರಾಥಮಿಕ ಶರೀರಶಾಸ್ತ್ರ, ಜೀವಕಾರ್ಯಶಾಸ್ತ್ರ, ಪ್ರಾಥಮಿಕ ಸಹಾಯ, ಪ್ರಥಮೋಪಚಾರ, ಹೋಮ್ ನರ್ಸಿಂಗ್, ಪ್ರಾಥಮಿಕ ಆರೋಗ್ಯಶಾಸ್ತ್ರ, ಆಹಾರ ಪ್ರಮಾಣಶಾಸ್ತ್ರ ( Diet ), ನಿಸರ್ಗಚಿಕಿತ್ಸೆಯ ತತ್ವಶಾಸ್ತ್ರ ಹಾಗೂ ಇದರ ಪ್ರಯೋಗದ ರೀತಿ, ನಿಸರ್ಗಚಿಕಿತ್ಸೆಯ ಪ್ರಾಯೋಗಿಕ-ತಾತ್ವಿಕ ಶಿಕ್ಷಣದಲ್ಲಿ ರವಿಕಿರಣದಿಂದ ರೋಗನಿವಾರಣೆಯ ವಿಧಾನ, ಮಣ್ಣು ಲೇಪನ, ಮಸಾಜಿನ ವಿಧಾನ ಮೊದಲಾದ ವಿಷಯಗಳನ್ನು ಕಲಿಸಲಾಗುತ್ತದೆ. ಸಾಮಾನ್ಯವಾಗಿ ಮಾಧ್ಯಮಿಕ ಲವೆಯ ಇಯತ್ತೆಯಲ್ಲಿ ಉತ್ತೀರ್ಣರಾದವರನ್ನು ಅಥವಾ ಎಸ್. ಎಸ್. ಎಲ್. ಸಿ. ಯ ವರೆಗೆ ಕಲಿತವರನ್ನು ಸೇರಿಸಿಕೊಳ್ಳಲಾಗುತ್ತದೆ. ಈ ಕೋರ್ಸಿನ ಇಷ್ಟೊಂದು ಹಿನ್ನೆಲೆಯಲ್ಲಿ ಜ್ಯೋತಿಷ್ಯದ ವಿಚಾರವೇನು ಎಂಬುದನ್ನು ಪರಿಶೀಲಿಸುವಾ.

**ಕಾರಕಗ್ರಹ :—** ನಿಸರ್ಗಚಿಕಿತ್ಸೆಯೆಂದರೆ ಪಂಚಮಹಾಭೂತಗಳಿಂದ ನಿರ್ಮಾಣವಾದ ಈ ಶರೀರದಲ್ಲಿ ನಿಸರ್ಗದ ಪಂಚಮಹಾಭೂತ ತತ್ತ್ವದಲ್ಲಿ ಸ್ವಲ್ಪು ಹೆಚ್ಚುಕಡಿಮೆಯಾದರೆ ರೋಗಾದಿಗಳು ಉದ್ಭವಿಸುವವು. ಉದಾಹರಣೆಗೆ:— ಶರೀರದಲ್ಲಿ ಉದಕದ (ದ್ರವದ) ಪ್ರಮಾಣವು ಹೆಚ್ಚಾದರೆ ಮೈಕೈ ಮೊದಲಾದ ಅವಯವಗಳು ಬಾಯುತ್ತವೆ. ಇದರಂತೆಯೇ ಅಗ್ನಿಯ ಪ್ರಮಾಣವು ಹೆಚ್ಚಾದರೆ ಉರಿಯುವದು, ಕಣ್ಣು ಕೆಂಪಾಗುವದು ಮೊದಲಾದ ವಿಕಾರಗಳುಂಟಾಗುತ್ತವೆ. ಈ ವಿಕಾರಗಳನ್ನು ನಿಸರ್ಗದಲ್ಲಿರುವ ಪಂಚಮಹಾಭೂತಗಳಿಂದಲೆ ಚಿಕಿತ್ಸೆ ಪಡೆಯುವ ಕ್ರಮದ ಶಿಕ್ಷಣವೇ ನಿಸರ್ಗಚಿಕಿತ್ಸೆಯಾಗಿದೆ. ಜ್ಯೋತಿಷ್ಯಶಾಸ್ತ್ರದ ಪ್ರಕಾರ ನಿಸರ್ಗದ ಮೇಲೆ ರವಿ–ಚಂದ್ರರ ಆಧಿಪತ್ಯ ಹೆಚ್ಚಾಗಿರುವದರಿಂದ ಈ ದ್ವಿಗ್ರಹಗಳೇ ಈ ಕೋರ್ಸಿನ ಕಾರಕಗಳಿರುತ್ತವೆ.

**ಸ್ಥಾನ :—** ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ಜಾತಕನ ನೈಸರ್ಗಿಕ ಜೀವನಶಕ್ತಿಯ ಸ್ಥಾನವೂ ಹಾಗೂ ಪ್ರತಿಕಾರ ಕ್ರಿಯಾಶಕ್ತಿಯ ಸ್ಥಾನವೂ ಆದ ತನುಸ್ಥಾನವೇ ಈ ಕೋರ್ಸಿನ ಕಾರಕಸ್ಥಾನವಿರುತ್ತವೆ. ತನುಸ್ಥಾನದ ನಂತರ ವ್ಯಕ್ತಿಸ್ಥಾನವಾದ ಷಷ್ಠಸ್ಥಾನವೂ ಈ ಕೋರ್ಸಿನ ಕಾರಕಸ್ಥಾನವಿರುವದರಿಂದ ಈ ಸ್ಥಾನಗಳೂ, ಈ ಸ್ಥಾನಾಧಿಪರರೂ ಪೋಷಕರಿರಬೇಕು.

**ಲಗ್ನ :—** ಲಗ್ನದ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ವೃಷಭ, ಕರ್ಕ, ಸಿಂಹ, ತುಲಾ, ವೃಶ್ಚಿಕ, ಧನು, ಮೀನ ಈ ಲಗ್ನದವರೇ ಹೆಚ್ಚಾಗಿರುವದು ಕಂಡುಬರುತ್ತದೆ.

**ರಾಶಿ :—** ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ನಿರ್ದಿಷ್ಟ ರಾಶಿಯವರೇ ಈ ಕೋರ್ಸಿನಲ್ಲಿ ತಜ್ಞರಿರುವದರೆಂದು ಹೇಳಲು ಬಾರದು.

## ೭. ಕೃಷಿವಿಜ್ಞಾನ ಕೋರ್ಸುಗಳು

ಭಾರತವು ಕೃಷಿಕರ ನಾಡು. ಒಕ್ಕಲುತನವೇ ಪ್ರಧಾನವಾಗಿರುವ ರಾಷ್ಟ್ರವಾದ ಭಾರತದಲ್ಲಿ ಒಕ್ಕಲಿಗ ರಾಷ್ಟ್ರದ ಆಧಾರಸ್ತಂಭ. ಅಂತೆಯೇ ಕೃಷಿವಿಜ್ಞಾನ ಭಾರತದಲ್ಲಿ ದಿನೇ ದಿನೇ ಜನಪ್ರಿಯವಾಗುತ್ತಿದ್ದರೆ ಅದು

ಆಶ್ಚರ್ಯಕರ ವಿಷಯವಲ್ಲ. ಒಕ್ಕಲುತನದ ಅಭಿವೃದ್ಧಿಗಾಗಿ ಸ್ವಾತಂತ್ರ್ಯ ನಂತರ ಬಹಳ ಪರಿಶ್ರಮ ನಡೆಯುತ್ತಿದ್ದಾಗ ಕೃಷಿ ವಿಜ್ಞಾನದ ಶಿಕ್ಷಣವೂ ಒಂದು ಬಗೆಯ ಕ್ರಾಂತಿಯನ್ನೇ ಪಡೆದಿದೆ ಎಂಬುದಕ್ಕೆ ನಿದರ್ಶನವೆಂದರೆ ೧೯೬೪ರಲ್ಲಿ ಕೃಷಿವಿಜ್ಞಾನ ವಿಶ್ವವಿದ್ಯಾಲಯ ಕಾಯ್ದೆ ಮಂಜೂರಾಯಿತು. ಇದರ ಮೇರೆಗೆ ೧೯೬೫ನೆಯ ಅಕ್ಟೋಬರ ಮೊದಲನೆಯ ದಿನಾಂಕದಿಂದ ಕರ್ನಾಟಕ ಸರಕಾರವು ತನ್ನ ಎರಡು ಒಕ್ಕಲುತನದ ಕಾಲೇಜುಗಳನ್ನು ಕೃಷಿವಿಜ್ಞಾನ ವಿಶ್ವವಿದ್ಯಾಲಯಕ್ಕೆ ಹಸ್ತಾಂತರಗೊಳಿಸಿತು. ಅಂತೆಯೇ ದೇಶಾದ್ಯಂತ ರಾಜ್ಯಗಳ ಕೃಷಿ ಇಲಾಖೆಗಳ ಆಡಳಿತದಲ್ಲಿದ್ದ ಒಕ್ಕಲುತನದ ಕಾಲೇಜುಗಳು ಅಲ್ಲಲ್ಲಿ ಸ್ಥಾಪಿತವಾದ ಕೃಷಿವಿಜ್ಞಾನ ವಿಶ್ವವಿದ್ಯಾಲಯಗಳಿಗೆ ಹಸ್ತಾಂತರಗೊಳಿಸಲಾಯಿತು. ಅಂತೆಯೇ ಈ ಕೃಷಿವಿಜ್ಞಾನ ವಿಶ್ವವಿದ್ಯಾಲಯಗಳು ಅಮೇರಿಕನ್ ಪದ್ಧತಿಯಲ್ಲಿ ರಚಿತವಾದವು. ಟ್ರೈಮೆಸ್ಟರ್-ಸೆಮೆಸ್ಟರ್ ಪದ್ಧತಿಗಳು ಜಾರಿಗೆ ಬಂದವು.

ಕೃಷಿವಿಜ್ಞಾನದಲ್ಲಿಯೂ ಬಿ. ಎಸ್ ಸಿ. (ಒಕ್ಕಲುತನ), ಬಿ. ಎಸ್ ಸಿ. (ಪಶುವೈದ್ಯಕೀಯ), ಎಮ್. ಎಸ್ ಸಿ. (ಒಕ್ಕಲುತನ), ಎಮ್. ಎಸ್ ಸಿ. (ಪಶುವೈದ್ಯಕೀಯ), ಪಿಎಚ್. ಡಿ. ಮೊದಲಾದ ಪದವಿಗಳಿವೆ. ಪಿ. ಯು. ಸಿ. ಅಥವಾ ೧೧ನೆಯ ಇಯತ್ತೆಯಲ್ಲಿ ಉತ್ತೀರ್ಣರಾದವರಿಗೆ ಬಿ. ಎಸ್ ಸಿ. (ಒಕ್ಕಲುತನ) ನಾಲ್ಕು ವರ್ಷದ ಕೋರ್ಸಾದರೆ ಬಿ. ಎಸ್ ಸಿ. (ಪಶುವೈದ್ಯ) ಐದು ವರ್ಷದ ಕೋರ್ಸಾಗುತ್ತದೆ. ಈ ಕೋರ್ಸುಗಳಿಗೆ ಅರ್ಹತೆ ಪಡೆಯಲು ಪಿ. ಯು ಸಿ. ಅಥವಾ ಹನ್ನೊಂದನೆಯ ಇಯತ್ತೆಯಲ್ಲಿ ಪಿ.ಸಿ.ಬಿ. ಗುಂಪಿನ ವಿಷಯಗಳಾದ ಭೌತಶಾಸ್ತ್ರ, ರಸಾಯನಶಾಸ್ತ್ರ, ಜೀವಶಾಸ್ತ್ರ ವಿಷಯಗಳು ಅಥವಾ ಸಿ. ಬಿ. ಝಡ್. ಗುಂಪಿನ ವಿಷಯಗಳಾದ ರಸಾಯನಶಾಸ್ತ್ರ, ಸಸ್ಯಶಾಸ್ತ್ರ, ಪ್ರಾಣಿಶಾಸ್ತ್ರ ವಿಷಯಗಳಲ್ಲಿ ಯಾವುದೇ ಎರಡು ವಿಷಯಗಳನ್ನಾದರೂ ತೆಗೆದುಕೊಂಡಿರಬೇಕಾಗುವದಲ್ಲದೆ ಕನಿಷ್ಠ ೧೬ ವರ್ಷಗಳ ವಯಸ್ಸನ್ನು ಮುಟ್ಟಿರಬೇಕು. ಇದಲ್ಲದೆ ಆಯಾ ವಿದ್ಯಾರ್ಥಿಯು ಒಕ್ಕಲುತನ ಕುಟುಂಬಕ್ಕೆ ಸೇರಿದವನಾಗಿದ್ದರೆ ಅವನಿಗೆ ಪ್ರಾಧಾನ್ಯತೆ ದೊರೆಯುತ್ತದೆ. ಇದಲ್ಲದೆ ಪಿ. ಯು. ಸಿ.ಯಲ್ಲಿಯ ಐಚ್ಛಿಕ ವಿಷಯಗಳಲ್ಲಿ ಪ್ರತಿ ಶತ ೪೫ರಷ್ಟು ಗುಣಗಳನ್ನು ಪಡೆದಿರಬೇಕು.

ಈ ಕೋರ್ಸಿನ ಇಷ್ಟೊಂದು ಹಿನ್ನೆಲೆಯಲ್ಲಿ ಈ ಕೋರ್ಸಿನ ವಿಷಯವಾಗಿ ಜ್ಯೋತಿಷ್ಯದ ವಿಚಾರವೇನು, ಜಾತಕವೆಂತಿರಬೇಕು, ಕಾರಕ ಗ್ರಹ, ಲಗ್ನ, ಸ್ಥಾನಾದಿಗಳು ಯಾವವು ಎಂಬುದನ್ನು ಪರಿಶೀಲಿಸುವಾ.

**ಕಾರಕಗ್ರಹ:—** ಕೃಷಿ ವಿಜ್ಞಾನ ಬಿ. ಎಸ್‌ಸಿ., ಎಮ್. ಎಸ್‌ಸಿ. ಮೊದಲಾದ ಕೋರ್ಸುಗಳ ಶಿಕ್ಷಣ ಪಡೆಯಲು ಯಾವ ಗ್ರಹಗಳು ಕಾರಕವಾಗಿ ಪ್ರಭಾವ ಬೀರಬಲ್ಲವು ಎಂಬುದನ್ನು ಪರಿಶೀಲಿಸುವ ಮೊದಲು ಈ ಕೋರ್ಸಿನಲ್ಲಿ ಅಭ್ಯಸಿಸುವ ವಿಷಯಗಳು ಯಾವವು ಎಂಬುದನ್ನು ತಿಳಿಯುವದು ಮಹತ್ವದ ಸಂಗತಿಯಾಗಿದೆ.

ಬಿ. ಎಸ್‌ಸಿ. ಪದವೀ ಶಿಕ್ಷಣಕ್ಕೆ ಮೂಲ ವಿಜ್ಞಾನ ಮತ್ತು ಮಾನವ ಶಾಸ್ತ್ರಗಳು, ಮೂಲ ಕೃಷಿವಿಜ್ಞಾನ, ಕೃಷಿವಿಜ್ಞಾನಕ್ಕೆ ಸಂಬಂಧಿಸಿದ ವಿಷಯಗಳು ಇವು ಕಡ್ಡಾಯವಾಗಿ ತಜ್ಞತೆ ಪಡೆಯುವ ವಿಷಯಗಳಿರುತ್ತವೆ. ಇದಲ್ಲದೆ ಮಾನವಶಾಸ್ತ್ರದಲ್ಲಿ ಇಂಗ್ಲೀಷ್, ಸಮಾಜಶಾಸ್ತ್ರ, ಅರ್ಥಶಾಸ್ತ್ರ, ಸಾಮಾನ್ಯ ಮನಶ್ಶಾಸ್ತ್ರಗಳನ್ನು ಮೂಲವಿಜ್ಞಾನಗಳಲ್ಲಿ ರಸಾಯನಶಾಸ್ತ್ರ, ಸಸ್ಯಶಾಸ್ತ್ರ, ಪ್ರಾಣಿಶಾಸ್ತ್ರ, ಗಣಿತಶಾಸ್ತ್ರ, ಭೌತಶಾಸ್ತ್ರ, ಅಂಕಿ-ಸಂಖ್ಯಾಶಾಸ್ತ್ರ ಮೊದಲಾದವುಗಳನ್ನು ಐಚ್ಛಿಕ ವಿಷಯವನ್ನಾಗಿ ಅಭ್ಯಾಸ ಮಾಡಬೇಕಾಗುತ್ತದೆ.

ಮೂಲ ಕೃಷಿವಿಜ್ಞಾನಶಾಸ್ತ್ರದಲ್ಲಿ ಮಣ್ಣುಗಳು ಹಾಗೂ ಕೃಷಿ ರಸಾಯನಶಾಸ್ತ್ರ, ಬೆಳೆ ಉತ್ಪಾದನೆ, ಕೃಷಿ ಸಸ್ಯಶಾಸ್ತ್ರ, ಗಿಡರೋಗಶಾಸ್ತ್ರ, ತೋಟಗಾರಿಕೆ, ಕೃಷಿ ಅರ್ಥಶಾಸ್ತ್ರ, ಕೃಷಿ ವಿಸ್ತರಣೆ, ಕ್ರಿಮಿಶಾಸ್ತ್ರಗಳನ್ನು ಕಲಿಯಬೇಕಾಗುತ್ತದೆ.

ಕೃಷಿಗೆ ಹತ್ತಿರದ ವಿಷಯಗಳಾದ ಪಶುಸಂಗೋಪನೆ, ಕ್ಷೀರವಿಜ್ಞಾನ, ಕೃಷಿಸಂಶೋಧನೆ, ಉತ್ಪತ್ತಿ-ಸಂಬಂಧಶಾಸ್ತ್ರ, ಪಶುವೈದ್ಯಶಾಸ್ತ್ರ, ಗ್ರಾಮೀಣ ಸಮಾಜಶಾಸ್ತ್ರ, ಶೈಕ್ಷಣಿಕ ಸಮಾಜ ಮಾನವಶಾಸ್ತ್ರ, ಪಶು ಪೌಷ್ಟಿಕ ಆಹಾರ ಜೀವತಂತು ಈ ಮೊದಲಾದ ವಿಷಯಗಳನ್ನು ಅಭ್ಯಾಸ ಮಾಡಬೇಕಾಗುತ್ತದೆ.

ತಜ್ಞತೆಯ ಮುಖ್ಯ ವಿಷಯಗಳಾದ ಕೃಷಿಶಾಸ್ತ್ರ, ಸಸ್ಯಶಾಸ್ತ್ರ, ಕೃಷಿ

ವಾರ್ತಾಶಾಸ್ತ್ರ, ರಸಾಯನಶಾಸ್ತ್ರ, ಮಣ್ಣುವಿಜ್ಞಾನ, ಕೃಷಿಕೀಟಕಶಾಸ್ತ್ರ, ತೋಟಗಾರಿಕೆ, ಕೃಷಿ ತಾಂತ್ರಿಕಶಾಸ್ತ್ರ, ಗಿಡರೋಗಶಾಸ್ತ್ರ, ಕೃಷಿವಿಸ್ತರಣೆ, ಗಿಡ ರಕ್ಷಣೆ, ಮಣ್ಣು ಮತ್ತು ನೀರಿನ ವ್ಯವಸ್ಥೆ, ಹೊಲಗಳ ಕಾರ್ಯಾಚರಣೆ ಈ ವಿಷಯಗಳ ವ್ಯಾಸಂಗ ಮಾಡಬೇಕಾಗುತ್ತದೆ. ಹೀಗಾಗಿ ಕೃಷಿ ವಿಜ್ಞಾನ ಪದವೀಧರನಾಗಬೇಕಾದರೆ ಮೇಲ್ಕಂಡ ಎಲ್ಲ ವಿಷಯಗಳ ಜ್ಞಾನ ಪಡೆಯಬೇಕಾಗುತ್ತದೆ. ಇನ್ನು ಫಲಜ್ಯೋತಿಷ್ಯಶಾಸ್ತ್ರದ ಮೇರೆಗೆ ಶನಿ-ಚಂದ್ರರೇ ಈ ಕೋರ್ಸಿನ ಮೂಲ ಹಾಗೂ ಮುಖ್ಯಗ್ರಹಗಳಾಗಿ ಪ್ರಭಾವ ಬೀರುತ್ತಾರೆ. ಶನಿ-ಚಂದ್ರರ ತರುವಾಯ ರವಿಯನ್ನೂ ಪರಿಶೀಲಿಸಬೇಕು. ಏಕೆಂದರೆ ರವಿಯು ಜೀವನಶಾಸ್ತ್ರದ ವಿಷಯದ ಕಾರಕನು. ಆದರೆ ರವಿಯು ಕೇವಲ ರಾಶಿಬಲದವನಿದ್ದು ಶನಿ-ಚಂದ್ರರು ರಾಶಿಬಲದವರೂ, ಸ್ಥಾನ ಬಲದವರೂ, ಯೋಗಕಾರಕರೂ ಇರದೆ ಯಾವ ವಿದ್ಯಾರ್ಥಿಯೂ ಈ ಕೋರ್ಸಿನಲ್ಲಿ ಯಶಸ್ಸು ಪಡೆಯಲಾರನು.

**ಸ್ಥಾನ:** – ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ಈ ಕೋರ್ಸಿನಲ್ಲಿ ಪ್ರಾತ್ಯಕ್ಷಿಕೆ, ಪ್ರಾಯೋಗಿಕ ಪರೀಕ್ಷೆಗಳಿಗೇ ಹೆಚ್ಚು ಮಹತ್ವವಿರುವುದರಿಂದ ಷಷ್ಠ, ತೃತೀಯ, ಚತುರ್ಥ, ತನುಸ್ಥಾನ ಈ ಸ್ಥಾನಗಳೂ, ಈ ಸ್ಥಾನಾಧೀಶರೂ ಪುಷ್ಟಕರಿರಬೇಕು. ಇದಲ್ಲದೆ ಈ ಕೋರ್ಸಿನ ೪ ವರ್ಷಗಳ ಅವಧಿಯಲ್ಲಿ ೧೯೨ ಕ್ರೆಡಿಟ್ ಗಂಟೆಗಳ ಅಭ್ಯಾಸ ಮಾಡಬೇಕಾಗುತ್ತದೆ. ಕ್ರೆಡಿಟ್ ಗಂಟೆಗಳೆಂಬುದು ಅಮೇರಿಕನ್ ಪದ್ಧತಿ. ಒಂದೊಂದು ಕೋರ್ಸಿನಲ್ಲಿ ವಿದ್ಯಾರ್ಥಿ ಕನಿಷ್ಠ ಪಕ್ಷ ಇಂತಿಷ್ಟು ತರಗತಿಗಳಿಗೆ ಹಾಜರಾಗಲೇಬೇಕು ಎಂದು ನಿರ್ದಿಷ್ಟಗೊಳಿಸಲಾಗುತ್ತದೆ. ಇದರಂತೆ ವಿದ್ಯಾರ್ಥಿಗಳ ಪಠ್ಯಾವಧಿಯನ್ನು (Terms) ನಿರ್ಧರಿಸಲಾಗುತ್ತದೆ. ಹೀಗಾಗಿ ೧೯೨ ಕ್ರೆಡಿಟ್ ಗಂಟೆಗಳ ಕಾಲ ಪಠ್ಯಾವಧಿ ನಿರ್ಧರಿಸಲಾಗುತ್ತಿದ್ದು ಇದನ್ನು ೪ ವರ್ಷಗಳಲ್ಲಿ ವಿಸ್ತರಿಸಲಾಗಿದೆ. ಈ ಕ್ರೆಡಿಟ್ ಪದ್ಧತಿ ಪಠ್ಯಕ್ರಮದೊಂದಿಗೆ ಪರಿಶೀಲಿಸಿದರೆ ಜಾತಕನ ಷಷ್ಠಸ್ಥಾನ, ತನುಸ್ಥಾನ, ಲಗ್ನೇಶ, ಷಷ್ಠೇಶ ಪುಷ್ಟಕರಿರದೆ ಈ ಕೋರ್ಸಿನಲ್ಲಿ ಪರಿಣತಿ ಪಡೆಯಲಾರರು. ಆದುದರಿಂದ ಷಷ್ಠಸ್ಥಾನ, ತನುಸ್ಥಾನಗಳೇ ಈ ಕೋರ್ಸಿನ ಕಾರಕಸ್ಥಾನಗಳಾಗಿರುತ್ತವೆ.

ಲಗ್ನ:— ಲಗ್ನದ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ವೃಷಭ, ಮಿಥುನ, ಕರ್ಕ, ತುಲಾ, ವೃಶ್ಚಿಕ, ಕುಂಭ ಈ ಲಗ್ನದವರೇ ಹೆಚ್ಚಾಗಿರುತ್ತಾರೆ.

ರಾಶಿ:— ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ಈ ಕೋರ್ಸಿನ ವ್ಯಾಸಂಗವನ್ನು ಮಾಡುವ ವಿದ್ಯಾರ್ಥಿಗಳು ದೈಹಿಕವಾಗಿ ಸದೃಢವಾಗಿರಬೇಕಾಗುತ್ತದೆ. ಆದುದರಿಂದ ಮೇಷ, ವೃಷಭ, ಸಿಂಹ, ತುಲಾ, ಮಿಥುನ, ಧನು, ವೃಶ್ಚಿಕ, ಮಕರ, ಕುಂಭ ಈ ರಾಶಿಯವರೇ ಹೆಚ್ಚಾಗಿರುವದು ಕಂಡುಬರುತ್ತದೆ.

ಕೃಷಿವಿಜ್ಞಾನದಲ್ಲಿಯೂ ಸ್ನಾತಕೋತ್ತರ ಅಭ್ಯಾಸದ ಸವಲತ್ತು ಇದೆ. ಕೃಷಿವಿಜ್ಞಾನದಲ್ಲಿ ಬಿ. ಎಸ್‌ಸಿ. ಪದವಿಯನ್ನು ಪಡೆದಿರಬೇಕು. ಈ ಪದವಿಯಲ್ಲಿ ಪ್ರಥಮವರ್ಗದಲ್ಲಿ ಉತ್ತೀರ್ಣರಾಗಿದ್ದರೆ ಹೆಚ್ಚು ಪ್ರಾಧಾನ್ಯತೆ ದೊರೆಯುತ್ತದೆ. ಎಮ್. ಎಸ್‌ಸಿ. ಕೃಷಿವಿಜ್ಞಾನ ೨ ವರ್ಷಗಳ ಅವಧಿಯದು ಅಥವಾ ೬೪ ಕ್ರೆಡಿಟ್ ಗಂಟೆಗಳದು ಇರುತ್ತದೆ. ಈ ಹಂತದಲ್ಲಿ ಮಣ್ಣು ವಿಜ್ಞಾನ, ಕೀಟಕಶಾಸ್ತ್ರ, ಗಿಡರೋಗಶಾಸ್ತ್ರ, ಕೃಷಿ ಅರ್ಥಶಾಸ್ತ್ರ, ಕೃಷಿ ವಿಸ್ತರಣೆ, ಕೃಷಿಸಸ್ಯಶಾಸ್ತ್ರ, ಕೃಷಿವಾರ್ತಾಶಾಸ್ತ್ರ, ಕೃಷಿ ಅಣುಜೀವಶಾಸ್ತ್ರ, ಮೊದಲಾದ ವಿಷಯಗಳಲ್ಲಿ ತಜ್ಞತೆ ಪಡೆಯಬಹುದು. ಇನ್ನು ಫಲಜ್ಯೋತಿಷ್ಯಶಾಸ್ತ್ರದ ಮೇರೆಗೆ ಈ ಸ್ನಾತಕೋತ್ತರ ಪದವಿ ಪಡೆಯಲು ಈ ಕೆಳಗಿನ ಸಂಗತಿಗಳು ಜಾತಕದಲ್ಲಿ ಪೂರಕವಿರಬೇಕು.

೧) ಸ್ನಾತಕೋತ್ತರ ಪದವಿಯ ಸ್ಥಾನವಾದ ಪಂಚಮ ಹಾಗೂ ಪಂಚಮೇಶ ಜಾತಕದಲ್ಲಿ ಪೋಷಕರಿರಬೇಕು.

೨) ಕೃಷಿಕೋರ್ಸಿನ ಮುಖ್ಯ ಕಾರಕಗ್ರಹಗಳಾದ ಶನಿ-ಚಂದ್ರರು ಜಾತಕದಲ್ಲಿ ಪೋಷಕರಿರಬೇಕು.

೩) ಪದವೀ ಪಡೆಯಲು ಕಾರಕಗ್ರಹವಾದ ಗುರುವೂ ಬಲಾಢ್ಯನಿರಬೇಕು.

೪) ಶಿಕ್ಷಣಕಾರಕಗ್ರಹವು ಪೋಷಕವಿರಬೇಕು.

೫) ವಿದ್ಯಾರ್ಜನೆಯ ಅವಧಿಯು ಅನುಕೂಲವಿರಬೇಕು. ಓಗ

ಮೇಲ್ಕಂಡ ಐದು ಸಂಗತಿಗಳು ಪೂರಕವಿದ್ದ ಜಾತಕನು ಸ್ನಾತಕೋತ್ತರ ಪದವಿಯ ಶಿಕ್ಷಣವನ್ನು ಪಡೆಯುವನು.

**ಮತ್ಸ್ಯೋದ್ಯಮ ಶಿಕ್ಷಣ:**— ಕೃಷಿವಿಜ್ಞಾನ ಹಾಗು ಪಶುವೈದ್ಯ ವಿಜ್ಞಾನ ವಿಶ್ವವಿದ್ಯಾಲಯದಲ್ಲಿ ಮತ್ಸ್ಯೋದ್ಯಮ ಶಿಕ್ಷಣ ವ್ಯಾಸಂಗಮಾಡಲು ವ್ಯವಸ್ಥೆಯಿತ್ತು. ಆದರೆ ಇತ್ತೀಚೆಗೆ ಮತ್ಸ್ಯೋದ್ಯಮವೂ ಒಂದು ಸ್ವತಂತ್ರ ವಿಷಯವನ್ನಾಗಿ ಕಲಿಸಲಾಗುತ್ತಿದೆ. ಜಪಾನ, ಆಸ್ಟ್ರೇಲಿಯಾ, ಇಂಗ್ಲಂಡ್ ಮೊದಲಾದ ರಾಷ್ಟ್ರಗಳಲ್ಲಿ ಮತ್ಸ್ಯೋದ್ಯಮ ಬಹಳ ಮಹತ್ವದ ಉದ್ಯೋಗ. ಈ ಉದ್ಯೋಗದ ಶಿಕ್ಷಣವನ್ನು ಶಾಸ್ತ್ರೋಕ್ತವಾಗಿ ಅಭ್ಯಾಸ ಮಾಡಲಾಗುತ್ತದೆ. ಏಕೆಂದರೆ ಜಲಚರಗಳಾದ ಮತ್ಸ್ಯಗಳನ್ನು ಹಿಡಿಯುವಿಕೆ ಹಾಗೂ ಅವುಗಳನ್ನು ಕೆಡದಂತೆ ಕಾಪಾಡಿ ಮಾರುವದಕ್ಕಾಗಿ ಡಬ್ಬಿಗಳಲ್ಲಿ ಹಾಕಿ ಭದ್ರಗೊಳಿಸಬೇಕಾಗುತ್ತದೆ. ಇದಲ್ಲದೆ ಮೀನದ ಎಣ್ಣೆಯನ್ನು ತೆಗೆದು ಸರಿಯಾಗಿ ಇಡಬೇಕಾಗುತ್ತದೆ. ಈ ಎಲ್ಲ ಕಾರ್ಯಗಳಿಗೂ ವಿಜ್ಞಾನದ ನೆರವು ಅವಶ್ಯವಿರುತ್ತದೆ. ಭಾರತದಲ್ಲಿ ಪ್ರಥಮತಃ ಕರ್ನಾಟಕ ರಾಜ್ಯದ ಮಂಗಳೂರಲ್ಲಿ ಮತ್ಸ್ಯೋದ್ಯಮ ಕಾಲೇಜನ್ನು ತೆಗೆಯಲು ನಿರ್ಧರಿಸಿರುವದು ಶ್ಲಾಘನೀಯ. ಇದನ್ನು ಪಿ. ಯು. ಸಿ. ಆದನಂತರ ಮೂರು ವರ್ಷಗಳ ಕೋರ್ಸನ್ನಾಗಿ ಅಧ್ಯಯನ ಮಾಡುವದಕ್ಕಾಗಿ ಸರಕಾರವು ಯೋಜಿಸಿದೆ.

ಇದರಲ್ಲಿ ಬಹುಶಃ ಪ್ರಾಣಿಶಾಸ್ತ್ರ, ರಸಾಯನಶಾಸ್ತ್ರ, ಸಮುದ್ರಶಾಸ್ತ್ರ, ಮತ್ಸ್ಯೋತ್ಪಾದನಾಶಾಸ್ತ್ರ, ಮತ್ಸ್ಯರೋಗಶಾಸ್ತ್ರ, ಮತ್ಸ್ಯ ಅರ್ಥಶಾಸ್ತ್ರ, ಮತ್ಸ್ಯಕೀಟಕಶಾಸ್ತ್ರ, ಮತ್ಸ್ಯವಿಸ್ತರಣಶಾಸ್ತ್ರ ಮೊದಲಾದ ವಿಷಯಗಳನ್ನು ಕಲಿಯಬಹುದು. ಇನ್ನೊಂದು ಈ ಕೋರ್ಸಿನ ಹಿನ್ನೆಲೆಯಲ್ಲಿ ಜ್ಯೋತಿಷ್ಯದ ವಿಚಾರವೇನು ಎಂಬುದನ್ನು ಪರಿಶೀಲಿಸುವಾ.

**ಕಾರಕಗ್ರಹ :**— ಪಿ. ಯು. ಸಿ. (ವಿಜ್ಞಾನ)ದಲ್ಲಿ ಸಿ. ಬಿ. ಝಡ್. ಗುಂಪಿನ ವಿಷಯಗಳನ್ನು ಆಯ್ದುಕೊಂಡವರಿಗೆ ಇಲ್ಲಿ ಪ್ರವೇಶ ಮಾತ್ರ ದೊರೆಯಬಹುದಾಗಿದೆ. ಆದುದರಿಂದ ರವಿ-ಚಂದ್ರ-ಶನಿಯರೇ ಈ ಕೋರ್ಸಿನ ಕಾರಕಗ್ರಹಗಳು. ಅದರಲ್ಲಿಯೂ ಚಂದ್ರನು ಹೆಚ್ಚು ಕಾರಕನಿರುವನು.

ಏಕೆಂದರೆ ಸಮುದ್ರಶಾಸ್ತ್ರ, ಮತ್ಸ್ಯೋತ್ಪಾದನೆ ಮೊದಲಾದ ಜಲ ಹಾಗೂ ಜಲಚರಗಳ ಮೇಲೆ ಚಂದ್ರನ ಆಧಿಪತ್ಯವಿರುತ್ತದೆ. ಆದುದರಿಂದ ಚಂದ್ರನು ಜಾತಕದಲ್ಲಿ ಪೋಷಕನಿರದೆ ಯಾವ ವಿದ್ಯಾರ್ಥಿಯೂ ಈ ಕೋರ್ಸಿನಲ್ಲಿ ತಜ್ಞನಾಗಲಾರನು.

ಸ್ಥಾನ :— ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ಇದೊಂದು ವೃತ್ತಿ ಶಿಕ್ಷಣವಿರುವದರಿಂದ ಷಷ್ಠಸ್ಥಾನವೇ ಈ ಕೋರ್ಸಿನ ಕಾರಕಸ್ಥಾನವು. ಷಷ್ಠದ ನಂತರ ತೃತೀಯ ಸ್ಥಾನವನ್ನು ಪರಿಶೀಲಿಸಬೇಕು, ಏಕೆಂದರೆ ಇಲ್ಲಿ ಥೇರಿಗಿಂತ ಪ್ರಾತ್ಯಕ್ಷಿಕೆಗೇ ಹೆಚ್ಚು ಮಹತ್ವವಿರುತ್ತದೆ. ಆದುದರಿಂದ ಈ ಸ್ಥಾನಗಳೂ ಹಾಗೂ ಈ ಸ್ಥಾನಾಧೀಶರೂ ಪೋಷಕರಿರದೆ ಯಾವ ವಿದ್ಯಾರ್ಥಿಯೂ ಈ ಕೋರ್ಸಿನಲ್ಲಿ ಪ್ರವೀಣನಾಗಲಾರನು.

ಲಗ್ನ :— ಲಗ್ನದ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ವೃಷಭ, ಕರ್ಕ, ತುಲಾ, ವೃಶ್ಚಿಕ, ಮೀನ ಈ ಲಗ್ನದ ವಿದ್ಯಾರ್ಥಿಗಳೂ ತದನಂತರ ಸಿಂಹ, ಧನು ಈ ಲಗ್ನದವರೂ ಈ ಕೋರ್ಸಿನಲ್ಲಿ ತಜ್ಞತೆ ಪಡೆಯಬಹುದು.

ರಾಶಿ:— ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ಜಲರಾಶಿಯವರಾದ ಕರ್ಕ, ವೃಶ್ಚಿಕ, ಮೀನ ಈ ರಾಶಿಯವರೂ ತದನಂತರ ಭೂ-ರಾಶಿಯವರಾದ ವೃಷಭ, ಕನ್ಯಾ, ಮಕರ ಈ ರಾಶಿಯವರೂ ಈ ಕೋರ್ಸಿನಲ್ಲಿ ತಜ್ಞರಿರುವದು ಕಂಡುಬರುತ್ತದೆ.

ಕ್ಷೀರವಿಜ್ಞಾನದ ಕೋರ್ಸು (Dairy course):— ಕ್ಷೀರ ವಿಜ್ಞಾನ ಶಾಸ್ತ್ರವನ್ನು ಕೆಲವು ವಿಶ್ವವಿದ್ಯಾಲಯಗಳು ಈ ಕೋರ್ಸಿನಲ್ಲಿಯೂ ಕೂಡ ಡಿಪ್ಲೋಮಾ, ಪದವಿ ಕೋರ್ಸುಗಳನ್ನು ಪಡೆದುಕೊಳ್ಳಲು ಅವಕಾಶ ಮಾಡಿವೆ. ಕ್ಷೀರ ಹಿಂಡಾವದು, ಕ್ಷೀರವನ್ನು ಕೆಡದಂತೆ ಕಾಪಾಡುವದು, ಬಾಟಲಿಂಗ್ ಮಾಡುವದು ಮೊದಲಾದ ವ್ಯಾಸಂಗ ಮಾಡಬೇಕಾಗುತ್ತದೆ. ಇದರಲ್ಲಿ ಬಹುಶಃ ರಸಾಯನಶಾಸ್ತ್ರ, ಪ್ರಾಣಿಶಾಸ್ತ್ರ, ದುಗ್ಧ ಟೆಕ್ನಾಲಜಿ, ಹೈನಶಾಸ್ತ್ರ, ಪಶುಸಂಗೋಪನಶಾಸ್ತ್ರ, ಪಶುರೋಗಶಾಸ್ತ್ರ, ಕ್ಷೀರಶಾಸ್ತ್ರ, ಪಶುವೈದ್ಯಶಾಸ್ತ್ರ, ಪ್ರಾಣಿರೋಗಶಾಸ್ತ್ರ, ಪಶು ಆರೋಗ್ಯಶಾಸ್ತ್ರ ಮೊದಲಾದ

ವಿಷಯಗಳನ್ನು ಕಲಿಯಬೇಕಾಗುತ್ತದೆ. ಆದುದರಿಂದ ಈ ಕೋರ್ಸಿನ ವಿಷಯವಾಗಿ ಜ್ಯೋತಿಷ್ಯದ ವಿಚಾರವೇನು ಎಂಬುದನ್ನು ಪರಿಶೀಲಿಸುವಾ.

**ಕಾರಕಗ್ರಹ:—** ಕ್ಷೀರ ಹಿಂಡುವದು ಹಾಗೂ ಕೆಡದಂತೆ ಕಾಪಾಡುವದು ಇದು ಚಂದ್ರನ ಗುಣಧರ್ಮವು. ಆದುದರಿಂದ ಚಂದ್ರನೇ ಈ ಕೋರ್ಸಿನ ಕಾರಕಗ್ರಹವು. ಚಂದ್ರನ ತರುವಾಯ ಶನಿ–ರವಿಯರನ್ನು ಪರಿಶೀಲಿಸಬೇಕು. ಏಕೆಂದರೆ ಕ್ಷೀರ ಕೊಡುವ ಪ್ರಾಣಿಗಳ ಮೇಲೆ ಹಾಗೂ ಅವುಗಳ ಮೇವು ಮೊದಲಾದ ಆಹಾರಗಳ ಮೇಲೆ ಹಾಗೂ ಈ ಕೋರ್ಸಿನ ರಸಾಯನಶಾಸ್ತ್ರದ ಮೇಲೆ ಶನಿಯು ಆಧಿಪತ್ಯವಿರುತ್ತದೆ. ಇದರಂತೆ ಈ ಕೋರ್ಸಿನ ಪ್ರಾಣಿಶಾಸ್ತ್ರದ ಮೇಲೆ ರವಿಯು ಆಧಿಪತ್ಯವಿರುತ್ತದೆ. ಆದುದರಿಂದ ಚಂದ್ರ–ಶನಿ–ರವಿಯರೇ ಈ ಕೋರ್ಸಿನ ಕಾರಕಗ್ರಹಗಳು.

**ಸ್ಥಾನ:—** ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ಈ ಕೋರ್ಸು ಕೂಡ ವ್ಯಕ್ತಿಶಿಕ್ಷಣದಲ್ಲಿಯೇ ಬರುವದರಿಂದ ಷಷ್ಠಸ್ಥಾನವೂ, ಪ್ರಾತ್ಯಕ್ಷಿಕೆಗೆ ಹೆಚ್ಚು ಮಹತ್ವವಿರುವದರಿಂದ ತೃತೀಯಸ್ಥಾನವೂ ಈ ಕೋರ್ಸಿನ ಕಾರಕ ಸ್ಥಾನಗಳಾಗಿರುತ್ತವೆ. ಆದುದರಿಂದ ಈ ಸ್ಥಾನಗಳೂ, ಈ ಸ್ಥಾನಾಧೀಶರೂ ಪೋಷಕರಿರದೆ ಯಾವ ವಿದ್ಯಾರ್ಥಿಯೂ ಈ ಕೋರ್ಸಿನಲ್ಲಿ ತಜ್ಞತೆ ಪಡೆಯಲಾರನು.

**ಲಗ್ನ :—** ಲಗ್ನದ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ವೃಷಭ, ಕರ್ಕ, ತುಲಾ, ವೃಶ್ಚಿಕ ಈ ಲಗ್ನದ ವಿದ್ಯಾರ್ಥಿಗಳೂ ತದನಂತರ ಸಿಂಹ, ಧನು, ಮೀನ ಈ ಲಗ್ನದ ವಿದ್ಯಾರ್ಥಿಗಳೂ ಈ ಕೋರ್ಸಿನಲ್ಲಿ ತಜ್ಞರಿರಬಹುದಾಗಿದೆ.

**ರಾಶಿ :—** ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ವೃಷಭ, ಮಿಥುನ, ಕರ್ಕ, ಕನ್ಯಾ, ತುಲಾ, ಕುಂಭ, ಮೀನ ಈ ರಾಶಿಯ ವಿದ್ಯಾರ್ಥಿಗಳು ಈ ಕೋರ್ಸಿನಲ್ಲಿ ತಜ್ಞತೆಯನ್ನು ಪಡೆಯಬಹುದು.

### ೮. ಪಶುವೈದ್ಯ ವಿಜ್ಞಾನ ಕೋರ್ಸುಗಳು

ಪಶುವೈದ್ಯ ವಿಜ್ಞಾನ ಕೃಷಿವಿಜ್ಞಾನದ ಅಂಗವೋ ಅಥವಾ ವೈದ್ಯಕೀಯ ಶಾಸ್ತ್ರದ ಅಂಗವೋ ಎಂಬ ಪ್ರಶ್ನೆಯನ್ನು ಬಿಡಿಸುವದು ಕ್ಲಿಷ್ಟಕರ.

ಕೆಲವು ಕಾಲ ಪಶುವೈದ್ಯ ವಿಜ್ಞಾನವನ್ನು ವೈದ್ಯಕೀಯ ಶಿಕ್ಷಣವೆಂದು ಪರಿಗಣಿಸಿ ವೈದ್ಯಕೀಯ ಕಾಲೇಜುಗಳೊಡನೆ ಪಶುವೈದ್ಯವಿಜ್ಞಾನ ಕಾಲೇಜುಗಳನ್ನು ಕೂಡಿಸುತ್ತಿದ್ದರು. ಆದರೆ ಇತ್ತೀಚೆಗೆ ಕೃಷಿವಿಜ್ಞಾನ ವಿಶ್ವವಿದ್ಯಾಲಯಗಳ ಕಾಯ್ದೆ ಭಾರತದಲ್ಲಿ ಜಾರಿಗೆ ಬಂದನಂತರ ಪಶುವೈದ್ಯ ವಿಜ್ಞಾನವನ್ನು ಕೃಷಿವಿಜ್ಞಾನ ವಿಶ್ವವಿದ್ಯಾಲಯಗಳಲ್ಲಿ ಸೇರಿಸಲಾಗಿದೆ. ಕೃಷಿವಿಜ್ಞಾನ ವಿದ್ಯಾರ್ಥಿಗಳು ಹಾಗೂ ಪಶುವೈದ್ಯವಿಜ್ಞಾನ ವಿದ್ಯಾರ್ಥಿಗಳು ಕೆಲವು ವಿಷಯಗಳನ್ನು ಸಾಮಾನ್ಯವಾಗಿ ಅಭ್ಯಾಸ ಮಾಡಬೇಕಾಗುತ್ತದೆ ಎಂಬ ವಿಷಯ ಮೇಲಿನ ಅಂಶಕ್ಕೆ ಪುಷ್ಟೀಕರಣ ನೀಡುತ್ತದೆ. ಇನ್ನು ಫಲಜ್ಯೋತಿಷ್ಯಶಾಸ್ತ್ರದ ಮೇರೆಗೆ ಕೃಷಿವಿಜ್ಞಾನ, ಪಶುವೈದ್ಯವಿಜ್ಞಾನ ಹಾಗೂ ವೈದ್ಯಕೀಯ ಕೋರ್ಸುಗಳ ಕಾರಕಗ್ರಹ, ಲಗ್ನ, ಸ್ಥಾನಾದಿಗಳಿಗಾಗಿ ಅನೇಕ ಅಂಶಗಳಲ್ಲಿ ಸಾನ್ನಿಧ್ಯತೆ ಇರುವದಲ್ಲದೆ ಕೆಲ ಯೋಗಗಳು ವಿಭಿನ್ನವಿರುವದರಿಂದ ಪ್ರತ್ಯೇಕದಾಗಿ ಕೊಡಲಾಗಿದೆ.

ಪಿ. ಯು. ಸಿ. ಅಥವಾ ೧೨ನೆಯ ಇಯತ್ತೆಯಲ್ಲಿ ಭೌತಿಕ ಶಾಸ್ತ್ರ, ರಸಾಯನಶಾಸ್ತ್ರ, ಜೀವಶಾಸ್ತ್ರ. ಪ್ರಾಣಿಶಾಸ್ತ್ರ, ಸಸ್ಯಶಾಸ್ತ್ರಗಳಲ್ಲಿ ಯಾವುದಾದರೂ ಎರಡು ವಿಷಯಗಳನ್ನಾದರೂ ತೆಗೆದುಕೊಂಡಿದ್ದರೆ ಮಾತ್ರ ಬಿ. ಎಸ್‌ಸಿ. ಪಶುವೈದ್ಯವಿಜ್ಞಾನ ಕೋರ್ಸಿಗೆ ಪ್ರವೇಶ ಸಿಗುತ್ತದೆ. ಮಿಕ್ಕ ಎಲ್ಲ ನಿಯಮಗಳು ಬಿ. ಎಸ್‌ಸಿ. ಕೃಷಿವಿಜ್ಞಾನ ಕೋರ್ಸುಗಳ ಪದವಿಗೆ ಪ್ರವೇಶ ಸಿಗಬೇಕಾದ ನಿಯಮಗಳಂತೆಯೇ ಈ ಕೋರ್ಸಿಗೂ ನಿರ್ದಿಷ್ಟಗೊಳಿಸಲಾಗಿದೆ. ಇಲ್ಲಿ ಒಂದು ಮಹತ್ವದ ಅಂಶವೆಂದರೆ ಬಿ. ಎಸ್‌ಸಿ. ಕೃಷಿವಿಜ್ಞಾನ ಕೋರ್ಸಿಗೆ ೪ ವರ್ಷಗಳ ಅಧ್ಯಯನದ ಅವಧಿಯಿದ್ದರೆ ಈ ಕೋರ್ಸಿಗೆ ೫ ವರ್ಷಗಳ ಅವಧಿಯಿದ್ದು ಆ ಕೋರ್ಸಿಗೆ ೪ ವರ್ಷಗಳ ಅವಧಿಯಲ್ಲಿ ೧೯೨ ಕ್ರೆಡಿಟ್ ಗಂಟೆಗಳ ಕಾಲ ಅಭ್ಯಾಸ ಮಾಡಬೇಕಾದರೆ ಈ ಕೋರ್ಸಿಗೆ ೨೪೦ ಕ್ರೆಡಿಟ್ ಗಂಟೆಗಳ ಪಠ್ಯಾವಧಿಯನ್ನು ಇದಕ್ಕೆ ನಿರ್ದಿಷ್ಟಗೊಳಿಸಲಾಗಿದೆ.

ಇಷ್ಟೊಂದು ಹಿನ್ನೆಲೆಯ ಈ ಕೋರ್ಸಿನಲ್ಲಿ ಈ ಕೋರ್ಸಿನ ವಿಷಯ

ವಾಗಿ ಜ್ಯೋತಿಷ್ಯದ ವಿಚಾರವೇನು ಜಾತಕವೇತಿರಬೇಕು, ಕಾರಕಗ್ರಹ, ಲಗ್ನ, ಸ್ಥಾನಾದಿಗಳಾವವು ಎಂಬುದನ್ನು ಪರಿಶೀಲಿಸುವಾ.

ಕಾರಕಗ್ರಹ:— ಬಿ. ಎಸ್‌ಸಿ. ಕೃಷಿವಿಜ್ಞಾನ, ಕೋರ್ಸುಗಳಿಗೆ ಇರುವಂತೆ ಮಾನವಶಾಸ್ತ್ರ, ಪ್ರಾಣಿವಿಜ್ಞಾನಶಾಸ್ತ್ರ ಇವುಗಳನ್ನು ಕಡ್ಡಾಯವಾಗಿ ಅಭ್ಯಾಸ ಮಾಡಬೇಕಾಗುತ್ತದೆ. ಹಾಗೂ ಈ ಎರಡೂ ಕೋರ್ಸುಗಳಲ್ಲಿ ೪೮ ಕ್ರೆಡಿಟ್ ಗಂಟೆಗಳ ಅಭ್ಯಾಸ ಮಾಡಿದನಂತರ ಈ ಕೋರ್ಸಿನ ವಿಶಿಷ್ಟ ವಿಷಯವಾದ ಅರ್ಥಾತ್ ಪಶುವೈದ್ಯವಿಜ್ಞಾನ ಇದಕ್ಕೆ ಸಂಬಂಧಿಸಿದ ವಿಷಯಗಳಲ್ಲಿ ತಜ್ಞತೆ ಪಡೆಯಬೇಕಾಗುತ್ತದೆ. ಅಲ್ಲದೆ ಮೂಲ ಪಶುವೈದ್ಯವಿಜ್ಞಾನ ಕೋರ್ಸುಗಳಲ್ಲಿ ೧೫೪ ಕ್ರೆಡಿಟ್ ಗಂಟೆಗಳ ಅಭ್ಯಾಸವನ್ನು ಕಡ್ಡಾಯವಾಗಿ ಮಾಡಬೇಕಾಗುತ್ತದೆ. ಇಲ್ಲಿ ಮುಖ್ಯ ವಿಷಯಗಳಾದ ಶರೀರ ರಚನಾ ಶಾಸ್ತ್ರ, ಪ್ರಾಣಿಜೀವಕಾರ್ಯವಿಜ್ಞಾನ, ಔಷಧಿಯ ಗುಣಧರ್ಮಶಾಸ್ತ್ರ. ಪಶುಕೀಟಕಶಾಸ್ತ್ರ, ಪರಾವಲಂಬಿ ಕೀಟಕಶಾಸ್ತ್ರ, ಪಶುಶಸ್ತ್ರಚಿಕಿತ್ಸಾಶಾಸ್ತ್ರ, ಪಶು–ಸ್ತ್ರೀರೋಗಶಾಸ್ತ್ರ, ಪಶು–ಆರೋಗ್ಯಶಾಸ್ತ್ರ, ಪಶುವೈದ್ಯಶಾಸ್ತ್ರ, ಮಾಂಸ ತಪಾಸಣೆ ಹಾಗೂ ಪಕ್ಷಿಗಳಿಗೆ ಸಂಬಂಧಿಸಿದ ರೋಗಗಳು ಇವಲ್ಲದೆ ಪಶುವೈದ್ಯ ವಿಜ್ಞಾನದ ಹತ್ತಿರದ ವಿಷಯಗಳ ಕೋರ್ಸುಗಳಾದ ಪ್ರಾಣಿಪೌಷ್ಟಿಕ ಆಹಾರ, ಪ್ರಾಣಿ ಉತ್ಪತ್ತಿ, ಪ್ರಾಣಿ ವ್ಯವಸ್ಥೆ, ದನಗಳ ಮೇವು, ಕ್ಷೀರಶಾಸ್ತ್ರ. ಜೀವಜಂತು ಉತ್ಪಾದನೆ, ವಿಸ್ತರಣೆಗಳ ರೀತಿಗಳು, ಪಶುವೈದ್ಯಸಂಶೋಧನೆಯಲ್ಲಿಯ ಪ್ರಯೋಗತಂತ್ರ, ಪ್ರಾಣಿ ಉತ್ಪಾದನೆ ಇವೆಲ್ಲ ವಿಷಯಗಳನ್ನು ಈ ಕೋರ್ಸಿನಲ್ಲಿ ಅಭ್ಯಾಸ ಮಾಡಬೇಕಾಗುತ್ತದೆ. ಇನ್ನೂ ಜ್ಯೋತಿಷ್ಯ ಶಾಸ್ತ್ರದ ಮೇರೆಗೆ ರವಿ, ಚಂದ್ರ, ರಾಹು, ಮಂಗಳ, ಶನಿ ಈ ಐದು ಗ್ರಹಗಳು ಕಾರಕವಿರುತ್ತವೆ. ಅವರಲ್ಲಿಯೂ ರವಿ–ಚಂದ್ರರೇ ಹೆಚ್ಚು ಕಾರಕರಿರುತ್ತಾರೆ. ಹೇಗೆಂದರೆ ಶರೀರರಚನಾಶಾಸ್ತ್ರ, ಪ್ರಾಣಿಜೀವಕಾರ್ಯ ವಿಜ್ಞಾನ, ಪಶುಸ್ವಾಸ್ಥ್ಯಶಾಸ್ತ್ರ, ಪ್ರಾಣಿರೋಗಶಾಸ್ತ್ರ, ಜೀವಜಂತು ಉತ್ಪಾದನೆ ಮೊದಲಾದ ವಿಷಯಗಳ ಮೇಲೆ ರವಿಯ ಪ್ರಭುತ್ವವಿರುವದರಿಂದ ರವಿಯಂತೂ ಜಾತಕದಲ್ಲಿ ಪೋಷಕನಿರದೆ ಯಾವ ವಿದ್ಯಾರ್ಥಿಯೂ ಈ ಕೋರ್ಸಿನಲ್ಲಿ ಯಶಸ್ಸು ಪಡೆಯಲಾರನು. ಇದರಂತೆಯೇ ಔಷಧೀಯ ಗುಣಧರ್ಮಶಾಸ್ತ್ರ, ಪಶು ಸ್ತ್ರೀರೋಗಶಾಸ್ತ್ರ, ಪ್ರಾಣಿಪೌಷ್ಟಿಕ ಆಹಾರ, ದನಗಳ ಮೇವು,

ಕ್ಷೀರಶಾಸ್ತ್ರ ಈ ಎಲ್ಲ ವಿಷಯಗಳ ಮೇಲೆ ಚಂದ್ರನ ಪ್ರಭುತ್ವವಿರುವದರಿಂದ ಚಂದ್ರನೂ ಈ ಕೋರ್ಸಿನ ಪ್ರಮುಖ ಕಾರಕಗ್ರಹವಿರುವನು. ಇದರಂತೆಯೇ ಕೀಟಕಶಾಸ್ತ್ರ, ಪರಾವಲಂಬೀ ಕೀಟಕಶಾಸ್ತ್ರ, ಪಕ್ಷಿಗಳಿಗೆ ಸಂಬಂಧಿಸಿದ ಶಾಸ್ತ್ರ ಮೊದಲಾದವುಗಳ ಮೇಲೆ ರಾಹುವಿನ ಪ್ರಭುತ್ವವಿರುತ್ತದೆ. ಇನ್ನು ಪಶುಶಸ್ತ್ರಚಿಕಿತ್ಸಾಶಾಸ್ತ್ರ, ಮಾಂಸ ತಪಾಸಣೆ, ಪಶುವೈದ್ಯ ಸಂಶೋಧನೆಯಲ್ಲಿಯ ಪ್ರಯೋಗ ಇವು ಮಂಗಳನ ಗುಣಧರ್ಮದ ಶಾಸ್ತ್ರಗಳು. ಈ ಕೋರ್ಸಿನ ವಿದ್ಯಾರ್ಥಿಗಳು ಕೃಷಿಕೋರ್ಸಿನ ವಿಷಯಗಳನ್ನೂ ಅಭ್ಯಾಸ ಮಾಡಬೇಕಾಗುವದರಿಂದ ಶನಿಯೂ ಈ ಕೋರ್ಸಿನ ಕಾರಕಗ್ರಹವಾಗಿರುತ್ತಾನೆ. ಹೀಗೆ ರವಿ, ಚಂದ್ರ, ಶನಿ, ಮಂಗಳ, ರಾಹು ಈ ಗ್ರಹಗಳು ಪೋಷಕರಿರದೆ ಯಾವ ವಿದ್ಯಾರ್ಥಿಯೂ ಈ ಕೋರ್ಸಿನಲ್ಲಿ ಯಶಸ್ಸು ಪಡೆಯಲಾರನು.

ಸ್ಥಾನ :— ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ಷಷ್ಠಸ್ಥಾನವೇ ಈ ಕೋರ್ಸಿನ ಕಾರಕಸ್ಥಾನವಿರುತ್ತದೆ. ಏಕೆಂದರೆ ಪ್ರಾತ್ಯಕ್ಷಿಕೆ, ಪ್ರಯೋಗ ಇವು ಮುಖ್ಯ ವಿಷಯವಿರುವದರಿಂದ ಈ ಸ್ಥಾನಗಳೂ ಹಾಗೂ ಈ ಸ್ಥಾನಾಧೀಶರೂ ಚತುರ್ಥ, ಷಷ್ಠಗಳ ನಂತರ ತನುಸ್ಥಾನ ಹಾಗೂ ಲಗ್ನೇಶರನ್ನು ಪರಿಶೀಲಿಸಬೇಕು. ಏಕೆಂದರೆ ಈ ಕೋರ್ಸಿನ ವ್ಯಾಸಂಗವನ್ನು ಮಾಡುವ ವಿದ್ಯಾರ್ಥಿಗಳು ದೈಹಿಕವಾಗಿ ಸದೃಢರಿರಬೇಕಾಗುತ್ತದೆ. ಸದೃಢವಿರಲು ಲಗ್ನೇಶ ಹಾಗೂ ತನುಸ್ಥಾನ ಪೋಷಕವಿರಬೇಕು.

ಲಗ್ನ :— ಲಗ್ನದ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ವೃಷಭ, ಕರ್ಕ, ತುಲಾ, ವೃಶ್ಚಿಕ, ಧನು, ಕುಂಭ, ಮೀನ ಈ ಲಗ್ನದವರೇ ಹೆಚ್ಚಾಗಿರುವದು ಕಂಡುಬರುತ್ತದೆ.

ರಾಶಿ :— ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ದೈಹಿಕವಾಗಿ ಸದೃಢವಿರಬೇಕಾಗಿರುವ ರಾಶಿಯವರೇ ಈ ಕೋರ್ಸಿನಲ್ಲಿ ಪರಿಣತಿ ಪಡೆಯುವದರಿಂದ ಮೇಷ, ವೃಷಭ, ಸಿಂಹ, ಮಿಥುನ, ತುಲಾ, ಧನು, ವೃಶ್ಚಿಕ, ಮಕರ, ಕುಂಭ ಈ ರಾಶಿಯವರೇ ಹೆಚ್ಚಾಗಿರುವದು ಕಂಡುಬರುತ್ತದೆ.

## ವೆಟರಿನರಿ ಲಿವ್ಸ್ ಸ್ಟಾಕ್ ಇನ್‌ಸ್ಪೆಕ್ಟರ್ಸ್ ಕೋರ್ಸ್ (ಸ್ಟಾಕ್‌ಮನ್ಸ್ ಟ್ರೇನಿಂಗ್) Veterinary Live-Stock Inspectors

ಪಶು ಸಂಗೋಪನಕ್ಕಾಗಿ ರಾಷ್ಟ್ರಾದ್ಯಂತ ಮಹತ್ವದ ಸ್ಥಾನವನ್ನು ಕೊಟ್ಟಿರುವದರಿಂದ ಈ ತರಬೇತಿಗೂ ಬಹಳ ಮಹತ್ವವಿದೆ. ಕೇವಲ ಶಾಕಾಹಾರಿಗಳಾಗಿ ಭಾರತೀಯರು ಉಳಿದರೆ ಆಹಾರಸಮಸ್ಯೆ ಬಗೆಹರಿಸಲಿಕ್ಕಾಗಲಿಕ್ಕಿಲ್ಲವಾದ್ದರಿಂದ ಪ್ರಾಣಿಗಳಿಂದ ದೊರೆಯುವ ಆಹಾರಕ್ಕೂ ಮಹತ್ವ ನೀಡಬೇಕೆಂದು ಸರಕಾರದ ಉದ್ದೇಶವಿರುತ್ತದೆ. ಈ ಸ್ಥಿತಿಯಲ್ಲಿ ಪಶು-ಸಂಗೋಪನೆಗೆ, ಜೀವಂತ ಪಶುಸಂರಕ್ಷಣೆಗೆ ಎಷ್ಟು ಮಹತ್ವವಿದೆಯೆಂಬುದನ್ನು ಬೇರೆಹೇಳಬೇಕಾಗಿಲ್ಲ. ಇದರಿಂದಾಗಿ ಪಶು-ಸಂಗೋಪನೆ, ಪಶುಚಿಕಿತ್ಸೆ, ಪಶು ಸಂರಕ್ಷಣೆಗಳಿಗೂ ಮಹತ್ವ ದೊರೆತಿದೆ. ಹೀಗಾಗಿ ಪಶುಚಿಕಿತ್ಸೆ, ಪಶು ಮೇಲ್ವಿಚಾರಕರ ಅಥವಾ ವೆಟರಿನರಿ ಲೈವ್‌ಸ್ಟಾಕ್ ಇನಸ್ಪೆಕ್ಟರ್‌ಗಳ ಬೇಡಿಕೆ ಹೆಚ್ಚುತ್ತಿರುವದು ಸ್ವಾಭಾವಿಕವು. ಇದಕ್ಕಾಗಿಯೇ ತರಬೇತಿ ಪಡೆದ ಸಿಬ್ಬಂದಿಯನ್ನು ತಯಾರು ಮಾಡಲಾಗುತ್ತದೆ. ಇದೇ ವೆಟರಿನರಿ ಲೈವ್ಸ್ ಸ್ಟಾಕ್ ಇನಸ್ಪೆಕ್ಟರ್ ಕೋರ್ಸ್ ಇರುತ್ತದೆ. ಈ ಕೋರ್ಸ್ ಒಂದು ವರ್ಷದ್ದಿರುತ್ತದೆ. ಕೆಲವು ಪ್ರಾಂತಗಳಲ್ಲಿ ಈ ಕೋರ್ಸ್ ಒಂದೂವರೆ ವರ್ಷ ಹಾಗೂ ಎರಡು ವರ್ಷಗಳದ್ದಿರುತ್ತದೆ. ಈ ಕೋರ್ಸಿನಲ್ಲಿ ಪ್ರವೇಶ ಪಡೆಯಲು ಅಭ್ಯರ್ಥಿಯು ಎಸ್. ಎಸ್. ಎಲ್. ಸಿ. ಯಲ್ಲಿ ಉತ್ತೀರ್ಣನಾಗಿರಬೇಕಾಗುವದಲ್ಲದೆ ದೈಹಿಕ ಅರ್ಹತೆಗೂ ಪ್ರಾಧಾನ್ಯತೆಯಿದೆ.

ಈ ಕೋರ್ಸಿನಲ್ಲಿ ಎಲ್ಲ ಪಶುಗಳ ಶಾರೀರಿಕ ರಚನೆಯ ವಿಷಯವನ್ನು ಜೀವಕಾರ್ಯವಿಜ್ಞಾನ, ಆರೋಗ್ಯಶಾಸ್ತ್ರ, ಪಶುಸಂಗೋಪನೆ. ಕ್ಷೀರವಿಜ್ಞಾನ, ಔಷಧ, ಪ್ರಾಥಮಿಕ ಶಸ್ತ್ರಚಿಕಿತ್ಸೆಯ ಕ್ರಮ, ಚುಚ್ಚುಮದ್ದು, ಕೃತ್ರಿಮ ಗರ್ಭಧಾರಣೆಯ ರೀತಿ, ಸಾಂಕ್ರಾಮಿಕ ರೋಗ ಮೊದಲಾದ ವಿಷಯಗಳ ವ್ಯಾಸಂಗ ಮಾಡಲಾಗುತ್ತದೆ. ಇಷ್ಟೊಂದು ಮಹತ್ವಪೂರ್ಣ ಹಾಗೂ ಉಪಯುಕ್ತವಾದ ಈ ಕೋರ್ಸಿನ ವಿಷಯವಾಗಿ ಜ್ಯೋತಿಷ್ಯದ ವಿಚಾರ

ವೇನು, ಕಾರಕಗ್ರಹ, ಲಗ್ನ, ಸ್ಥಾನ, ರಾಶ್ಯಾದಿಗಳು ಯಾವವೆಂಬುದನ್ನು ಪರಿಶೀಲಿಸುವಾ.

**ಕಾರಕಗ್ರಹ:—** ಈ ಕೋರ್ಸಿನ ಕಾರಕಗ್ರಹಗಳೆಂದರೆ ಚಂದ್ರ–ಶನಿಯರು. ಚಂದ್ರ–ಶನಿಯರು ಪೋಷಕರಿರದೆ ಯಾವ ವಿದ್ಯಾರ್ಥಿಯೂ ಈ ಕೋರ್ಸಿನಲ್ಲಿ ಯಶಸ್ಸು ಪಡೆಯಲಾರನು. ಏಕೆಂದರೆ ಪಶುವಿಗೆ ಸಂಬಂಧಿಸಿದ ಪಶುಸಂಗೋಪನೆ, ಕೃತ್ರಿಮ ಗರ್ಭಧಾರಣೆಯ ರೀತಿ, ಮದ್ದು ಹಾಗೂ ಚುಚ್ಚುಮದ್ದು ಮೊದಲಾದ ವಿಷಯಗಳ ಮೇಲೆ ಚಂದ್ರ–ಶನಿಯರ ಅಧಿಪತ್ಯವಿರುತ್ತದೆ. ಚಂದ್ರ–ಶನಿಯರ ತರುವಾಯ ರವಿಯನ್ನೂ ಪರಿಶೀಲಿಸಬೇಕು. ಏಕೆಂದರೆ ಈ ಕೋರ್ಸಿನಲ್ಲಿಯ ಪ್ರಾಣಿಶರೀರಶಾಸ್ತ್ರ, ಜೀವಕೋಶರ್ಯ ವಿಜ್ಞಾನ ಮೊದಲಾದ ವಿಷಯಗಳ ಮೇಲೆ ರವಿಯ ಅಧಿಪತ್ಯವಿರುತ್ತದೆ. ಇದರಂತೆ ಶಸ್ತ್ರಚಿಕಿತ್ಸೆ ವಿಷಯಗಳ ಮೇಲೆ ಕುಜನ ಅಧಿಪತ್ಯವಿರುವದರಿಂದ ಕುಜನೂ ಈ ಕೋರ್ಸಿನ ಕಾರಕನು. ಹೀಗೆ ಚಂದ್ರ, ಶನಿ, ರವಿ, ಕುಜ ಈ ನಾಲ್ಕು ಗ್ರಹಗಳು ಈ ಕೋರ್ಸಿನ ಕಾರಕಗ್ರಹಗಳಿದ್ದಾಗ್ಯೂ ಚಂದ್ರ–ಶನಿಯರು ರಾಶಿಬಲದವರೂ, ಸ್ಥಾನಬಲದವರೂ, ಯೋಗಕಾರಕರೂ ಇರುತ್ತಾರೆ. ಆದರೆ ರವಿ, ಕುಜರು ಕೇವಲ ರಾಶಿಬಲದವರಿರುತ್ತಾರೆ.

**ಸ್ಥಾನ:—** ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ಇದೊಂದು ವೃತ್ತಿಶಿಕ್ಷಣವಿರುವದರಿಂದ ಷಷ್ಠಸ್ಥಾನವೂ ಈ ಕೋರ್ಸಿನಲ್ಲಿ ಪ್ರಾತ್ಯಕ್ಷಿಕೆ ಹಾಗೂ ಪ್ರಾಯೋಗಿಕ ಶಿಕ್ಷಣ ಹೆಚ್ಚಾಗಿರುವದರಿಂದ ತೃತೀಯ ಸ್ಥಾನವೂ ಕಾರಕಗಳಿರುವವಲ್ಲದೆ ತನುಸ್ಥಾನವನ್ನೂ ಪರಿಶೀಲಿಸಬೇಕು. ಈ ಕೋರ್ಸಿನ ವ್ಯಾಸಂಗ ಮಾಡುವ ವಿದ್ಯಾರ್ಥಿಗಳು ದೈಹಿಕವಾಗಿ ಸದೃಢರಿರಬೇಕಾಗುತ್ತದೆ. ಹೀಗೆ ಈ ಮೂರೂ ಸ್ಥಾನಗಳೂ, ಈ ಸ್ಥಾನಾಧೀಶರೂ ಪೋಷಕರಿರುವ ವಿದ್ಯಾರ್ಥಿಗಳೂ ಈ ಕೋರ್ಸಿನಲ್ಲಿ ತಜ್ಞರಿರುತ್ತಾರೆ.

**ಲಗ್ನ:—** ಲಗ್ನದ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ವೃಷಭ, ಕರ್ಕ, ತುಲಾ, ವೃಶ್ಚಿಕ, ಮೀನ ಈ ಲಗ್ನದ ವಿದ್ಯಾರ್ಥಿಗಳೂ ತದನಂತರ ಸಿಂಹ, ಧನು ಈ ಲಗ್ನದವರೂ ಈ ಕೋರ್ಸಿನಲ್ಲಿ ಪ್ರವೀಣರಿದ್ದುದು ಕಂಡುಬರುತ್ತದೆ.

ರಾಶಿ:— ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ಈ ಕೋರ್ಸಿನ ವ್ಯಾಸಂಗ ಮಾಡುವ ವಿದ್ಯಾರ್ಥಿಗಳು ದೈಹಿಕವಾಗಿ ಸದೃಢರಾಗಬೇಕಾಗುವದರಿಂದ ಮೇಷ, ಸಿಂಹ, ತುಲಾ, ವೃಶ್ಚಿಕ, ಧನು, ಮಕರ, ಕುಂಭ ಈ ರಾಶಿಯವರೇ ಈ ಕೋರ್ಸಿನಲ್ಲಿ ತಪ್ಪರಿರುವದು ಕಂಡುಬರುತ್ತದೆ.

## ೯. ಶಿಕ್ಷಕರ ತರಬೇತಿಯ ಕೋರ್ಸುಗಳು

ಶಿಕ್ಷಣ ಯಶಸ್ವಿಯಾಗಲು ಶಿಕ್ಷಕರು ಯೋಗ್ಯರೂ, ಬುದ್ಧಿವಂತರೂ, ಕ್ರಿಯಾಶೀಲರೂ ಆಗಿರಬೇಕು ಎನ್ನುವದರಲ್ಲಿ ಯಾವ ಸಂದೇಹವೂ ಇಲ್ಲ. ಆದರೆ ಶಿಕ್ಷಕರ ತಯಾರಿಕೆಯು ಒಂದು ಸಾಧನವೇ ಎನ್ನಬಹುದು. ಇದನ್ನು ಸಾಧಿಸಲು ಕ್ರಮಬದ್ಧ ವೈಜ್ಞಾನಿಕ ತರಬೇತಿ ಕೋರ್ಸುಗಳನ್ನು ರೂಪಿಸಲಾಗಿದೆ. ಈ ತರಬೇತಿಗಳಲ್ಲಿ ಮುಖ್ಯವಾಗಿ ಯಾವ ಯಾವ ವಿಷಯಗಳನ್ನು ಯಾವ ಕ್ರಮದಲ್ಲಿ ಕಲಿಸಿದರೆ ಹೆಚ್ಚು ಪರಿಣಾಮಕಾರಿಯಾದೀತು ಎಂಬುದನ್ನು ಕಲಿಸುವದರೊಡನೆ ವಿದ್ಯಾರ್ಥಿಗಳ ಮನೋಗುಣಕ್ಕೆ ಅನುಸರಿಸಿ ಯಾವ ಯಾವ ಪದ್ಧತಿಯನ್ನನುಸರಿಸಬೇಕೆಂಬುದನ್ನು ಕೂಡ ಕಲಿಸಲಾಗುತ್ತದೆ.

ಶಿಕ್ಷಕರ ತರಬೇತಿಯಲ್ಲಿ ಸಾಮಾನ್ಯವಾಗಿ ಎಂಟು ಪ್ರಕಾರಗಳಿವೆ :

೧) ಪ್ರಾಥಮಿಕ ಶಿಕ್ಷಕರ ತರಬೇತಿ (ಟಿ. ಸಿ. ಎಚ್.),
೨) ಮಾಧ್ಯಮಿಕ ಶಿಕ್ಷಕರ ತರಬೇತಿ— ಬಿ. ಇಡಿ., ಎಮ್. ಇಡಿ. ಕೋರ್ಸುಗಳು,
೩) ಚಿತ್ರಕಲಾ ಶಿಕ್ಷಕರ ತರಬೇತಿ ಅಂದರೆ ಡಿ. ಟಿ. ಸಿ. ಕೋರ್ಸು,
೪) ಸಂಗೀತ ಶಿಕ್ಷಕರ ತರಬೇತಿ,
೫) ಶಾರೀರಕ ಶಿಕ್ಷಕರ ತರಬೇತಿ ಸಿ. ಪಿ. ಎಡ್., ಡಿ. ಪಿ. ಎಡ್. ಮೊದಲಾದ ಕೋರ್ಸುಗಳು,
೬) ಹಿಂದೀ ಶಿಕ್ಷಕ ಸನದ,
೭) ಶಿಶುವಿಹಾರ ಶಿಕ್ಷಕರ ತರಬೇತಿ,
೮) ಕೈಗಾರಿಕಾ ಶಿಕ್ಷಕರ ತರಬೇತಿ.

ಹೀಗೆ ಎಂಟು ಪ್ರಕಾರದ ಶಿಕ್ಷಕ ತರಬೇತಿ ಕೋರ್ಸುಗಳಿದ್ದು ಈ ಎಲ್ಲ ಕೋರ್ಸುಗಳ ಶಿಕ್ಷಣದ ಅವಧಿಯಲ್ಲಿ ಶಿಕ್ಷಣತತ್ತ್ವ, ತತ್ತ್ವಶಾಸ್ತ್ರ, ಶಾಲೆಗಳಲ್ಲಿಯ ಆಡಳಿತ, ಮನಶ್ಶಾಸ್ತ್ರ, ಶಿಕ್ಷಣದ ಇತಿಹಾಸ, ಪ್ರಾಯೋಗಿಕ ಶಿಕ್ಷಣ ಮೊದಲಾದ ವಿಷಯಗಳನ್ನು ಕಲಿಸಲಾಗುತ್ತದೆ. ಆದುದರಿಂದ ಈ ಎಲ್ಲ ಕೋರ್ಸುಗಳ ವಿಷಯಗಳನ್ನು ಜ್ಯೋತಿಷ್ಯ ದೃಷ್ಟಿಯಿಂದ ಪರಿಶೀಲಿಸಿದರೆ ಲಗ್ನ, ರಾಶಿ, ಸ್ಥಾನಗಳು ಸಾಮಾನ್ಯವಾಗಿ ಒಂದೇ ಇರುತ್ತವೆ. ಈ ಸಾಮಾನ್ಯ ನಿಯಮಗಳನ್ನು ಈ ಕೆಳಗಿನಂತೆ ಕೊಡಲಾಗಿದೆ.

**ಸಾಮಾನ್ಯ ನಿಯಮಗಳು:—** ೧) ಯಾವದೇ ತರಹದ ಶಿಕ್ಷಕರ ತರಬೇತಿ ಕೋರ್ಸಿಗೆ ಅರ್ಥಾತ್ ಶಿಕ್ಷಕರಿಗೆ ಗುರುವಿನ ಬಲವಿಲ್ಲದೆ ಗುರುತ್ವ ಬರಲಾರದು. ಆದುದರಿಂದ ಗುರು ಜಾತಕದಲ್ಲಿ ಪೋಷಕನಿರದೆ ಯಾರೂ ಗುರುವಾಗಲಾರರು. ಗುರುವಿನ ತರುವಾಯ ಬುದ್ಧಿಯ ಗ್ರಹವಾದ ಬುಧನನ್ನೂ ಪರಿಶೀಲಿಸಬೇಕು. ಬುಧ, ಗುರುಗಳ ತರುವಾಯ ಚಂದ್ರನನ್ನು ಪರಿಶೀಲಿಸಬೇಕಾಗುತ್ತದೆ. ಏಕೆಂದರೆ ಈ ಎಲ್ಲ ಕೋರ್ಸುಗಳಲ್ಲಿ ವಿದ್ಯಾರ್ಥಿಗಳ ಮನೋಗುಣಕ್ಕನುಸರಿಸಿ ಯಾವ ಯಾವ ಪದ್ಧತಿಗಳನ್ನನುಸರಿಬೇಕು ಎಂಬುದನ್ನು ತಿಳಿದುಕೊಳ್ಳಲು ಮನಶ್ಶಾಸ್ತ್ರ ವಿಷಯವನ್ನು ಅಭ್ಯಾಸ ಮಾಡಬೇಕಾಗುತ್ತದೆ ಮನಶ್ಶಾಸ್ತ್ರ ವಿಷಯದ ಮೇಲೆ ಚಂದ್ರನ ಪ್ರಭುತ್ವವಿರುವದರಿಂದ ಚಂದ್ರನೂ ಈ ಕೋರ್ಸಿನ ಕಾರಕನು. ಇದು ಎಲ್ಲ ಕೋರ್ಸುಗಳ ಸಾಮಾನ್ಯ ವಿಷಯಗಳಿಗೆ ಕಾರಕಗ್ರಹವಿರುತ್ತದೆ. ಇನ್ನು ವಿಭಿನ್ನ ಕೋರ್ಸುಗಳಿಗೆ ವಿಭಿನ್ನ ಗ್ರಹಗಳು ಕಾರಕವಿರುತ್ತವೆ. ಉದಾಹರಣೆಗೆ : ಡ್ರಾಯಿಂಗ್ ಟೀಚರ್ಸ ಕೋರ್ಸಿಗೆ ಮೇಲಿನ ಗ್ರಹಗಳಲ್ಲದೆ ಲಲಿತ ಕಲೆಯ ಕಾರಕಗ್ರಹವಾದ ಶುಕ್ರನೂ, ಶಾರೀರಿಕ ಶಿಕ್ಷಕರ ತರಬೇತಿ ಕೋರ್ಸಿಗೆ ರವಿಯೂ ಅವಶ್ಯವಿದ್ದು ಅದನ್ನು ಪ್ರತ್ಯೇಕವಾಗಿ ಪರಿಶೀಲಿಸಲಾಗುತ್ತದೆ.

೨) ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ಯಾವದೇ ಪ್ರಕಾರದ ಶಿಕ್ಷಕರ ತರಬೇತಿ ಕೋರ್ಸಿಗೆ ಪಂಚಮಸ್ಥಾನವು ಹಾಗೂ ದ್ವಿತೀಯ ಸ್ಥಾನವು ಕಾರಕವಿರುತ್ತವೆ. ಆದುದರಿಂದ ಈ ಸ್ಥಾನಗಳು ಹಾಗೂ ಸ್ಥಾನಾಧೀಶರರು ಜಾತಕದಲ್ಲಿ ಪೋಷಕರಿದ್ದ ವಿದ್ಯಾರ್ಥಿಗಳು ಈ ಕೋರ್ಸನಲ್ಲಿ ತಜ್ಞತೆ ಪಡೆಯುತ್ತಾರೆ.

೩) ಲಗ್ನದ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ವೃಷಭ. ಮಿಥುನ, ಸಿಂಹ, ವೃಶ್ಚಿಕ, ಧನು, ಮೀನ ಈ ಲಗ್ನದವರೇ ಈ ಕೋರ್ಸಿನಲ್ಲಿ ತಜ್ಞತೆ ಪಡೆಯುತ್ತಾರೆ.

೪) ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ನಿರ್ದಿಷ್ಟ ರಾಶಿಯವರೇ ಈ ಕೋರ್ಸಿನಲ್ಲಿ ತಜ್ಞರಿರುತ್ತಾರೆ ಎಂದು ಹೇಳಲು ಬಾರದಿದ್ದರೂ ಮಿಥುನ, ತುಲಾ, ಕುಂಭ ಈ ರಾಶಿಯವರೂ ತದನಂತರ ವೃಷಭ, ಕರ್ಕ. ಕನ್ಯಾ, ಮೀನ ಈ ರಾಶಿಯವರು ಹೆಚ್ಚಾಗಿರುವದು ಕಂಡುಬರುತ್ತದೆ.

ಇವು ಎಲ್ಲ ಶಿಕ್ಷಕರ ತರಬೇತಿ ಕೋರ್ಸುಗಳ ಸಾಮಾನ್ಯ ನಿಯಮಗಳಾದವು. ಇನ್ನು ವಿಶಿಷ್ಟ ತರಹದ ಕೋರ್ಸುಗಳಿಗೆ ವಿಶಿಷ್ಟ ಗ್ರಹಯೋಗವಿರುವದರಿಂದ ಅವನ್ನು ಈ ಕೆಳಗಿನಂತೆ ಕೊಡಲಾಗಿದೆ.

೧. ಶಿಶುವಿಹಾರ ಶಿಕ್ಷಕರ ತರಬೇತಿ:— ಈ ಕೋರ್ಸಿನಲ್ಲಿ ತಜ್ಞತೆ ಪಡೆಯಲು ಮೂರು ಸಂಗತಿಗಳು ಮುಖ್ಯವಿರುತ್ತವೆ. ೧) ಮೊದಲನೆಯದಾಗಿ ಈ ಕೋರ್ಸಿನ ಅಭ್ಯರ್ಥಿಗಳಿಗೆ ಗುರುವಿಗಿಂತ ಬುಧ, ಶುಕ್ರ, ಚಂದ್ರರು ಹೆಚ್ಚು ಪೋಷಕರೂ, ಬಲಾಢ್ಯರೂ ಜಾತಕದಲ್ಲಿರಬೇಕು. ಎರಡನೆಯದಾಗಿ ಪಂಚಮಸ್ಥಾನಕ್ಕಿಂತ ದ್ವಿತೀಯ, ತೃತೀಯ ಸ್ಥಾನಗಳು ಇವರ ಜಾತಕದಲ್ಲಿ ಪೋಷಕವಿರಬೇಕು. ಏಕೆಂದರೆ ಈ ಕೋರ್ಸನ್ನು ಮುಗಿಸಿದವರು ಶಿಶುವಿಹಾರ ಕೇಂದ್ರದ ಶಿಕ್ಷಕರಾಗಿ ಕೆಲಸ ಮಾಡಬೇಕಾಗುವದರಿಂದ ಆಗ ಅವರು ಎಳೆಯ ಮಕ್ಕಳೊಡನೆ ಎಳೆಯರಂತೆಯೇ ವರ್ತಿಸಿ ಕುಣಿದಾಡುತ್ತ ತಿಳಿಹೇಳಬೇಕಾಗುತ್ತದೆ. ಈ ಎಲ್ಲ ಗುಣಗಳು ಚಂದ್ರ-ಶುಕ್ರರು ಬಲಾಢ್ಯರಿಲ್ಲದೆ ಸಾಧಿಸದು. ಮೂರನೆಯದಾಗಿ ಈ ಕೋರ್ಸಿನ ವಿದ್ಯಾರ್ಥಿಗಳಲ್ಲಿ ಮೃದು ಸ್ವಭಾವ, ತಾಳ್ಮೆ, ಸಹನಶೀಲತೆ ಈ ಮೊದಲಾದ ಗುಣಗಳ ಅವಶ್ಯಕತೆಯಿರುತ್ತದೆ. ಇದು ವೃಷಭ, ಕರ್ಕ, ಮಿಥುನ, ಕನ್ಯಾ. ತುಲಾ, ಕುಂಭ, ಮೀನ ಈ ರಾಶಿಯಲ್ಲಿರುವದರಿಂದ ಈ ರಾಶಿಯವರೇ ಈ ಕೋರ್ಸಿನಲ್ಲಿ ತಜ್ಞತೆ ಪಡೆಯುತ್ತಾರೆ.

೨. ಪ್ರಾಥಮಿಕ ಶಿಕ್ಷಕರ ತರಬೇತಿ ಕೋರ್ಸುಗಳು:— ಪ್ರಾಥಮಿಕ ಶಿಕ್ಷಕರ ತರಬೇತಿ ಎರಡು ವರ್ಷಗಳ ಅವಧಿಯದಿದ್ದು ಈ ಕೋರ್ಸಿನಲ್ಲಿ

ತಜ್ಞತೆ ಪಡೆಯಲು ಕೆಲವು ವಿಶಿಷ್ಟ ಯೋಗಗಳಿರಬೇಕಾಗುತ್ತದೆ. ಅವು ಹೀಗಿರುತ್ತವೆ: ಮೊದಲನೆಯದಾಗಿ ಬುಧ-ಚಂದ್ರರು ಇತರ ಗ್ರಹಗಳಿಗಿಂತ ಹೆಚ್ಚು ಪೋಷಕರಿರುತ್ತಾರೆ. ಎರಡನೆಯದಾಗಿ ಪಂಚಮ ಸ್ಥಾನಕ್ಕಿಂತ ದ್ವಿತೀಯ ಸ್ಥಾನವು ಹೆಚ್ಚು ಪೋಷಕವಿರುತ್ತದೆ. ಮೂರನೆಯದಾಗಿ ಅನೇಕ ಗ್ರಹಗಳು ಸ್ಥಿರರಾಶಿಯಲ್ಲಿರುತ್ತವೆ. ಮತ್ತು ರವಿ-ಮಂಗಳರು ದುರ್ಬಲರಿರುತ್ತಾರೆ. ಕೊನೆಯದಾಗಿ ಇವರ ಜಾತಕದಲ್ಲಿ ಚಂದ್ರನು ಹೆಚ್ಚಾಗಿ ವೃಷಭ, ಮಿಥುನ, ಕರ್ಕ, ಕನ್ಯಾ, ತುಲಾ, ಕುಂಭ, ಮೀನ ಈ ರಾಶಿಯಲ್ಲಿರುತ್ತಾನೆ. ಮೇಲ್ಕಂಡ ನಾಲ್ಕು ಯೋಗಗಳಲ್ಲಿ ಜನಿಸಿದ ವಿದ್ಯಾರ್ಥಿಗಳೇ ಈ ಕೋರ್ಸಿನಲ್ಲಿ ತಜ್ಞತೆ ಪಡೆಯುತ್ತಾರೆ.

೩. ಮಾಧ್ಯಮಿಕ ಶಿಕ್ಷಕರ ತರಬೇತಿ ಕೋರ್ಸುಗಳು:— ಮಾಧ್ಯಮಿಕ ಶಿಕ್ಷಕರ ತರಬೇತಿ ಕೋರ್ಸು ಒಂದು ವರ್ಷದ ಅವಧಿಯದಿರುತ್ತದೆ. ಇದೇ ಬಿ. ಎಡ್. ಕೋರ್ಸು. ಬಿ. ಎಡ್. ಆದನಂತರ ಎಮ್. ಎಡ್. ಕೋರ್ಸಿಗೆ ಪ್ರವೇಶಾರ್ಹತೆ ದೊರೆಯುತ್ತದೆ. ಇದೂ ಕೂಡ ಒಂದು ವರ್ಷದ ಅವಧಿಯ ವ್ಯಾಸಂಗವಿದ್ದು ಬಿ. ಎಡ್. ಆಗದೆ ( ಹಿಂದಿನ ಬಿ. ಟಿ. ) ಯಾವ ಅಭ್ಯರ್ಥಿಯೂ ಎಮ್. ಎಡ್. ಆಗಲು ಅವಕಾಶವಿಲ್ಲ. ಬಿ. ಎಡ್. ಕೋರ್ಸಿಗೆ ಮಾತ್ರ ಯಾವದೇ ವಿಷಯದ ಯಾವದೇ ಪದವೀ ಧರನಿಗೆ ಪ್ರವೇಶ ದೊರೆಯುತ್ತದೆ. ನಿರ್ದಿಷ್ಟ ವಿಷಯದ ಪದವೀಧರನಿಗೇ ಪ್ರವೇಶ ದೊರೆಯುವದೆಂಬ ನಿರ್ಬಂಧವಿಲ್ಲ. ಬಿ. ಎಡ್. ಕೋರ್ಸಿನ ವ್ಯಾಸಂಗ ಮಾಡುವಾಗ ಶಿಕ್ಷಣ ಹಾಗೂ ಶಿಕ್ಷಕರ ತತ್ತ್ವ, ಶಾಲೆಯ ಆಡಳಿತ, ಮನಶ್ಶಾಸ್ತ್ರ, ಶಿಕ್ಷಣದ ಇತಿಹಾಸ ಮೊದಲಾದ ವಿಷಯಗಳಲ್ಲಿ ತರಬೇತಿ ಕೊಡಲಾಗುತ್ತದೆ. ಎಮ್. ಎಡ್. ಪದವೀ ಕೋರ್ಸಿನಲ್ಲಿ ಈ ವಿಷಯ ಗಳಲ್ಲದೆ ಸಂಸ್ಥೆಯ ಆಡಳಿತೆಯ ವಿಚಾರ, ಪ್ರಾಯೋಗಿಕ ಶಿಕ್ಷಣ, ಶಿಕ್ಷಣದ ಇತಿಹಾಸ ಇವುಗಳಲ್ಲಿ ಹೆಚ್ಚಿನ ತಜ್ಞತೆಯನ್ನು ಪಡೆಯಬಹುದು. ಇನ್ನು ಫಲಜ್ಯೋತಿಷ್ಯದಲ್ಲಿ ಈ ಕೋರ್ಸುಗಳಲ್ಲಿ ತಜ್ಞತೆ ಪಡೆಯಲು ಈ ಮುಂದೆ ಬರೆದ ಸಂಗತಿಗಳು ಜಾತಕದಲ್ಲಿ ಪೂರಕವಿರಬೇಕು. ಮೊದಲನೆಯದಾಗಿ ಹಿಂದೆ ಹೇಳಿದ ಎಲ್ಲ ಸಾಮಾನ್ಯ ನಿಯಮಗಳೊಂದಿಗೆ ಕೆಲವು ವಿಶಿಷ್ಟ ಯೋಗಗಳು ಹೀಗಿರುತ್ತವೆ. ಇವರ ಜಾತಕದಲ್ಲಿ ದ್ವಿತೀಯೇಶ, ಪಂಚಮೇಶ

ಹಾಗೂ ಈ ಎರಡೂ ಸ್ಥಾನಗಳೂ ಇತರ ಎಲ್ಲ ಯೋಗಗಳಿಗಿಂತ ಹೆಚ್ಚು ಪೂರಕವಿರುತ್ತವೆ. ಅವರಲ್ಲಿಯೂ ಪಂಚಮಸ್ಥಾನ ಹಾಗೂ ಪಂಚಮೇಶರು ಹೆಚ್ಚು ಪೋಷಕರಿರುತ್ತಾರೆ. ಎರಡನೆಯದಾಗಿ ಇವರ ಜಾತಕದಲ್ಲಿ ಮೇಷ, ವೃಷಭ, ಮಿಥುನ, ಸಿಂಹ, ವೃಶ್ಚಿಕ, ಧನು, ಕುಂಭ, ಮೀನ ಈ ಲಗ್ನದವರೇ ಹೆಚ್ಚಾಗಿರುತ್ತಾರೆ. ಮೂರನೆಯದಾಗಿ ಇವರು ಹೆಚ್ಚಾಗಿ ವೃಷಭ, ಮಿಥುನ, ಕರ್ಕ, ಕನ್ಯಾ, ತುಲಾ, ಧನು, ಕುಂಭ, ಮೀನ ಈ ರಾಶಿಯವರಿರುತ್ತಾರೆ.

೯. ಹಿಂದೀ ಶಿಕ್ಷಕ ಸನದ:— ಶಾಲೆಗಳಲ್ಲಿ ಹಿಂದೀ ಶಿಕ್ಷಕರೆಂದು ಕೆಲಸ ಮಾಡಬೇಕಾದರೆ ಈ ಕೋರ್ಸನ್ನು ಪಡೆಯದೇ ಲಭಿಸುವದಿಲ್ಲ. ಹೀಗಾಗಿ ಈ ಕೋರ್ಸಿನ ಬೇಡಿಕೆ ಬಹಳವಿದೆ. ಈ ಹಿಂದೆ ಒಂದು ವರ್ಷದ ಅವಧಿಯ ವ್ಯಾಸಂಗವುಳ್ಳ ಈ ಕೋರ್ಸು ಈಗ ಎರಡು ವರ್ಷ ಅವಧಿಯ ದಿರುತ್ತದೆ. ಈ ಕೋರ್ಸಿನಲ್ಲಿ ಪ್ರವೇಶ ದೊರಕಿಸಲು ಪ್ರಥಮತಃ ಅಭ್ಯ-ರ್ಥಿಯು ಹಿಂದೀ ಪ್ರವೀಣ ಪರೀಕ್ಷೆಯಲ್ಲಿ ಅಥವಾ ತತ್ಸಮ ಪರೀಕ್ಷೆಯಲ್ಲಿ ತೇರ ಡೆಯಾಗಲೇಬೇಕೆಂಬ ನಿರ್ಬಂಧವಿದ್ದು ಇಲ್ಲಿ ಇತರ ಶಿಕ್ಷಕರ ತರಬೇತಿ ಕೋರ್ಸುಗಳಲ್ಲಿಯ ವಿಷಯಗಳಿರುವಂತೆ ವಿಷಯಗಳಿರುತ್ತವೆ. ಅಂದರೆ ಶಿಕ್ಷಣದ ಇತಿಹಾಸ, ಮನಶ್ಶಾಸ್ತ್ರ, ಶಿಕ್ಷಣದ ತತ್ತ್ವ, ಶಾಲೆಯ ಆಡಳಿತೆ ಮೊದಲಾದ ಎಲ್ಲ ವಿಷಯಗಳಿರುತ್ತವೆ. ಈ ಕೋರ್ಸಿನ ವಿಶಿಷ್ಟ ವಿಷಯ ವೆಂದರೆ ಹಿಂದೀ ಭಾಷೆಯ ಭಾಷಾ ಉತ್ಪತ್ತಿ, ವೈಶಿಷ್ಟ್ಯಗಳೊಂದಿಗೆ ಹಿಂದೀ ಸಾಹಿತ್ಯ ವಿಷಯವು ಕಡ್ಡಾಯವಾಗಿರುತ್ತದೆ. ಇಲ್ಲಿ ಥೇರಿಯೊಂದಿಗೆ ಪ್ರಾಯೋ ಗಿಕ ಪಠ್ಯಕ್ರಮ ಮತ್ತು ಮೌಖಿಕಗಳೂ ನಡೆಸಲ್ಪಡುತ್ತವೆ. ಇನ್ನು ಫಲ-ಜ್ಯೋತಿಷ್ಯದಲ್ಲಿ ಈ ಕೋರ್ಸಿನಲ್ಲಿ ವ್ಯಾಸಂಗ ಮಾಡಲು ಜಾತಕ ಹೇಗಿರ ಬೇಕೆಂಬುದನ್ನು ಪರಿಶೀಲಿಸುವಾ.

ಮೊದಲನೆಯದಾಗಿ ಹಿಂದೆ ಹೇಳಿದ ಯೋಗಗಳಲ್ಲದೆ ವಿಶಿಷ್ಟ ಯೋಗ ಗಳೆಂದರೆ ಇವರ ಜಾತಕದಲ್ಲಿ ಬುಧನು ಹೆಚ್ಚು ಬಲಾಢ್ಯನಿರುತ್ತಾನೆ. ಏಕೆಂದರೆ ಭಾಷಾಶಾಸ್ತ್ರದಲ್ಲಿ ಪ್ರಾವೀಣ್ಯತೆ ಪಡೆಯಲು ಬುಧನ ಬಲವಿಲ್ಲದೆ ಬರಲಾರದು. ಆದುದರಿಂದ ಬುಧನು ಜಾತಕದಲ್ಲಿ ಎಲ್ಲ ಗ್ರಹಗಳಿಗಿಂತ ಹೆಚ್ಚು ಬಲಾಢ್ಯನೂ, ಪೋಷಕನೂ ಇರುತ್ತಾನೆ. ಎರಡನೆಯದಾಗಿ ದ್ವಿತೀಯ, ಪಂಚಮ ಈ

ಸ್ಥಾನಗಳೂ ಹಾಗೂ ಈ ಸ್ಥಾನಾಧೀಶರೂ ಜಾತಕದಲ್ಲಿ ಪೋಷಕರಿರಲೇಬೇಕು. ಮೂರನೆಯದಾಗಿ ಈ ಕೋರ್ಸಿನ ವ್ಯಾಸಂಗ ಮಾಡುವ ವಿದ್ಯಾರ್ಥಿಗಳ ಜಾತಕದಲ್ಲಿ ಮೇಷ, ವೃಷಭ, ಮಿಥುನ, ಸಿಂಹ, ಕನ್ಯಾ, ವೃಶ್ಚಿಕ, ಧನು, ಮಕರ, ಕುಂಭ ಈ ಲಗ್ನದವರಿರುತ್ತಾರೆ. ನಾಲ್ಕನೆಯದಾಗಿ ಬುಧನ ತರುವಾಯ ಶುಕ್ರ-ಚಂದ್ರರನ್ನೂ ಪರಿಶೀಲಿಸಬೇಕು. ಏಕೆಂದರೆ ಭಾಷೆಯೂ ಕೂಡ ಒಂದು ಕಲೆ ಇರುತ್ತದೆ. ಭಾಷಾ ಪ್ರಭುತ್ವ ಎಲ್ಲರಲ್ಲಿಯೂ ಇರುವದಿಲ್ಲ. ಆದುದರಿಂದ ಶುಕ್ರ-ಚಂದ್ರರು ಜಾತಕದಲ್ಲಿ ಪೋಷಕರಿದ್ದ ಜಾತಕನಿಗೆ ಭಾಷಾಪಾಂಡಿತ್ಯ ಲಭಿಸುತ್ತದೆ. ಕೊನೆಯದಾಗಿ ಈ ಕೋರ್ಸಿನ ವ್ಯಾಸಂಗ ಮಾಡುವ ವಿದ್ಯಾರ್ಥಿಗಳು ಹೆಚ್ಚಾಗಿ ವೃಷಭ, ಮಿಥುನ, ಕರ್ಕ, ಕನ್ಯಾ, ತುಲಾ, ಕುಂಭ, ಮೀನ ಈ ರಾಶಿಯವರಿರುತ್ತಾರೆ.

ಶಾರೀರಿಕ ಶಿಕ್ಷಕರ ತರಬೇತಿ ಕೋರ್ಸಿನ ವಿಷಯವಾಗಿ ಪ್ರತ್ಯೇಕವಾಗಿ ಬರೆಯಲಾಗಿದೆ. ಇನ್ನು ಸಂಗೀತ ಶಿಕ್ಷಕ ಹಾಗೂ ಚಿತ್ರಕಲಾ ಶಿಕ್ಷಕರ ತರಬೇತಿಯ ಕೋರ್ಸಿನ ವಿಷಯವಾಗಿ ಇದೇ ಪುಸ್ತಕದ ಲಲಿತಕಲಾ ಶಿಕ್ಷಣ ಎಂಬ ವಿಭಾಗದಲ್ಲಿ ವಿವರಿಸಲಾಗಿದೆ. ಕೃಗಾರಿಕಾ ಶಿಕ್ಷಕರ ತರಬೇತಿ, ಶಿಕ್ಷಕರ ತರಬೇತಿ ಕೋರ್ಸಿಗಾಗಿ ಇದೇ ಪುಸ್ತಕದ ಕ್ರಾಫ್ಟ್ ಶಿಕ್ಷಣ ವಿಭಾಗದಲ್ಲಿ ವಿವರಿಸಲಾಗಿದೆ. ಹೀಗೆ ಹಿಂದೆ ಬರೆದ ಯೋಗವುಳ್ಳ ವಿದ್ಯಾರ್ಥಿಗಳೇ ಶಿಕ್ಷಕರ ತರಬೇತಿಯ ಕೋರ್ಸುಗಳಲ್ಲಿ ತಜ್ಞತೆ ಪಡೆಯುವರು.

## ೧೦. ಶಾರೀರಿಕ ಶಿಕ್ಷಣದ ಕೋರ್ಸುಗಳು
## (Physical Education)

ಮಾನವನ ವ್ಯಕ್ತಿತ್ವದ ಸರ್ವತೋಮುಖ ಬೆಳವಣಿಗೆಗೆ ಬೌದ್ಧಿಕ ಶಿಕ್ಷಣವು ಎಷ್ಟು ಮುಖ್ಯವೋ, ಶಾರೀರಿಕ ಶಿಕ್ಷಣವೂ ಅಷ್ಟೇ ಮುಖ್ಯವು ಎಂಬುದರ ಬಗ್ಗೆ ಯಾವ ಸಂದೇಹವೂ ಇಲ್ಲ. ಅಂತೆಯೇ ಆರೋಗ್ಯಕರವಾದ ದೇಹದಲ್ಲಿ ಆರೋಗ್ಯಕರವಾದ ಬುದ್ಧಿ ನೆಲಸಬಲ್ಲದು ಎಂದು ಹೇಳಲಾಗುತ್ತದೆ. ಶಾರೀರಿಕ ಶಿಕ್ಷಣವು ಶಾಸ್ತ್ರೀಯವಾದ ವಿಷಯವಿದ್ದು ಈ ಶಾರೀರಿಕ ಶಿಕ್ಷಣವನ್ನು ಶಾಸ್ತ್ರೀಯವಾಗಿ ನೀಡಬೇಕಾದರೆ ಇದನ್ನು ಶಾಸ್ತ್ರೀಯವಾಗಿ

ಕಲಿತ, ನುರಿತ, ಯೋಗ್ಯ ಶಿಕ್ಷಕರೂ ಬೇಕಾಗುವದರೊಡನೆ ಯೋಗ್ಯ ಪಠ್ಯಕ್ರಮ, ನಿರ್ದಿಷ್ಟ ಅವಧಿಯ ತರಬೇತಿ ಈ ಎಲ್ಲ ಸಂಗತಿಗಳೂ ಬೇಕಾಗುತ್ತವೆ. ಹೀಗಾಗಿ ಭಾರತದಲ್ಲಿ ಶಾರೀರಿಕ ಶಿಕ್ಷಣ ಹೇಗಿರಬೇಕು, ಅದರ ಪಠ್ಯಕ್ರಮ ಎಂತಿರಬೇಕು ಎಂಬುದನ್ನು ಕೇಂದ್ರ ಸರಕಾರದ ಶಿಕ್ಷಣ ಇಲಾಖೆಯು ನಿರ್ಧರಿಸಿದೆ.

ಶಾರೀರಿಕ ಶಿಕ್ಷಣದಲ್ಲಿ ಸರ್ಟಿಫಿಕೇಟ್ ಕೋರ್ಸ, ಡಿಪ್ಲೋಮಾ ಕೋರ್ಸ, ಪದವೀ ಶಿಕ್ಷಣ, ಸ್ನಾತಕೋತ್ತರ ಶಿಕ್ಷಣ ಹೀಗೆ ನಾಲ್ಕು ಪ್ರಕಾರಗಳಿವೆ. ಶಾರೀರಿಕ ಶಿಕ್ಷಣ ಸಂಸ್ಥೆಗಳು ರಾಷ್ಟ್ರವ್ಯಾಂತ ಅಲ್ಲಲ್ಲಿ ರೂಪುಗೊಂಡು ಶಾರೀರಿಕ ಶಿಕ್ಷಕರನ್ನು ತಯಾರಿಸುವ ಕಾರ್ಯದಲ್ಲಿ ತೊಡಗಿವೆ. ಇವೇ ಸರ್ಟಿಫಿಕೇಟ್ ಕೋರ್ಸುಗಳಿದ್ದು, ಸಿ. ಪಿ. ಎಡ್. (Certificate in Physical Education) ಎಂಬ ಕೋರ್ಸು ಒಂದು ವರ್ಷದ್ದಿದ್ದು, ತರಬೇತಿಯನ್ನು ಪಡೆಯಬೇಕಾದ ವಿದ್ಯಾರ್ಥಿಗಳು ಎಸ್. ಎಸ್. ಎಲ್. ಸಿ. ಯಲ್ಲಿ ಉತ್ತೀರ್ಣರಾಗಬೇಕಾಗಿರುವದಲ್ಲದೆ, ಪ್ರವೇಶಕ್ಕೆ ದೈಹಿಕ ಅರ್ಹತೆಯೂ ಸಹ ಅವಶ್ಯವಿದೆ. ಇದರಂತೆ-ಡಿಪ್ಲೋಮಾ ಕೋರ್ಸು ಸಹ ಒಂದು ವರ್ಷದ ಅವಧಿಯುಳ್ಳದ್ದು ಇರುತ್ತದೆ. ಇನ್ನು ಶಾರೀರಿಕ ಶಿಕ್ಷಣದ ಪದವಿ ಪಡೆಯಲಿಚ್ಛಿಸುವವರು ಕನಿಷ್ಠವಾಗಿ ಪಿ. ಯು. ಸಿ. ಯಲ್ಲಿ ಉತ್ತೀರ್ಣರಾಗಿರಬೇಕು. ಮೂರು ವರ್ಷಗಳ ವ್ಯಾಸಂಗದ ಈ ಪದವೀ ಕೋರ್ಸಿಗೆ ಬಿ. ಪಿ. ಎಡ್. (Bachelor in Physical Education) ಪದವಿಯ ಶಿಕ್ಷಣ ಕೊಡಲಾಗುತ್ತದೆ. ಸ್ನಾತಕೋತ್ತರ ಶಾರೀರಿಕ ಶಿಕ್ಷಣ ಪದವಿಗೆ ಶಾರೀರಿಕ ಶಿಕ್ಷಣ ಪದವೀಧರರು ಅರ್ಹರಾಗುತ್ತಾರೆ. ಇದು ಎರಡು ವರ್ಷಗಳ ವ್ಯಾಸಂಗವುಳ್ಳದ್ದಿರುತ್ತದೆ.

ಶಾರೀರಿಕ ಶಿಕ್ಷಣ ಪದವೀಧರರಿಗೆ ಹಾಗೂ ಸ್ನಾತಕೋತ್ತರ ಪದವೀಧರರಿಗೆ ವಿವಿಧ ಕ್ಷೇತ್ರಗಳಲ್ಲಿ ಉದ್ಯೋಗ ಅವಕಾಶಗಳಿವೆ. ಅವರನ್ನು ಶಾರೀರಿಕ ಶಿಕ್ಷಣ ನಿರ್ದೇಶಕ, ತರಬೇತಿತಜ್ಞ, ಮನರಂಜನ ಸಹಾಯಕರು, ಕಾರಖಾನೆಗಳಲ್ಲಿ ಕ್ರೀಡಾಪಂದ್ಯಗಳನ್ನೂ, ಮನರಂಜನೆಯನ್ನೂ ಸಂಘಟಿಸುವ ಅಧಿಕಾರಿಗಳು, ಮೇಲ್ವಿಚಾರಕರು, ವಿಶ್ವವಿದ್ಯಾಲಯದಲ್ಲಿಯ ಕ್ರೀಡಾಕಾರ್ಯ

ದರ್ಶಿ ಅಥವಾ ಕ್ರೀಡಾನಿರ್ದೇಶಕ, ಕಾರಖಾನೆಗಳಲ್ಲಿಯ ಕಲ್ಯಾಣಾಧಿಕಾರಿ ಅಥವಾ ಸಾರ್ವಜನಿಕ ಸಂಪರ್ಕಾಧಿಕಾರಿ ಹೀಗೆ ವಿವಿಧ ಹುದ್ದೆಗಳನ್ನು ನಿರ್ವಹಿಸುವ ವಿಶಿಷ್ಟ ಸಿಬ್ಬಂದಿಯಲ್ಲಿ ಸೇರ್ಪಡೆಯಾಗುವದರಿಂದ ಇಂದು ರಾಷ್ಟ್ರದಲ್ಲಿ ಈ ಶಾರೀರಿಕ ಶಿಕ್ಷಣ ತಜ್ಞರಿಗೆ ಬಹಳಷ್ಟು ಬೇಡಿಕೆಯಿದೆ. ಇದರಂತೆ ಸರ್ಟಿಫಿಕೇಟ್ ಹಾಗೂ ಡಿಪ್ಲೋಮಾ ಕೋರ್ಸ ಪಡೆದವರಿಗೆ ಪ್ರತಿ ಶಾಲೆಯಲ್ಲಿಯೂ ವ್ಯಾಯಾಮಶಿಕ್ಷಕ ಅಥವಾ ಶಾರೀರಿಕ ಶಿಕ್ಷಕರೆಂಬ ಉದ್ಯೋಗದ ಅವಕಾಶಗಳೂ ಲಭಿಸುತ್ತವೆ. ಹೀಗೆ ಈ ಶಾರೀರಿಕ ಶಿಕ್ಷಣದ ತಜ್ಞರಿಗೆ ಉದ್ಯೋಗದ ಅವಕಾಶಗಳು ಸಾಕಷ್ಟಿರುವದು ಕಂಡುಬರುತ್ತದೆ. ಈ ಕೋರ್ಸಿನ ಇಷ್ಟೊಂದು ಹಿನ್ನೆಲೆಯಲ್ಲಿ ಈ ಕೋರ್ಸಿನಲ್ಲಿ ತಜ್ಞತೆ ಪಡೆಯಲು ಜಾತಕವೆಂತಿರಬೇಕು, ಕಾರಕಗ್ರಹ, ಲಗ್ನ, ಸ್ಥಾನಾದಿಗಳಾವವು ಎಂಬುದನ್ನು ಪರಿಶೀಲಿಸುವಾ.

ಕಾರಕಗ್ರಹ: — ಶಾರೀರಿಕ ಶಿಕ್ಷಣದ ಕೋರ್ಸುಗಳ ಶಿಕ್ಷಣ ಪಡೆಯಲು ಜಾತಕದಲ್ಲಿ ಯಾವ ಗ್ರಹಗಳು ಪ್ರೋಷಕವಿರಬೇಕು, ಕಾರಕವಾಗಿರಬೇಕು ಎಂಬ ಪ್ರಶ್ನೆಗೆ ಉತ್ತರ ಕೊಡುವ ಪೂರ್ವದಲ್ಲಿ ಈ ಕೋರ್ಸಿನಲ್ಲಿ ಅಭ್ಯಾಸ ಮಾಡಬೇಕಾದ ವಿಷಯಗಳಾವವು ಎಂಬುದನ್ನು ತಿಳಿಯುವದು ಅತ್ಯವಶ್ಯವಿರುತ್ತದೆ. ಆದುದರಿಂದ ನಾವು ಪ್ರಥಮತಃ ಈ ಕೋರ್ಸಿನ ವಿಷಯುಗಳಾವವು ಎಂಬುದನ್ನು ಪರಿಶೀಲಿಸುವಾ.

ಸಾಮಾನ್ಯವಾಗಿ ಶಾರೀರಿಕ ಶಿಕ್ಷಣದ ಸರ್ಟಿಫಿಕೇಟ್, ಡಿಪ್ಲೋಮಾ, ಪದವಿ ಕೋರ್ಸುಗಳ ವಿಷಯುಗಳು ಒಂದೇ ಇದ್ದು ಪದವೀ ಪರೀಕ್ಷೆಯಲ್ಲಿ ಮಾತ್ರ ಎಲ್ಲ ವಿಷಯುಗಳಲ್ಲಿ ಹೆಚ್ಚಿನ ಶಿಕ್ಷಣವನ್ನು ಕೊಡುತ್ತಾರೆ. ಶಾರೀರಿಕ ಶಿಕ್ಷಣದ ತತ್ವಗಳು, ಮನಶ್ಶಾಸ್ತ್ರ, ಶಾರೀರಿಕ ಶಿಕ್ಷಣದ ಸಂಘಟನೆ, ಆಪಳಿಕೆಯ ಮೇಲ್ವಿಚಾರಣೆ, ಜೀವಕಾರ್ಯವಿಜ್ಞಾನ, ಶರೀರಶಾಸ್ತ್ರ, ವ್ಯಾಯಾಮದ ಶಾಸ್ತ್ರೀಯ ವಿವೇಚನೆ, ಆರೋಗ್ಯ ಶಿಕ್ಷಣ, ಶಾರೀರಿಕ ಶಿಕ್ಷಣದ ರೀತಿಗಳು, ತರಬೇತಿ ಹಾಗೂ ಮೇಲ್ವಿಚಾರಣೆ, ಡ್ರಿಲ್, ಕವಾಯತು, ಕೊಚು, ಪರೇಡ್ (Parade), ಕ್ರೀಡಾ ಚಟುವಟಿಕೆ, ಓಟ, ಜಿಗಿತ ಮೊದಲಾದ ಅನೇಕ ಬಗೆಬಗೆಯ ಆಟಗಳು, ಗ್ರಾಮೀಣ ನೃತ್ಯ,

ವ್ಯಾಯಾಮ, ಯೋಗ, ಶಾಸ್ತ್ರ, ಉತ್ತಮ ನಾಗರಿಕತ್ವದ ರಾಷ್ಟ್ರೀಯ ಆದರ್ಶಗಳು, ಪ್ರಾಯೋಗಿಕ ಯೋಜನೆಗಳು, ಸಾಮೂಹಿಕ ಹಾಡುಗಾರಿಕೆ, ಕ್ಯಾಂಪುಗಳು, ಪ್ರವಾಸಗಳು, ಪ್ರಥಮ ಚಿಕಿತ್ಸೆ, ಸಮಾಜ ಸೇವೆ, ಕ್ರೀಡಾ ಕೂಟಗಳ ಸಂಘಟನೆ ಮೊದಲಾದ ವಿಷಯಗಳನ್ನು ಈ ಎಲ್ಲ ಕೋರ್ಸುಗಳಲ್ಲಿ ಕಲಿಯಬೇಕಾಗುತ್ತದೆ. ಇದಲ್ಲದೆ ಈ ಶಿಕ್ಷಣ ಕೇವಲ ತಾತ್ವಿಕ (ಥೇರಿ) ಶಿಕ್ಷಣವಲ್ಲದೆ ಪ್ರಾಯೋಗಿಕ ಶಿಕ್ಷಣವೂ ಇರುತ್ತದೆ. ಮೇಲೆ ಹೇಳಿದ ಎಲ್ಲ ವಿಷಯಗಳಿಗೆ ರವಿಯೇ ಕಾರಕನಿರುವದರಿಂದ ರವಿಯೇ ಈ ಕೋರ್ಸಿನ ಕಾರಕಗ್ರಹನು. ರವಿಯು ಬಲಾಢ್ಯನಿರದೆ ಯಾವ ವಿದ್ಯಾರ್ಥಿಯೂ ಈ ಕೋರ್ಸಿನಲ್ಲಿ ಯಶಸ್ಸು ಪಡೆಯಲಾರನು. ರವಿಯ ತರುವಾಯ ಗುರುವನ್ನೂ ಪರಿಶೀಲಿಸಬೇಕು. ಏಕೆಂದರೆ ಈ ಶಿಕ್ಷಣವನ್ನು ಪಡೆದವರು ಶಾಲೆಯಲ್ಲಿ ಶಿಕ್ಷಕರೆಂದೂ, ವಿಶ್ವವಿದ್ಯಾಲಯದಲ್ಲಿ ನಿರ್ದೇಶಕರೆಂದೂ, ಕಾರಖಾನೆಗಳಲ್ಲಿ ಕಲ್ಯಾಣಾಧಿಕಾರಿ, ಸಾರ್ವಜನಿಕ ಸಂಪರ್ಕಾಧಿಕಾರಿ ಮೊದಲಾದ ಹುದ್ದೆಗಳನ್ನು ಪಡೆಯುತ್ತಾರೆ. ಈ ಹುದ್ದೆಗಳನ್ನು ಪಡೆಯಲು ಜಾತಕದಲ್ಲಿ ಗುರುವು ಪೋಷಕನಿರದೆ ಯಾರಿಗೂ ಸಾಧ್ಯವಿಲ್ಲ. ರವಿ-ಗುರುಗಳ ತರುವಾಯ ಕುಜನನ್ನು ಪರಿಶೀಲಿಸಬೇಕು. ಏಕೆಂದರೆ ಈ ಕೋರ್ಸಿನಲ್ಲಿಯ ಕ್ರೀಡಾಕೂಟಗಳ ಸಂಘಟನೆ, ಕ್ಯಾಂಪುಗಳು ಮೊದಲಾದ ವಿಷಯಗಳಿರುವದರಿಂದ ಕುಜನೂ ಕಾರಕನಿರುತ್ತಾನೆ. ಆದರೆ ರವಿ-ಗುರುಗಳು ಸ್ಥಾನಬಲದವರೂ, ರಾಶಿಬಲದವರೂ, ಯೋಗಕಾರಕರೂ ಇದ್ದು ಜಾತಕದಲ್ಲಿ ಬಲಾಢ್ಯರಿರುತ್ತಾರೆ. ಆದರೆ ಕುಜನೂ ಕೇವಲ ರಾಶಿಬಲದವನಿರುತ್ತಾನ.

ಲಗ್ನ :— ಲಗ್ನದ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ವೃಷಭ, ಮಿಥುನ, ಕರ್ಕ, ಸಿಂಹ, ವೃಶ್ಚಿಕ, ಧನು, ಮೀನ ಈ ಲಗ್ನದವರೇ ಈ ಕೋರ್ಸಿನಲ್ಲಿ ಪಳಗಿದವರಿದ್ದುದು ಕಂಡುಬರುತ್ತದೆ.

ಸ್ಥಾನ:— ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ಈ ಕೋರ್ಸಿನಲ್ಲಿ ತಜ್ಞತೆ ಪಡೆಯಲು ಜಾತಕನು ಸಧೃಢನಿರಬೇಕು. ಸಧೃಢನಿರಬೇಕಾದರೆ ತನುಸ್ಥಾನ ಹಾಗೂ ಲಗ್ನೇಶ ಪೋಷಕರಿರಬೇಕು. ಆದುದರಿಂದ ತನುಸ್ಥಾನವೇ ಈ ಕೋರ್ಸಿನ ಕಾರಕಸ್ಥಾನವಿರುತ್ತದೆ.

ರಾಶಿ:— ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ಸಿಂಹ, ಧನು, ತುಲಾ, ಕುಂಭ, ಮೀನ, ವೃಶ್ಚಿಕ, ಮಕರ ಈ ರಾಶಿಯ ವಿದ್ಯಾರ್ಥಿಗಳು ಈ ಕೋರ್ಸಿನಲ್ಲಿ ತಜ್ಞತೆ ಪಡೆಯುತ್ತಾರೆ.

ಯೋಗ:— ಈ ಕೋರ್ಸಿನಲ್ಲಿ ತಜ್ಞತೆ ಪಡೆಯುವ ವಿದ್ಯಾರ್ಥಿಗಳ ಜಾತಕದಲ್ಲಿ ಅನೇಕ ಗ್ರಹಗಳು ಪುರುಷರಾಶಿಯಲ್ಲಿರುತ್ತವೆ. ಅವರಲ್ಲಿಯೂ ರವಿ, ಗುರು, ಮಂಗಳ ಹಾಗೂ ಲಗ್ನೇಶ ಇವರು ಹೆಚ್ಚಾಗಿ ಪುರುಷರಾಶಿಯವರಿರುತ್ತಾರೆ.

ಕ್ರೀಡಾ ಕೋರ್ಸುಗಳು:— ಭಾರತಕ್ಕೆ ಜಾಗತಿಕ ಮಟ್ಟದಲ್ಲಿ ನಡೆಯುವ ಒಲಿಂಪಿಕ್ಸ್ ಕ್ರೀಡಾಸ್ಪರ್ಧೆಯಲ್ಲಿ ಹೆಚ್ಚು ಪದಕಗಳು ದೊರೆಯುತ್ತಿಲ್ಲವೆಂಬ ಸಮಸ್ಯೆ ಕ್ರೀಡಾರಂಗದಲ್ಲಿ ಆಸಕ್ತಿಯುಳ್ಳ ಪ್ರತಿಯೊಬ್ಬರಿಗೂ ಸಮಸ್ಯೆಯೇ ಆಗಿತ್ತು. ಹಾಕಿ ಆಟವೊಂದನ್ನು ಬಿಟ್ಟರೆ ಬೇರೆ ಯಾವ ಕ್ರೀಡೆಯಲ್ಲಾಗಲೀ, ಆಟದಲ್ಲಾಗಲೀ ಭಾರತ ಜಾಗತಿಕ ಮಟ್ಟವನ್ನು ಮುಟ್ಟಿರಲಿಲ್ಲ. ಈ ಸಮಸ್ಯೆಯನ್ನು ಬಗೆಹರಿಸಲು ೧೯೫೪ರಲ್ಲಿ ಕೇಂದ್ರ ಆರೋಗ್ಯ ಸಚಿವೆಯಾಗಿದ್ದ ಶ್ರೀಮತಿ ರಾಜಕುಮಾರಿ ಅಮೃತ ಕೌರ ಅವರು ಒಂದು ಬೃಹತ್ ಯೋಜನೆಯನ್ನು ತಯಾರಿಸಿದರು. ಆ ಯೋಜನೆಯನ್ವಯ ರಾಷ್ಟ್ರೀಯ ಕ್ರೀಡಾಸಮಿತಿಯನ್ನು ರಚಿಸಿ ರಾಷ್ಟ್ರಾದ್ಯಂತ ರಾಜ್ಯಮಟ್ಟದಲ್ಲಿಯೂ, ಜಿಲ್ಲಾಮಟ್ಟದಲ್ಲಿಯೂ ಯುವ ಕ್ರೀಡಾಪ್ರೇಮಿಗಳಿಗೆ ಪ್ರೋತ್ಸಾಹ ನೀಡಿ ಕ್ರೀಡಾ ತರಬೇತಿ, ಆಟಗಳ ತರಬೇತಿ, ಕ್ರೀಡಾ ಕೋಚಿಂಗ್ ಮೊದಲಾದವುಗಳನ್ನು ಪ್ರಾರಂಭಿಸಿ ಇದಕ್ಕಾಗಿ ಸರಕಾರದ ಮುಖಾಂತರ ಹೇರಳವಾಗಿ ಸಹಾಯಧನ ಮಂಜೂರ ಮಾಡಲಾಯಿತು. ಇದರಂತೆ ರಾಜ್ಯದಲ್ಲಿ ಕೇಂದ್ರದ ಕ್ರೀಡಾ-ಆಟಪಾಟಗಳ ತರಬೇತಿ ಪ್ರಾರಂಭಿಸಲಾಗಿ ಒಂದೊಂದು ಆಟದಲ್ಲಿ, ಒಂದೊಂದು ಕ್ರೀಡೆಯಲ್ಲಿ ತರಬೇತಿ ತಜ್ಞರನ್ನು ತಯಾರಿಸುವ ಕಾರ್ಯ ಪ್ರಾರಂಭವಾಯಿತಲ್ಲದೆ ಅನೇಕ ಕಡೆಗಳಲ್ಲಿ ಬೇರೆ ಬೇರೆ ಪ್ರಕಾರದ ಸ್ಪರ್ಧೆಗಳು ಏರ್ಪಡಿಸಲ್ಪಟ್ಟವು.

ಕ್ರೀಡಾಕ್ಷೇತ್ರದಲ್ಲಿ ಅನೇಕ ವಿಭಾಗಗಳು ಇವೆ. ಓಟ, ಜಿಗಿತ, ಎಸೆತ ಮೊದಲಾದವು ಅಥ್ಲೆಟಿಕ್ಸ್ ಎಂದೂ ಫುಟಬಾಲ್, ಕ್ರಿಕೆಟ್, ಹಾಕಿ, ಬಾಸ್ಕೆಟ

ಬಾಲ್, ವಾಲಿಬಾಲ್, ಟೆನಿಸ್ ಮೊದಲಾದವು ಬಾಹ್ಯ ಆಟಗಳೆಂದೂ (Out-door games), ಪಿಂಗ್‌ಪಾಂಗ್ (ಟೇಬಲ್ ಟೆನಿಸ್), ಕೆಟಲ್ ಬಾಲ್, ಕುಸ್ತಿ, ವ್ಯಾಯಾಮ, ಬ್ಯಾಡ್‌ಮಿಂಟನ್, ಜಿಮ್ನಾಸ್ಟಿಕ್ ಮೊದಲಾದವುಗಳು ಅಂತರಿಕ ಆಟಗಳೆಂದೂ, ಖೋಖೋ, ಕಬಡ್ಡಿ, ತಿಳ್ಳಿ ಮೊದಲಾದವುಗಳು ಶುದ್ಧ ಭಾರತೀಯ ಆಟಗಳೆಂದೂ ವಿಭಜಿಸಬಹುದು. ಇದರಂತೆಯೇ ಚದುರಂಗ, ಕೇರಂ ಬೋರ್ಡ್, ಲೆತ್ತ, ಹುಲಿಮನೆ, ಡ್ರಾಫ್ಟ್ಸ್, ಕಾರ್ಡ್ಸ್ ಮೊದಲಾದವು ಬೌದ್ಧಿಕ ಆಟಗಳೆಂದೂ ವಿಂಗಡಿಸಬಹುದು. ಇನ್ನು ಕ್ರಿಕೆಟ್ ಇದು ಅಂತಾರಾಷ್ಟ್ರೀಯ ಆಟವಾಗಿದ್ದರೂ ಇದನ್ನು ಓಲಿಂಪಿಕ್ ಆಟದಲ್ಲಿ ಸೇರಿಸಲಾಗಿಲ್ಲ. ಹಾಗೆಯೇ ಭಾರತೀಯ ಆಟಗಳಾದ ಕಬಡ್ಡಿ, ಖೋಖೋಗಳಿಗೂ ಜಾಗತಿಕ ಮಟ್ಟದ ಬೆಂಬಲವಿಲ್ಲ. ಆದರೆ ಒಂದಾನೊಂದು ದಿನ ಈ ಕೊರತೆ ನೀಗಿ ಜಗತ್ತಿನಾದ್ಯಂತ ಈ ಆಟಗಳೂ ಜಾರಿಗೆ ಬರಬಹುದೆಂದು ಜ್ಯೋತಿಷ್ಯಶಾಸ್ತ್ರದ ಆಧಾರದ ಮೇಲಿಂದ ಹೇಳಬಹುದು. ಇದಲ್ಲದೆ ಜಲಕ್ರೀಡೆಗಳಾದ ಈಜು (Breast stroke, back stroke, diving) ವಾಟರ್‌ಪೋಲೋ, ಬೋಟಿಂಗ್ ಮೊದಲಾದ ಆಟಗಳೂ ಚಳಿಗಾಲದ ಆಟಗಳಾದ ಸ್ಕೇಟಿಂಗ್, ಪರ್ವತಾರೋಹಣ ಮೊದಲಾದ ಪ್ರಕಾರಗಳೂ ಇವೆ. ಹೀಗಾಗಿ ಇವುಗಳಿಗಾಗಿ ವಿಶೇಷ ಪ್ರೋತ್ಸಾಹ, ತರಬೇತಿಗಳು ಲಭಿಸುತ್ತವೆ. ಈ ಆಟಗಳಲ್ಲಿ ಪ್ರಾವೀಣ್ಯತೆ ಪಡೆದವರನ್ನು ಬೇರೆ ಬೇರೆ ಶಾಲೆ-ಕಾಲೇಜುಗಳ ಶಿಕ್ಷಕರೆಂದೂ ಜಿಲ್ಲಾ, ರಾಷ್ಟ್ರ, ಕೇಂದ್ರ, ರಾಜ್ಯಮಟ್ಟದ ಸದಸ್ಯರೆಂದೂ ನೇಮಿಸುವದರೊಡನೆ ರಾಷ್ಟ್ರೀಯ, ಅಂತಾರಾಷ್ಟ್ರೀಯ ಮಟ್ಟದ ಸ್ಪರ್ಧೆಗಳಾದ ಓಲಿಂಪಿಕ್ ನಿರ್ಣಾಯಕ ಪಂದ್ಯಗಳಲ್ಲಿ ಭಾಗವಹಿಸುವ ಅವಕಾಶವು ದೊರೆಯುತ್ತದೆ. ಹೀಗಾಗಿ ಅನೇಕ ಯುವಕರು ಈ ಕೋರ್ಸುಗಳಲ್ಲಿ ಪ್ರವೇಶ ಪಡೆಯಲು ಹಾಗೂ ತಜ್ಞತೆಹೊಂದಲು ತವಕಪಡುತ್ತಿದ್ದರೆ ಅದು ಆಶ್ಚರ್ಯವಲ್ಲ. ಈ ಕೋರ್ಸಿನ ಇನ್ನೊಂದು ಸುದೀರ್ಘವಾದ ಹಿನ್ನೆಲೆಯಲ್ಲಿ ಜ್ಯೋತಿಷ್ಯದ ವಿಚಾರವೇನು, ಈ ಕೋರ್ಸಿನಲ್ಲಿ ಜ್ಞಾನಪಡೆಯಲು ಜಾತಕದಂತಿರಬೇಕು, ಕಾರಕಗ್ರಹ, ಲಗ್ನ, ಸ್ಥಾನಾದಿಗಳಾವವು ಎಂಬುದನ್ನು ಪರಿಶೀಲಿಸಾವಾ.

ಕಾರಕಗ್ರಹ:— ಈ ಕೋರ್ಸಿನ ಕಾರಕಗ್ರಹ ಯಾವವು ಎಂದು

ಪ್ರಶ್ನಿಸಿದರೆ ಒಂದೇ ಶಬ್ದದಲ್ಲಿ ಉತ್ತರಕೊಡುವದು ಕಠಿಣ. ಏಕೆಂದರೆ ಈ ಕೋರ್ಸಿನಲ್ಲಿ ಅನೇಕ ಪ್ರಕಾರದ ಆಟಗಳಿದ್ದು ಭಿನ್ನ ಭಿನ್ನ ಆಟಗಳಿಗೆ ಭಿನ್ನ ಭಿನ್ನ ಗ್ರಹಗಳು ಕಾರಕವಿರುತ್ತವೆ. ಇದೂ ಅಲ್ಲದೆ ಯಾವುದೊಂದು ಆಟಕ್ಕೆ ಅನೇಕ ಗ್ರಹಗಳೂ ಕಾರಕವಿರುತ್ತವೆ. ಆದರೆ ಒಂದು ಸಂಗತಿ ನಿಜ, ಯಾವುದೇ ಆಟಗಳಿಗೆ ಅಥವಾ ಕ್ರೀಡಾಪಟುವಾಗಲು ಜಾತಕದಲ್ಲಿ "ರವಿಯು" ಪೋಷಕನಿರದೆ ಯಾರೂ ಕ್ರೀಡಾಪಟುವಾಗುವದಿಲ್ಲ. ಇನ್ನು ಭಿನ್ನ ಭಿನ್ನ ಆಟಗಳಿಗೆ ಯಾವ ಯಾವ ಗ್ರಹಗಳು ಕಾರಕವಿರುವವೆಂಬುದನ್ನು ಈ ಮುಂದಿನಂತೆ ಕೊಡಲಾಗಿದೆ.

ಕ್ರಿಕೆಟ್, ಹಾಕಿ, ಬಾಸ್ಕೆಟ್‌ಬಾಲ್, ವ್ಹಾಲಿಬಾಲ್, ಟೆನಿಸ್ ಮೊದಲಾದ ಬಾಹ್ಯ ಆಟಗಳಿಗೂ ಖೋಖೋ, ಕಬಡ್ಡಿ, ತಿಳ್ಳಿ, ಕುಸ್ತಿ ಜಿಮ್ನ್ಯಾಶಿಯಂ, ಮುಷ್ಟಿಯುದ್ಧ (Boxing) ಮೊದಲಾದ ಸ್ಪರ್ಧೆಗಳಿಗೂ ರವಿ-ಮಂಗಳರೇ ಕಾರಕರು. ಇದರಂತೆ ಬ್ಯಾಡ್‌ಮಿಂಟನ್, ಚದುರಂಗ, ಕೇರಂ, ಲೆತ್ತ, ಶಟಲ್‌ಕಾಕ್ ಮೊದಲಾದ ಅಂತರಿಕ ಆಟಗಳಿಗೆ ಬುಧ-ಗುರುಗಳು ಕಾರರರು. ಇದರಂತೆ ಚದುರಂಗ, ಲೆತ್ತ, ಕೇರ, ಇಸ್ಪೀಟ್ ಮೊದಲಾದ ಬೌದ್ಧಿಕ ಆಟಗಳಿಗೆ ಬುಧ, ಶುಕ್ರ, ಚಂದ್ರರು ಕಾರಕರು. ಇದರಂತೆ ಜಲಕ್ರೀಡೆಗಳಾದ ಈಜಿನ ಆಟ, ಬೋಟಿಂಗ್, ವಾಟರಪೋಲೋ ಮೊದಲಾದವುಗಳಿಗೆ ಚಂದ್ರನು ಕಾರಕನು. ಚಳಿಗಾಲದ ಆಟಗಳಾದ ಪವ ತಾರೋಹಣ, ಸ್ಕೋಯಿಂಗ್ ಮೊದಲಾದವುಗಳಿಗೆ ಶುಕ್ರ-ಚಂದ್ರರು ಕಾರಕರಿರುತ್ತಾರೆ. ಹೀಗೆ ಭಿನ್ನ ಭಿನ್ನ ಆಟಗಳಿಗೆ ಬೇರೆ ಬೇರೆ ಗ್ರಹಗಳು ಕಾರಕವಿರುತ್ತವೆ.

ಇನ್ನು ಕ್ರಿಕೆಟ್ ಆಟ ಒಂದು ಅದೃಷ್ಟದ ಆಟವೆಂದು ಹೇಳಲಾಗುತ್ತದೆ. ಚಿತ್ತವಟ್ಟು ಗೆಲ್ಲುವದಂತೂ ಸಂಪೂರ್ಣವಾಗಿ ನಾಯಕ (Captain) ನ ದೈವದ ಮೇಲೆಯೇ ಅವಲಂಬಿಸಿರುತ್ತದೆ ಎಂದು ಹೇಳಿದರೆ ತಪ್ಪಿಲ್ಲ. ಇದಲ್ಲದೆ ಈ ಆಟ ಬಹಳ ವೆಚ್ಚದ ಆಟವಿರುವದರಿಂದ ಈ ಆಟವನ್ನು ಆಡುವ ಹಾಗೂ ಇದರಲ್ಲಿ ಕುಶಲತೆಯನ್ನು ಪಡೆಯುವದು ಎಲ್ಲರಿಗೂ ಶಕ್ಯವಿಲ್ಲ. ಇದಲ್ಲದೆ ಈ ಆಟಗಳಲ್ಲಿ ಮೂರು ಮುಖ್ಯ ಭಾಗಗಳಿವೆ :

೧) ಬ್ಯಾಟಿಂಗ್,
೨) ಫೀಲ್ಡಿಂಗ್,
೩) ಬೊಲಿಂಗ್.

ಹೀಗೆ ಮೂರು ವಿಭಾಗಗಳಿರುವದರಿಂದಲೂ ಅನೇಕ ಗ್ರಹಗಳು ಕಾರಕ ವಿರುತ್ತವೆ. ಇದು ಮೈದಾನದ ಆಟವಿರುವದರಿಂದ ರವಿ, ಮಂಗಳರಂತೂ— ಅದರಲ್ಲಿಯೂ ರವಿಯು— ಕಾರಕರಿದ್ದೇ ಇರುತ್ತಾರೆ. ಬ್ಯಾಟಿಂಗ್‌ದಲ್ಲಿ ಪ್ರಾವೀಣ್ಯತೆ ಪಡೆಯಲು ಮಂಗಳನು ಜಾತಕದಲ್ಲಿ ಬಲಾಢ್ಯನಿರಬೇಕು. ಬೋಲಿಂಗ್‌ವಲ್ಲಿ ಪ್ರಾವೀಣ್ಯತೆ ಪಡೆಯಲು ಚಂದ್ರ-ಶುಕ್ರರು ಬಲಾಢ್ಯರಿರು ತ್ತಾರೆ. ಫೀಲ್ಡಿಂಗ್‌ದಲ್ಲಿ ತಜ್ಞತೆ ಪಡೆಯಲು ಬುಧ, ಶುಕ್ರ, ಚಂದ್ರರು ಜಾತಕದಲ್ಲಿ ಪೋಷಕರಿರಬೇಕು. ಹೀಗೆ ಈ ಆಟದಲ್ಲಿ ತಜ್ಞತೆ ಪಡೆಯಲು ಅನೇಕ ಗ್ರಹಗಳ ಬಲಾಬಲವನ್ನು ಪರಿಶೀಲಿಸಬೇಕು.

ಸ್ಥಾನ:— ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ಬಾಹ್ಯ ಆಟವೇ ಇರಲಿ, ಅಂತರಿಕ ಆಟವೇ ಇರಲಿ, ಭಾರತೀಯ ಆಟವೇ ಇರಲಿ, ಪರ- ದೇಶೀಯ ಆಟವೇ ಇರಲಿ, ಬೌದ್ಧಿಕ ಆಟವೇ ಇರಲಿ, ನೀರಾಟವೇ ಇರಲಿ, ಚಳಿಗಾಲದ ಆಟವೇ ಇರಲಿ, ಯಾವುದೇ ಆಟದಲ್ಲಿ ಅಥವಾ ಯಾವುದೇ ಕ್ರೀಡಾಕೋರ್ಸಿನಲ್ಲಿ ತಜ್ಞತೆ ಪಡೆಯಲು ಜಾತಕದಲ್ಲಿ ತನುಸ್ಥಾನ ಪೋಷಕ ವಿರಬೇಕು. ಲಗ್ನ ಹಾಗೂ ಲಗ್ನೇಶ ಪೋಷಕರಿಲ್ಲದೆ ಯಾರೂ ಯಾವ ಆಟದಲ್ಲಿಯೂ ತಜ್ಞತೆ ಪಡೆಯಲಾರರು.

ಲಗ್ನ :— ಲಗ್ನದ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ವೃಷಭ, ಕರ್ಕ, ಸಿಂಹ, ವೃಶ್ಚಿಕ, ಧನು, ಮಕರ, ಮೀನ ಈ ಲಗ್ನದವರೇ ಈ ಕೋರ್ಸಿನಲ್ಲಿ ತಜ್ಞರಿರುವದು ಕಂಡುಬರುತ್ತದೆ.

ರಾಶಿ :— ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ಮೈದಾನದ ಹಾಗೂ ಬಾಹ್ಯ ಆಟಗಳಿಗೆ ಮೇಷ, ಮಿಥುನ, ಸಿಂಹ, ತುಲಾ, ವೃಶ್ಚಿಕ, ಧನು, ಮಕರ, ಮೀನ ಈ ರಾಶಿಯವರೂ ಅಂತರಿಕ ಆಟಗಳಿಗೆ ವೃಷಭ, ಮಿಥುನ, ಕರ್ಕ, ಕನ್ಯಾ, ತುಲಾ, ಮೀನ, ಕುಂಭ ಈ ರಾಶಿಯವರೂ ಬೌದ್ಧಿಕ ಆಟಗಳಿಗೆ ಮಿಥುನ, ತುಲಾ, ಕುಂಭ, ಕರ್ಕ, ಮೀನ ಈ ರಾಶಿ

ಯವರೂ, ಜಲಕ್ರೀಡೆಗಳಿಗೆ ಕರ್ಕ, ವೃಶ್ಚಿಕ, ಮೀನ, ವೃಷಭ, ಮಕರ ಈ ರಾಶಿಯವರೂ ಪ್ರವೀಣರಾಗಿದ್ದುದು ಕಾಣುತ್ತದೆ. ಇದರಂತೆ ಇನ್ನು ಕ್ರಿಕೆಟ್ ಆಟದ ಬ್ಯಾಟಿಂಗಿಗೆ ಮೇಷ, ಮಿಥುನ, ಸಿಂಹ, ತುಲಾ, ವೃಶ್ಚಿಕ, ಧನು, ಮಕರ, ಕುಂಭ ಈ ರಾಶಿಯವರೂ, ಬೋಲಿಂಗಿಗೆ ಮಿಥುನ, ತುಲಾ, ಕುಂಭ, ಮೀನ, ಕರ್ಕ ಈ ರಾಶಿಯವರೂ ಫೀಲ್ಡಿಂಗಿಗೆ ಮಿಥುನ, ತುಲಾ, ಕುಂಭ, ಕರ್ಕ, ಮೀನ, ವೃಷಭ ಈ ರಾಶಿಯವರೂ ಹೆಚ್ಚಾಗಿರುವದು ಕಂಡುಬರುತ್ತದೆ.

## ೧೧. ಸೈನಿಕ ಶಿಕ್ಷಣ

ಭಾರತದಲ್ಲಿ ಸೈನ್ಯವೆಂದರೆ ಕಾಲ್ದಳ, ವಾಯುದಳ, ನೌಕಾದಳ ಎಂಬ ಮೂರು ಶಾಖೆಗಳಿರುತ್ತವೆ. ಒಂದೊಂದು ಶಾಖೆಯೂ ಒಂದೊಂದು ಪ್ರತ್ಯೇಕ ಜಗತ್ತೇ ಆಗಿರುತ್ತದೆ ಎಂದರೆ ತಪ್ಪಿಲ್ಲ. ಏಕೆಂದರೆ ಒಂದೊಂದು ಶಾಖೆಯಲ್ಲಿಯೂ ಎಲ್ಲ ವೃತ್ತಿಯವರೂ ಇರುತ್ತಾರೆ. ರಾಷ್ಟ್ರರಕ್ಷಣೆಯಲ್ಲಿ ತೊಡಗಬೇಕಾದ ಸೈನಿಕರು, ನೌಕಾದಳದವರು, ವಾಯುದಳದವರು ತಮ್ಮ ದೇಹದಾರ್ಢ್ಯವನ್ನು ಕಾಯ್ದುಕೊಳ್ಳಬೇಕಾಗುವದರೊಡನೆ ತಮ್ಮ ತಮ್ಮ ನಿರ್ದಿಷ್ಟ ಕಾರ್ಯದಲ್ಲಿ ಪರಿಣತಿಯನ್ನು ಪಡೆದುಕೊಳ್ಳಬೇಕಾಗುತ್ತದೆ. ಶಿಸ್ತು, ಸಂಯಮ, ದೇಹದಾರ್ಢ್ಯ, ಜಗುಟುತನ, ಸಹಕಾರ, ತ್ಯಾಗ, ಸೇವಾ ಪ್ರವೃತ್ತಿ, ಧೈರ್ಯ, ರಾಷ್ಟ್ರಪ್ರೇಮಗಳ ಮೂರ್ತಿಮಂತರೂಪವನ್ನು ನಾವು ಕಾಣಬೇಕಾದರೆ ಸೈನ್ಯದಲ್ಲಿರುವ ಸೈನಿಕರನ್ನೇ ನೋಡಬೇಕು.

ಈ ವೃತ್ತಿಯಲ್ಲಿ ತೊಡಗಬೇಕಾದರೆ ಯಾವುದಾದರೂ ಶಿಕ್ಷಣದ ತರಬೇತಿಯನ್ನು ವಿಶಿಷ್ಟವಾಗಿ ಪಡೆಯಬೇಕಾಗುತ್ತದೆಯೋ ಎಂಬ ಪ್ರಶ್ನೆ ಉದ್ಭವಿಸುತ್ತದೆ. ಸಾಮಾನ್ಯವಾಗಿ ವೃತ್ತಿ-ಕುಶಲತೆ ಬೇಕಾದ ಯಾವುದೇ ಕಾರ್ಯಕ್ಕೆ ಎಸ್. ಎಸ್. ಎಲ್. ಸಿ.ಯನ್ನು ಕನಿಷ್ಠ ಶಿಕ್ಷಣವೆಂದು ಗೊತ್ತುಪಡಿಸುತ್ತಾರೆ. ಪೆಟ್ಟಿನ ಹುದ್ದೆಗಳಾದ ಕಮೀಶನ್ಡ ಮೊದಲಾದ ಹುದ್ದೆಗಳನ್ನು ಪದವೀಧರರನ್ನು ಆಯ್ಕೆಮಾಡುತ್ತಾರೆ. ಆದರೆ ಸೈನ್ಯದಲ್ಲಿ ಪ್ರವೇಶಪಡೆಯಬೇಕಾದರೆ ಅತಿ ಮುಖ್ಯವಾದ ಅರ್ಹತೆಯೆಂದರೆ ದೈಹಿಕ ಅರ್ಹತೆಯಿರುತ್ತದೆ. ನಿರ್ದಿಷ್ಟವಾದ ದೈಹಿಕ ಆರೋಗ್ಯ ಹಾಗೂ

ಮಾನಸಿಕ ಆರೋಗ್ಯ ದೈಹಿಕವಾಗಿ ಗಟ್ಟಿಮುಟ್ಟಾಗಿರುವದರಷ್ಟೇ ಅಲ್ಲದೆ ನಿರ್ದಿಷ್ಟ ಎತ್ತರ, ನಿರ್ದಿಷ್ಟ ತೂಕ, ನಿರ್ದಿಷ್ಟ ಎದೆಯ ಅಳತೆ, ನಿರ್ದಿಷ್ಟವಾದ ಕನಿಷ್ಠ ವಯೋಮಿತಿ ಮೊದಲಾದವನ್ನು ಹೊಡದಿರಬೇಕಾಗುತ್ತದೆ. ಇದರೊಂದಿಗೆ ಅತಿ ಕ್ಲಿಷ್ಟಕರವಾದ ಪರೀಕ್ಷೆಗಳನ್ನು ಕೊಟ್ಟು ಅದರಲ್ಲಿ ತೇರ್ಗಡೆಯಾದವರನ್ನಷ್ಟೇ ಆಯ್ದುಕೊಳ್ಳುತ್ತಾರೆ. ನಂತರ ತರಬೇತಿ ಕೊಟ್ಟು ಅವರವರ ವೃತ್ತಿಗನುಗುಣವಾಗಿ ತರಬೇತಿಯಿದ್ದರೂ ಅವರವರ ದೈಹಿಕ ಶಿಕ್ಷಣ, ಕೂಚು (Parade), ಆಟ-ಪಾಟ, ವ್ಯಾಯಾಮ ಮುಂತಾದವುಗಳ ಬಗ್ಗೆ ಹೆಚ್ಚು ಲಕ್ಷ್ಯ ಕೊಡಲಾಗುತ್ತದೆ. ಶಿಸ್ತು, ಸಾಂಘಿಕ ಜೀವನ, ವಿಧೇಯತೆಗಳೇ ಮುಖ್ಯ ಗುಣಗಳಿರಬೇಕೆಂಬ ಉದ್ದೇಶದಿಂದ ಇವುಗಳ ತರಬೇತಿ ರೂಪಿಸಲಾಗುತ್ತದೆ.

ಭಾರತದಲ್ಲಿ ಕೆಲವು ಕಡೆ ಸೈನಿಕ ಶಾಲೆಗಳಿವೆ. ಕರ್ನಾಟಕ ರಾಜ್ಯದಲ್ಲಿ ವಿಜಾಪುರದಲ್ಲಿ ಈ ಶಾಲೆಯಿದೆ. ಸೈನಿಕ ಒಲವುಳ್ಳ ಬಾಲಿಕೆಯರಿಗೆ ಸೈನಿಕ ಮಾದರಿಯ ಶಿಕ್ಷಣವನ್ನು ಮಾಧ್ಯಮಿಕ ಶಾಲೆಯಲ್ಲಿ ಒದಗಿಸುವ ಕುರಿತು ಕಿತ್ತೂರಲ್ಲಿ (ಜಿ. ಬೆಳಗಾವಿ ಬಾಲಿಕೆಯರ ವಸತಿ ಶಾಲೆಯಿವೆ. ಈ ಶಾಲೆಗಳು ಭಾವೀ ಸೈನಿಕರಾಗಬಲ್ಲ ಮಕ್ಕಳನ್ನು ತಯಾರು ಮಾಡುತ್ತವೆ. ಇದು ಸೈನ್ಯಭರತಿಗೆ ಪೂರ್ವ ಭಾವೀ ತಯಾರಿಕೆಯೆನ್ನಬಹುದು. ಇಷ್ಟೊಂದು ಈ ಕೋರ್ಸಿನ ಹಿನ್ನೆಲೆಯಲ್ಲಿ ಶಿಕ್ಷಣದ ವಿಷಯವಾಗಿ ಜ್ಯೋತಿಷ್ಯದ ವಿಚಾರವೇನು, ಕಾರಕಗ್ರಹ, ಲಗ್ನ, ಸ್ಥಾನಾದಿಗಳಾವವು ಎಂಬುದನ್ನು ಪರಿಶೀಲಿಸುವಾ.

**ಕಾರಕಗ್ರಹ :—** ಸೈನ್ಯ ಶಿಕ್ಷಣದ ಕೋರ್ಸಿಗೆ ಕಾರಕಗ್ರಹ ಯಾವದು ಎಂದು ಪ್ರಶ್ನಿಸಿದರೆ ಇದಕ್ಕೆ ಉತ್ತರ ಕೊಡುವದು ಕಠಿಣ. ಏಕೆಂದರೆ ಸೈನ್ಯ ಶಿಕ್ಷಣದಲ್ಲಿ ಅನೇಕ ಪ್ರಕಾರಗಳಿವೆ. ಉದಾಹರಣೆಗೆ: ಕಾಲ್ದಳ, ನೌಕಾದಳ, ವಾಯುದಳ ಈ ಮೂರು ಮುಖ್ಯ ದಳಗಳಲ್ಲದೆ ಪೈಲಟ್, ವಿಮಾನ ಪರಿಚಾರಿಕೆ ಮೊದಲಾದ ಹುದ್ದೆಗಳಿರುತ್ತವೆ. ಈ ವಿಭಿನ್ನ ದಳಗಳಿಗೆ ಹಾಗೂ ಹುದ್ದೆಗಳಿಗೆ ವಿಶಿಷ್ಟ ಗ್ರಹ, ರಾಶಿ, ಸ್ಥಾನಗಳು ಕಾರಕವಿರುವವಲ್ಲದೆ ಎಲ್ಲ ದಳಗಳಿಗೂ ಸಾಮಾನ್ಯ ಗ್ರಹ, ರಾಶಿ, ಸ್ಥಾನಗಳೂ

ಕಾರಕವಿರುತ್ತವೆ. ಆದುದರಿಂದ ನಾವು ಈ ಶಿಕ್ಷಣದ ಸಾಮಾನ್ಯ ನಿಯಮಗಳನ್ನು ಮೊದಲು ಪರಿಶೀಲಿಸಿ ವಿಶಿಷ್ಟಪೂರ್ಣ ದಳಗಳಿಗೆ ವಿಶಿಷ್ಟ ಗ್ರಹಾದಿಗಳನ್ನು ಆ ಬಳಿಕ ಪರಿಶೀಲಿಸುವಾ.

ಸಾಮಾನ್ಯ ನಿಯಮಗಳು :— ಸೈನ್ಯಶಿಕ್ಷಣದ ಯಾವುದೇ ಶಿಕ್ಷಣ ಪಡೆಯಲು ಐದು ಸಂಗತಿಗಳು ಜಾತಕದಲ್ಲಿ ಪೋಷಕವಿರಬೇಕು.

೧) ಸೈನ್ಯ ಶಿಕ್ಷಣದ ಕಾರಕಗ್ರಹಗಳೆಂದರೆ ರವಿ–ಮಂಗಳರು ಜಾತಕದಲ್ಲಿ ಪೋಷಕರಿರಬೇಕು. ಅವರಲ್ಲಿಯೂ ರವಿಗಿಂತ ಮಂಗಳನು ಹೆಚ್ಚು ಬಲಾಢ್ಯನಿರಬೇಕು.

೨) ಸೈನಿಕ ಶಿಕ್ಷಣ ಪಡೆಯಲು ತನುಸ್ಥಾನವೇ ಈ ಶಿಕ್ಷಣದ ಕಾರಕ ಸ್ಥಾನವಿರುತ್ತದೆ. ಏಕೆಂದರೆ ಆಯ್ಕೆಯಾಗುವ ಉಮೇದವಾರರ ಶಿಕ್ಷಣ ಪದವಿಗಳಿಗಿಂತ ದೈಹಿಕ ಸ್ಥಿತಿ, ವಯೋಮಾನ, ವ್ಯಕ್ತಿತ್ವವು (Personality) ಈ ಎಲ್ಲ ಸಂಗತಿಗಳಿಗೆ ಹೆಚ್ಚು ಮಹತ್ವ ವಿರುವದರಿಂದ ತನುಸ್ಥಾನ ಹಾಗೂ ಲಗ್ನೇಶರು ಪೋಷಕರಿರಬೇಕು.

೩) ಈ ಕೋರ್ಸಿನ ಶಿಕ್ಷಣ ಪಡೆಯಲು ಅನೇಕ ಗ್ರಹಗಳು ಪುರುಷ ರಾಶಿಯಲ್ಲಿರಬೇಕು.

೪) ಈ ಕೋರ್ಸಿನ ಶಿಕ್ಷಣ ಪಡೆಯುವವರರು ಹೆಚ್ಚಾಗಿ ಮೇಷ, ವೃಷಭ, ಮಿಥುನ, ಕರ್ಕ, ಸಿಂಹ, ವೃಶ್ಚಿಕ, ಧನು, ಮಕರ, ಮೀನ ಈ ಲಗ್ನದವರೇ ಹೆಚ್ಚಾಗಿರುತ್ತಾರೆ.

೫) ಈ ಕೋರ್ಸಿನ ಶಿಕ್ಷಣ ಪಡೆಯುವವರು ಮೇಷ, ಸಿಂಹ, ವೃಶ್ಚಿಕ, ಧನು, ಮಕರ ಈ ರಾಶಿಯವರೇ ಹೆಚ್ಚಾಗಿರುತ್ತಾರೆ. ಇವರ ನಂತರ ತುಲಾ, ಕುಂಭ ಈ ರಾಶಿಯವರನ್ನು ಕಾಣಬಹುದು.

ಹೀಗೆ ಮೇಲ್ಕಂಡ ಐದು ಸಂಗತಿಗಳು ಪೋಷಕವಿದ್ದ ಜಾತಕನು ಸೈನಿಕ ಶಿಕ್ಷಣದಲ್ಲಿ ಪ್ರವೇಶ ಪಡೆದು ತಜ್ಞತೆ ಪಡೆಯಬಹುದು. ಇನ್ನು ವಿಶಿಷ್ಟ ದಳಗಳ ಸೈನಿಕ ಶಿಕ್ಷಣಕ್ಕೆ ಗ್ರಹ, ಲಗ್ನ, ಸ್ಥಾನಾದಿಗಳು ವಿಭಿನ್ನವಿದ್ದು ಅವನ್ನು ಈ ಕೆಳಗಿನಂತೆ ಕೊಡಲಾಗಿದೆ.

೧. ಕಾಲ್ದಳ :— ಈ ಶಿಕ್ಷಣ ಪಡೆಯಲು ಈ ಮುಂದೆ ಬರೆದ ಸಂಗತಿಗಳು ಜಾತಕದಲ್ಲಿ ಪೋಷಕವಿರಬೇಕು.

೧) ಜಾತಕದಲ್ಲಿ ರವಿಗಿಂತ ಮಂಗಳನು ಹೆಚ್ಚು ಬಲಾಢ್ಯನಿರಬೇಕು.

೨) ಲಗ್ನ-ಲಗ್ನೇಶರ ಸಂಗಡ ದಶಮ-ದಶಮೇಶರ ಬಲಾಬಲವನ್ನೂ ಪರಿಶೀಲಿಸಬೇಕು.

೩) ಮೇಷ, ಕರ್ಕ, ಸಿಂಹ, ವೃಶ್ಚಿಕ, ಧನು, ಮಕರ ಈ ಲಗ್ನದ ವಿದ್ಯಾರ್ಥಿಗಳೇ ಈ ಕೋರ್ಸಿನಲ್ಲಿ ತಜ್ಞತೆ ಪಡೆಯಬಹುದು.

೪) ಅನೇಕ ಗ್ರಹಗಳು ಪುರುಷ ರಾಶಿಯಲ್ಲಿರುವವು.

೫) ಈ ವಿದ್ಯಾರ್ಥಿಗಳು ಹೆಚ್ಚಾಗಿ ಮೇಷ, ಸಿಂಹ, ವೃಶ್ಚಿಕ, ಧನು, ಮಕರ, ಕುಂಭ ಈ ರಾಶಿಯವರಿರುತ್ತಾರೆ.

ಹೀಗೆ ಮೇಲ್ಕಂಡ ಐದು ಸಂಗತಿಗಳು ಪೂರಕವಿದ್ದ ವಿದ್ಯಾರ್ಥಿಗಳು ಈ ಕೋರ್ಸಿನಲ್ಲಿ ತಜ್ಞರಿರುತ್ತಾರೆ.

೨. ನೌಕಾದಳ :— ಈ ಕೋರ್ಸಿನ ಶಿಕ್ಷಣ ಪಡೆಯಲು ಈ ಮುಂದೆ ಬರೆದ ಸಂಗತಿಗಳು ಜಾತಕದಲ್ಲಿ ಪೋಷಕವಿರಬೇಕು.

೧) ಜಾತಕದಲ್ಲಿ ಮಂಗಳನಿಗಿಂತ ಚಂದ್ರನೇ ಹೆಚ್ಚು ಬಲಾಢ್ಯನೂ, ಪೋಷಕನೂ ಇರುತ್ತಾನೆ. ಮಂಗಳನು ಕೇವಲ ರಾಶಿಬಲದವನಿರುತ್ತಾನೆ. ರವಿಯು ಸ್ಥಾನಬಲ ರಾಶಿಬಲ ಇಲ್ಲದಿದ್ದರೂ ದುರ್ಬಲನಿರುವದಿಲ್ಲ.

೨) ನೌಕಾದಳ ಶಿಕ್ಷಣ ಪಡೆಯುವವರು ಹೆಚ್ಚಾಗಿ ಮೇಷ, ಕರ್ಕ, ತುಲಾ, ವೃಶ್ಚಿಕ, ಮಕರ, ಮೀನ ಈ ಲಗ್ನದವರೇ ಇರುವದು ಕಂಡು ಬರುತ್ತದೆ.

೩) ಈ ಕೋರ್ಸಿನ ಶಿಕ್ಷಣ ಪಡೆಯಲು ತನುಸ್ಥಾನದೊಂದಿಗೆ ಸಪ್ತಮ ಸ್ಥಾನ, ಭಾಗ್ಯ ಸ್ಥಾನಗಳನ್ನು ಹಾಗೂ ಈ ಸ್ಥಾನಾಧೀಶರ ಬಲಾಬಲವನ್ನು ಪರಿಶೀಲಿಸಬೇಕು.

೪) ಈ ಕೋರ್ಸಿನ ವಿದ್ಯಾರ್ಥಿಗಳು ವೃಷಭ, ಕರ್ಕ, ವೃಶ್ಚಿಕ, ಮಕರ, ಸಿಂಹ, ಧನು ಈ ರಾಶಿಯವರಿದ್ದುದು ಕಂಡುಬರುತ್ತದೆ.

೫) ಈ ವಿದ್ಯಾರ್ಥಿಗಳ ಜಾತಕದಲ್ಲಿ ಲಗ್ನೇಶ, ರವಿ, ಚಂದ್ರ, ಮಂಗಳ ಇವರು ಬಲಾಢ್ಯರೂ, ಪೋಷಕರೂ ಇರುತ್ತಾರೆ.

ಹೀಗೆ ಮೇಲ್ಕಂಡ ಐದು ಸಂಗತಿಗಳ ಪೋಷಕರಿದ್ದ ವಿದ್ಯಾರ್ಥಿಗಳು ನೌಕಾಶಿಕ್ಷಣದಲ್ಲಿ ತಜ್ಞರಿರುತ್ತಾರೆ.

೩. ವಾಯುದಳ: – ವಾಯುದಳದ ಪೈಲಟ್ ಹಾಗೂ ವೈಮಾನಿಕ ಕೆಲಸಗಾರ ಮೊದಲಾದ ವಾಯುದಳದ ಶಿಕ್ಷಣ ಪಡೆಯಲು ಜಾತಕದಲ್ಲಿ ಈ ಮುಂದೆ ಬರೆದ ಸಂಗತಿಗಳು ಪೋಷಕವಿರಬೇಕು.

೧) ಜಾತಕದಲ್ಲಿ ಮಂಗಳನಿಗಿಂತ ಶನಿಯು ಹೆಚ್ಚು ಪೋಷಕನಿರಬೇಕು. ಅಂದರೆ ಶನಿಯು ರಾಶಿಬಲದವನೂ, ಸ್ಥಾನಬಲದವನೂ, ಯೋಗ ಕಾರಕನೂ ಇದ್ದರೆ ಮಂಗಳನು ಕೇವಲ ರಾಶಿಬಲದವನಿರುತ್ತಾನ.

೨) ಇವರ ಜಾತಕದಲ್ಲಿ ಅನೇಕ ಗ್ರಹಗಳು ಪುರುಷರಾಶಿಯಲ್ಲಿರುತ್ತವೆ. ಹಾಗೂ ಅನೇಕ ಗ್ರಹಗಳು ವಾಯು ಇಲ್ಲವೆ ಭೂರಾಶಿಯಲ್ಲಿರುತ್ತವೆ. ಅದರಲ್ಲಿಯೂ ಶನಿ-ಚಂದ್ರರು ಹೆಚ್ಚಾಗಿ ವಾಯುರಾಶಿಯಲ್ಲಿರುತ್ತಾರೆ.

೩) ಇವರ ಜಾತಕದಲ್ಲಿ ಲಗ್ನ, ತೃತೀಯ, ಭಾಗ್ಯ ಈ ಸ್ಥಾನಗಳೂ ಹಾಗೂ ಈ ಸ್ಥಾನಾಧೀಶರೂ ಪೋಷಕರಿರುತ್ತಾರೆ.

೪) ಈ ಕೋರ್ಸಿನ ವಿದ್ಯಾರ್ಥಿಗಳು ಮೇಷ, ವೃಷಭ, ಕರ್ಕ, ಸಿಂಹ, ತುಲಾ, ವೃಶ್ಚಿಕ, ಧನು, ಕುಂಭ ಈ ಲಗ್ನದವರಿರುತ್ತಾರೆ.

೫) ಈ ಕೋರ್ಸಿನ ವಿದ್ಯಾರ್ಥಿಗಳು ಹೆಚ್ಚಾಗಿ ಮಿಥುನ, ತುಲಾ, ಕುಂಭ ಈ ರಾಶಿಯವರೂ ತದನಂತರ ಮೇಷ, ಸಿಂಹ, ವೃಶ್ಚಿಕ, ಧನು, ಮಕರ ಈ ರಾಶಿಯವರೂ ಇರುವದು ಕಂಡುಬರುತ್ತದೆ.

ಹೀಗೆ ಈ ಐದು ಸಂಗತಿಗಳು ಪೋಷಕವಿದ್ದ ವಿದ್ಯಾರ್ಥಿಗಳು ಈ ಕೋರ್ಸಿನಲ್ಲಿ ತಜ್ಞತೆಯನ್ನು ಪಡೆಯುತ್ತಾರೆ.

೪. ವಿಮಾನ ಪರಿಚಾರಿಕೆಯ ಶಿಕ್ಷಣ:— ವಿಮಾನ ಪರಿಚಾರಿಕೆಯ ಶಿಕ್ಷಣದ ಸೌಲಭ್ಯ ಎಲ್ಲ ವಿದ್ಯಾರ್ಥಿನಿಯರಿಗೂ ಲಭಿಸದು. ಏಕೆಂದರೆ ಈ ಕೋರ್ಸಿನಲ್ಲಿ ಪ್ರವೇಶ ಪಡೆಯಲು ನಿರ್ದಿಷ್ಟ ನಿಯಮಗಳಿವೆ.

ಅದರಲ್ಲಿ ಉತ್ತೀರ್ಣರಾಗಿ ಆಯ್ಕೆಗೊಳ್ಳುವದು ಅತಿ ಕಠಿಣವಾದ ಸಂಗತಿ ಯಾಗುತ್ತದೆ. ಎಸ್. ಎಸ್. ಎಲ್. ಸಿ.ಯಲ್ಲಿ ಉತ್ತೀರ್ಣರಾಗಿದ್ದು ವಯಸ್ಸಿನ ೧೮ರಿಂದ ೨೫ರ ಒಳಗಿನ ವಿದ್ಯಾರ್ಥಿನಿ ಅಭ್ಯರ್ಥಿಯು ಇರ ಬೇಕಲ್ಲದೆ ಇವರ ದೈಹಿಕ ಅರ್ಹತೆಗಳಾದ ಎತ್ತರ ೫'-೧" ನಿಂದ ೫'-೭"ನ ವರೆಗೆ ಹಾಗೂ ತೂಕ ೯೭ ಪೌಂಡಿನಿಂದ ೧೨೮ ಪೌಂಡಿನ ಒಳಗೆ ಇದ್ದು ಆಕರ್ಷಣೀಯ ಹಾಗೂ ಪ್ರಸನ್ನತಾಯುಕ್ತ ವ್ಯಕ್ತಿಮತ್ವದೊಂದಿಗೆ ಆಕರ್ಷಕ ಕಾಂತಿಯುಕ್ತ ಕಣ್ಣು, (ಚಾಳೀಸು ಧರಿಸಕೂಡದು ಹಾಗೂ ಅವಿವಾಹಿತ) ಇರಬೇಕು. ಸುಮಧುರ ಧ್ವನಿ, ಒಳ್ಳೆಯ ನಡತೆ, ಆಕರ್ಷಕ ಕೇಶರಚನೆ ಹಾಗೂ ಬೆಡಗು-ವೈಯಾರಗಳಿಂದ ನಡೆಯುವ ಹಾಗೂ ಅನೇಕ ಭಾಷೆ ಗಳನ್ನು ಲೀಲಾಜಾಲವಾಗಿ ಮಾತನಾಡುವ ವಕ್ತೃತ್ವಶಕ್ತಿ ಈ ಎಲ್ಲ ದೈಹಿಕ ಹಾಗೂ ವೈದ್ಯಕೀಯ ಅರ್ಹತೆ (Medical fitness) ಯಲ್ಲಿ ಉತ್ತೀರ್ಣರಾದವರಿಗೆ ಮಾತ್ರ ಈ ಕೋರ್ಸಿನಲ್ಲಿ ಪ್ರವೇಶಾರ್ಹತೆ ಲಭಿಸು ತ್ತದೆ. ಪ್ರವೇಶಾರ್ಹತೆ ದೊರಕಿದ ನಂತರ ೩೦ ದಿನಗಳ ವರೆಗೆ ತರಬೇತಿ ಶಿಕ್ಷಣವನ್ನು ಕೊಡಲಾಗುತ್ತದೆ. ಇಷ್ಟೊಂದು ಈ ಕೋರ್ಸಿನ ಹಿನ್ನೆಲೆ ಯಲ್ಲಿ ಈ ಕೋರ್ಸಿನಲ್ಲಿ ಪ್ರವೇಶ ಹಾಗೂ ತಜ್ಞತೆ ಪಡೆಯಲು ಜಾತಕ ಹೇಗಿರಬೇಕು, ಕಾರಕಗ್ರಹ, ಲಗ್ನ, ಸ್ಥಾನಾದಿಗಳಾವವು ಎಂಬುದನ್ನು ಪರಿಶೀಲಿಸುವಾ.

ಗ್ರಹ :— ಈ ಕೋರ್ಸಿನ ಕಾರಕಗ್ರಹವೆಂದರೆ ಶುಕ್ರ-ಚಂದ್ರರು. ಏಕೆಂದರೆ ಆಕರ್ಷಕ ವ್ಯಕ್ತಿತ್ವ, ಸೌಂದರ್ಯ, ಗೌರವರ್ಣ ಇವು ಇರಬೇಕಾ ದರೆ ಶುಕ್ರ-ಚಂದ್ರರು ಜಾತಕದಲ್ಲಿ ಪೋಷಕರಿಲ್ಲದೆ ಸಾಧಿಸದು. ಶುಕ್ರ ಚಂದ್ರರ ತರುವಾಯ ರವಿ-ಮಂಗಳರನ್ನೂ ಪರಿಶೀಲಿಸಬೇಕು. ಏಕೆಂದರೆ ಸದೃಢ ದೇಹ, ದೋಷರಹಿತ ಅಂಗಾಂಗಗಳು ಅರ್ಥಾತ್ ವೈದ್ಯಕೀಯ ಪರೀಕ್ಷೆಯಲ್ಲಿ ತೇರ್ಗಡೆಯಾಗಿ ಅರ್ಹತೆ ಪಡೆಯಲು ಜಾತಕದಲ್ಲಿ ರವಿಯೂ ಪೋಷಕನಿರಲೇಬೇಕು. ಇದರಂತೆ ಈ ಕೋರ್ಸಿನ ಶಿಕ್ಷಣ ಪೂರ್ತಿ ಗೊಳಿಸಿ ವಿಮಾನಯಾನಗಳಲ್ಲಿ ವಿಮಾನ ಪರಿಚಾರಿಕೆಯರೆಂದು ಕೆಲಸ ಮಾಡಲು ಧೈರ್ಯಶಾಲಿಗಳೂ, ಸಹನಶೀಲರೂ ಇರಬೇಕಾದವರ ಜಾತಕ

ದಲ್ಲಿ ಕಾಜನೂ ಬಲಾಢ್ಯನಿರಬೇಕು. ಆದರೆ ಒಂದು **ಸಂಗತಿ ನಿಜ**, ಶುಕ್ರ-ಚಂದ್ರರು ರಾಶಿಬಲದವರೂ, ಸ್ಥಾನಬಲದವರೂ, **ಯೋಗ** ಕಾರಕರೂ ಇರುತ್ತಾರೆ. ಆದರೆ ರವಿ-ಮಂಗಳರು ಕೇವಲ ರಾಶಿ ಬಲದವರಿರುತ್ತಾರೆ.

**ಸ್ಥಾನ :**— ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ತನುಸ್ಥಾನವೇ ಈ ಕೋರ್ಸಿನ ಕಾರಕಸ್ಥಾನ. ಏಕೆಂದರೆ ಆಕರ್ಷಕ ಹಾಗೂ ಸದೃಢ ವಾದ ವ್ಯಕ್ತಿಮತ್ತ್ವವೇ ಈ ಕೋರ್ಸಿನ ಪ್ರವೇಶಕ್ಕೆ ಅರ್ಹತೆಯಿರುವದರಿಂದ ತನುಸ್ಥಾನ ಹಾಗೂ ಲಗ್ನೇಶ ಜಾತಕದಲ್ಲಿ ಪೋಷಕರಿರಲೇಬೇಕು.

**ಲಗ್ನ :**— ಲಗ್ನದ ದೃಷ್ಟಿಯಿಂದ ಪರಿಶೀಲಿಸಿದರೆ ವೃಷಭ, ಮಿಥುನ, ಕರ್ಕ, ಕನ್ಯಾ, ತುಲಾ, ಮಕರ, ಕುಂಭ, ಮೀನ ಈ ಲಗ್ನದವರೇ ಹೆಚ್ಚಾಗಿರುವದು ಕಂಡುಬರುತ್ತದೆ.

**ರಾಶಿ:**— ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ವೃಷಭ, ಮಿಥನ, ಕರ್ಕ, ಕನ್ಯಾ, ತುಲಾ, ಕುಂಭ, ಮೀನ ಈ ರಾಶಿಯವರೇ ಈ ಕೋರ್ಸಿನಲ್ಲಿ ತಜ್ಞರಿರುವದು ಕಂಡುಬರುತ್ತದೆ.

**ಯೋಗ :**— ಮೊದಲನೆಯದಾಗಿ ಇವರ ಜಾತಕದಲ್ಲಿ ಶುಕ್ರ-ಚಂದ್ರರು ಸ್ತ್ರೀರಾಶಿಯಲ್ಲಿ, ರವಿ-ಮಂಗಳರು ಪುರುಷರಾಶಿಯಲ್ಲಿ ಇರುತ್ತಾರೆ. ಎರಡನೆಯದಾಗಿ ಶುಕ್ರ-ಚಂದ್ರರು ಭೂ ಇಲ್ಲವೆ ವಾಯುರಾಶಿಯಲ್ಲಿ ಇದ್ದರೆ ರವಿ-ಮಂಗಳರು ಅಗ್ನಿರಾಶಿಯವರು ಅಥವಾ ವೃಶ್ಚಿಕ, ಮಕರ ರಾಶಿಯವರಿರುತ್ತಾರೆ. ಹೀಗೆ ಮೇಲ್ಕಂಡ ಐದು ಸಂಗತಿಗಳು ಪೋಷಕವಿದ್ದ ವಿದ್ಯಾರ್ಥಿನಿಯರು ಈ ಕೋರ್ಸಿನಲ್ಲಿ ತಜ್ಞತೆ ಪಡೆಯುತ್ತಾರೆ.

### ೧೨. ಸ್ಥಾನಿಕ ಸಂಸ್ಥೆಯ ನೌಕರಿಯ ಶಿಕ್ಷಣ

ಸಾರ್ವಜನಿಕ ಆರೋಗ್ಯ ಹಾಗೂ ಸಂರಕ್ಷಣೆಯ ಕಾರ್ಯದಲ್ಲಿ ಸ್ಥಾನಿಕಸ್ವರಾಜ್ಯ ಕೋರ್ಸುಗಳು ಬಹಳ ಮಹತ್ವದ್ದಿರುತ್ತವೆ. ಈ ಸ್ಥಾನಿಕಸ್ವರಾಜ್ಯ ಸೇವಾಕ್ಷೇತ್ರದಲ್ಲಿ ಮುಖ್ಯವಾಗಿ ಮೂರು ಶಿಕ್ಷಣ ಕೋರ್ಸುಗಳಿವೆ.

೧) ಸ್ಯಾನಿಟರಿ ಇನಸ್ಪೆಕ್ಟರ್ಸ್ ಕೋರ್ಸ್.

೨) ಅಗ್ನಿಶಾಮಕ ದಳದವರು (Fire fighters).

೩) ಸ್ಥಾನಿಕ ಸಂಸ್ಥೆಗಳ ಕಾರ್ಯದರ್ಶಿಗಳು.

ಹೀಗೆ ಮೂರು ಪ್ರಕಾರಗಳಿದ್ದು ಈ ಮೂರೂ ಪ್ರಕಾರದ ಶಿಕ್ಷಣದ ಕೋರ್ಸುಗಳಿವೆ. ವಿಭಿನ್ನ ಗ್ರಹ, ರಾಶಿ, ಸ್ಥಾನ, ಲಗ್ನಾದಿಗಳು ಕಾರಕವಿರುವದರಿಂದ ಅವನ್ನು ಪ್ರತ್ಯೇಕವಾಗಿ ಪರಿಶೀಲಿಸುವಾ.

೧. ಸ್ಯಾನಿಟರಿ ಇನಸ್ಪೆಕ್ಟರ್ಸ ಕೋರ್ಸ್ :— ಸಾರ್ವಜನಿಕ ಆರೋಗ್ಯ ಮೇಲ್ವಿಚಾರಕರಾಗಿರುವ ಈ ಸ್ಯಾನಿಟರಿ ಇನಸ್ಪೆಕ್ಟರರ ಪಾತ್ರ ಬಹಳ ಮಹತ್ವದ್ದಿರುವದರಿಂದ ಈ ಕೋರ್ಸಿನ ಬೇಡಿಕೆ ಬಹಳಷ್ಟಿದೆ. ಈ ಶಿಕ್ಷಣವು ಈ ಹಿಂದೆ ಏಕರೂಪ ಪದ್ಧತಿ (Unif rm) ಪಡೆದಿರಲಿಲ್ಲ. ಆದರೆ ೧೯೫೯ರಲ್ಲಿ ಅಖಿಲಭಾರತ ಸ್ಥಾನಿಕ ಸ್ವರಾಜ್ಯ ಸಂಸ್ಥೆಗಳ ಕೇಂದ್ರ ಪ್ರಾರಂಭಿಸುವ ನಿರ್ಧಾರವನ್ನು ಕೇಂದ್ರ ಸರಕಾರವು ಕೈಕೊಂಡಾಗ ಏಕರೂಪ ಶಿಕ್ಷಣ ಜಾರಿಗೆ ಬಂದಿತು. ಇದರ ಅನ್ವಯ ಈಗ ಭಾರತಾದ್ಯಂತ ಆರು ತಿಂಗಳು ಲಘು ಅವಧಿಯ (Short courses) ತರಬೇತಿಯನ್ನು ರೂಪಿಸಲಾಯಿತು. ಈ ಕೋರ್ಸನ್ನು ಸೇರಬಯಸುವ ಅಭ್ಯರ್ಥಿಯು ಎಸ್. ಎಸ್. ಎಲ್. ಸಿ. ತೇರ್ಗಡೆಯಾಗಿರಬೇಕೆಂಬುದು ಕನಿಷ್ಠ ಶಿಕ್ಷಣದ ಅರ್ಹತೆಯಾಗಿದ್ದು ಈ ತರಬೇತಿಯ ಅವಧಿಯಲ್ಲಿ ಪ್ರಾಥಮಿಕ ಭೌತಶಾಸ್ತ್ರ, ರಸಾಯನಶಾಸ್ತ್ರ, ಪ್ರಾಥಮಿಕ ಅಣುಜೀವಶಾಸ್ತ್ರ, (Bacteriolgy), ನೀರಿನ ರಚನೆ, ವಾಯುಸಂಚಲನ (Ventilation), ಮಣ್ಣು-ಮಣ್ಣಿನ ರೀತಿಗಳು, ಮನೆ ರಚನೆ, ಆಹಾರ ಹಾಗೂ ಸಮತೋಲ ಆಹಾರ (Balanced food), ಹಾಲು, ಹಾಲಿನ ರಚನೆ, ಮಿಶ್ರಿತ ಆಹಾರ, ಸ್ಥಾನಿಕ ಸ್ವರಾಜ್ಯದ ಕಾಯಿದೆ, ಸಂತಾಸುಗಳ ಮಾದರಿಗಳು, ಔದ್ಯೋಗಿಕ ಆರೋಗ್ಯ, ಶಾಲಾ ಆರೋಗ್ಯ, ಮಕ್ಕಳ ಕಲ್ಯಾಣ ಕೇಂದ್ರಗಳ ಅವಶ್ಯಕತೆ, ಸಾಂಕ್ರಾಮಿಕ ರೋಗಗಳ ನಿಯಂತ್ರಣ, ಆರೋಗ್ಯ ಶಿಕ್ಷಣ, ಭಾರತದಲ್ಲಿ ಸಾರ್ವಜನಿಕ ಆರೋಗ್ಯದ ರಕ್ಷಣೆ ಹಾಗೂ ಆಡಳಿತ ಮೊದಲಾದ ವಿಷಯಗಳನ್ನು ಕಲಿಯಬೇಕಾಗುವದರೊಡನೆ ತಾತ್ವಿಕ ಹಾಗೂ

ಪ್ರಾಯೋಗಿಕ ಶಿಕ್ಷಣದ ತರಬೇತಿಯನ್ನು ಈ ಕೋರ್ಸಿನಲ್ಲಿ ಒದಗಿಸಲಾಗುತ್ತದೆ. ಇಷ್ಟೊಂದು ಹಿನ್ನೆಲೆಯ ಈ ಕೋರ್ಸಿನ ವಿಷಯವಾಗಿ ಜ್ಯೋತಿಷ್ಯದ ವಿಚಾರವೇನು, ಕಾರಕಗ್ರಹ, ಲಗ್ನಾದಿಗಳು ಯಾವವು ಎಂಬುದನ್ನು ಪರಿಶೀಲಿಸುವಾ.

ಇದೊಂದು ಅಲ್ಪಾವಧಿಯ ಸರ್ಟಿಫಿಕೇಟ್ ಕೋರ್ಸಿರುವದರಿಂದ ಈ ಕೋರ್ಸಿನಲ್ಲಿ ತಜ್ಞತೆ ಪಡೆಯಲು ಜಾತಕದಲ್ಲಿ ಈ ಮುಂದೆ ಬರೆದ ಸಂಗತಿಗಳು ಪೋಷಕವಿರಬೇಕು.

೧) ಈ ಶಿಕ್ಷಣದ ಕಾರಕಗ್ರಹವೆಂದರೆ ಶನಿಯು. ಆದುದರಿಂದ ಜಾತಕದಲ್ಲಿ ಶನಿಯು ಬಲಾಢ್ಯನಿರಲೇಬೇಕು. ಶನಿಯ ತರುವಾಯ ಜಾತಕದಲ್ಲಿ ಕುಜನು ಬಲಾಢ್ಯನಿರಬೇಕು. ಏಕೆಂದರೆ ಇದೊಂದು ಬಾಹ್ಯ ಕಾರ್ಯಾಚರಣೆ (Out-door Executive work) ಕೆಲಸವೇ ಪ್ರಾಧಾನ್ಯವಿರುವ ಕುಜನನ್ನೂ ಪರಿಶೀಲಿಸಬೇಕು. ಆದರೆ ಒಂದು ಸಂಗತಿ ನಿಜ, ಈ ಶಿಕ್ಷಣ ಪಡೆಯುವ ವಿದ್ಯಾರ್ಥಿಗಳಲ್ಲಿ ಶನಿಯು ರಾಶಿಬಲದವನೂ, ಸ್ಥಾನಬಲದವನೂ, ಯೋಗ ಕಾರಕನೂ ಇದ್ದರೆ, ಕುಜನು ಕೇವಲ ರಾಶಿಬಲದವನಿರುತ್ತಾನೆ.

೨) ಈ ಕೋರ್ಸಿನ ವಿದ್ಯಾರ್ಥಿಗಳ ಜಾತಕದಲ್ಲಿ ಪಂಚಮಸ್ಥಾನ ಹಾಗೂ ಪಂಚಮೇಶರಿಗಿಂತ ತೃತೀಯಸ್ಥಾನ,ತನುಸ್ಥಾನ ಹಾಗೂ ತೃತೀಯೇಶ, ಲಗ್ನೇಶರು ಹೆಚ್ಚು ಪೋಷಕರೂ, ಬಲಾಢ್ಯರೂ ಇರುತ್ತಾರೆ. ಏಕೆಂದರೆ ಇದು ಅಲ್ಪಾವಧಿಯ ಹಾಗೂ ಪ್ರಾತ್ಯಕ್ಷಿಕೆಯೇ ಮುಖ್ಯವಿರುವ ಕೋರ್ಸಿರುವದರಿಂದ ತೃತೀಯಸ್ಥಾನ ಹಾಗೂ ತೃತೀಯೇಶರು ಜಾತಕದಲ್ಲಿ ಪೋಷಕರಿರಬೇಕು. ಇದರಂತೆ ಈ ಕೋರ್ಸಿನಲ್ಲಿ ತಜ್ಞತೆ ಪಡೆಯಲು ಜಾತಕನು ಸದೃಢ ಶರೀರವುಳ್ಳವನಾಗಿರಬೇಕಾಗುವದರಿಂದ ತನುಸ್ಥಾನ ಹಾಗೂ ಲಗ್ನೇಶರು ಪೋಷಕರಿರಬೇಕು.

೩) ಈ ಕೋರ್ಸಿನ ವಿದ್ಯಾರ್ಥಿಗಳು ಮೇಷ, ವೃಷಭ, ಸಿಂಹ,ತುಲಾ, ವೃಶ್ಚಿಕ, ಮಕರ, ಕುಂಭ ಈ ಲಗ್ನದವರೇ ಹೆಚ್ಚಾಗಿರುತ್ತಾರೆ.

೪) ಈ ಕೋರ್ಸಿನ ವಿದ್ಯಾರ್ಥಿಗಳು ಹೆಚ್ಚಾಗಿ ಮೇಷ, ಮಿಥುನ, ಸಿಂಹ, ತುಲಾ, ವೃಶ್ಚಿಕ, ಧನು, ಮಕರ, ಕುಂಭ ಈ ರಾಶಿಯವರಿರುತ್ತಾರೆ.

೫) ಇವರ ಜಾತಕದಲ್ಲಿ ಅನೇಕ ಗ್ರಹಗಳು ಪುರುಷ ರಾಶಿಯಲ್ಲಿರುತ್ತವೆ. ಅದರಲ್ಲಿಯೂ ಲಗ್ನೇಶ, ಚಂದ್ರ, ಮಂಗಳರು ಹೆಚ್ಚಾಗಿ ಪುರುಷ ರಾಶಿಯಲ್ಲಿ ಇರುತ್ತಾರೆ.

ಹೀಗೆ ಮೇಲ್ಕಂಡ ಐದು ಸಂಗತಿಗಳು ಪೋಷಕವಿದ್ದ ವಿದ್ಯಾರ್ಥಿಗಳು ಈ ಕೋರ್ಸಿನಲ್ಲಿ ತಜ್ಞತೆ ಪಡೆಯಬಹುದು.

೨. ಸ್ಥಾನಿಕ ಸಂಸ್ಥೆಗಳ ಕಾರ್ಯದರ್ಶಿಗಳ ಕೋರ್ಸುಗಳು:– ಗ್ರಾಮ ಪಂಚಾಯತಿ, ಗ್ರುಪ್ ಪಂಚಾಯತಿ, ತಾಲೂಕಾ ಬೋರ್ಡ (ಟಿ.ಡಿ.ಬಿ.), ಜಿಲ್ಹಾ ಪರಿಷತ್ (ಜಿಲ್ಹಾ ಬೋರ್ಡ), ನಗರಸಭೆ, ಕಾರ್ಪೋರೇಶನ್ ಮೊದಲಾದ ಸ್ಥಾನಿಕ ಸಂಸ್ಥೆಗಳ ಕಾಯರ್ದರ್ಶಿ, ಚೀಫ್ ಆಫೀಸರ, ಅಸಿಸ್ಟಂಟ್ ಕಮೀಶನರ್ ಮೊದಲಾದ ಕೋರ್ಸುಗಳ ಹಾಗೂ ಸಹಕಾರಿ ಸಂಘಗಳ ಕಾರ್ಯದರ್ಶಿ ಕೋರ್ಸುಗಳ ವ್ಯಾಸಂಗ ಮಾಡುವ ವಿದ್ಯಾರ್ಥಿಗಳು ಲೆಕ್ಕ-ಪತ್ರದ ಹಾಗೂ ಅದಕ್ಕೆ ಸಂಬಂಧಪಟ್ಟ ಮಾಹಿತಿ ಮತ್ತು ಅವನ್ನು ಹೇಗೆ ಒಳ್ಳೆಯ ರೀತಿಯಿಂದ ಬರೆಯಬೇಕೆಂಬುದರ ಕಲ್ಪನೆ, ಸ್ಥಾನಿಕ ಸಂಸ್ಥೆಗಳ ಕಾಯ್ದೆ, ಸರಕಾರದ ಮಹತ್ವದ ಪತ್ರಗಳನ್ನು ಅರ್ಥ ಮಾಡಿಕೊಂಡು ಯೋಜನೆ ಹಾಗೂ ಕಾರ್ಯಗಳಿಗೆ ಹೊಂದಿಕೊಳ್ಳುವ ರೀತಿ ಇವೇ ಮುಖ್ಯ ವಿಷಯಗಳನ್ನು ಅಭ್ಯಾಸ ಮಾಡಬೇಕಾಗುತ್ತದೆ. ಈ ಕೋರ್ಸು ಅಲ್ಪಾವಧಿಯದಿದ್ದು ಆರು ತಿಂಗಳ ಅವಧಿಯು ಕೆಲವು ಕಡೆ ಇದ್ದರೆ ಮತ್ತೆ ಕೆಲವು ಕಡೆ ಒಂಬತ್ತು ತಿಂಗಳ ಅವಧಿಯ ಕೋರ್ಸಿರುತ್ತದೆ. ಇಷ್ಟೊಂದು ಈ ಕೋರ್ಸಿನ ಹಿನ್ನೆಲೆಯಲ್ಲಿ ಈ ಕೋರ್ಸಿನಲ್ಲಿ ತಜ್ಞತೆ ಪಡೆಯಲು ಜಾತಕವು ಹೇಗಿರಬೇಕೆಂಬುದನ್ನು ಪರಿಶೀಲಿಸುವಾ. ಈ ಕೋರ್ಸಿನಲ್ಲಿ ತಜ್ಞತೆ ಪಡೆಯಲು ಜಾತಕದಲ್ಲಿ ಈ ಮುಂದಿನ ಸಂಗತಿಗಳು ಪೋಷಕವಿರಬೇಕು.

೧) ಲೆಕ್ಕ-ಪತ್ರದ ವಿಷಯವೇ ಮುಖ್ಯವಿರುವದರಿಂದ ಬುಧನಂತೂ ಜಾತಕದಲ್ಲಿ ಪೋಷಕನಿರಲೇಬೇಕಾಗುವದಲ್ಲದೆ ಶನಿಯೂ ಪೋಷಕನಿರಬೇಕು. ಏಕೆಂದರೆ ಯಾವುದೇ ಸ್ಥಾನಿಕ ಸಂಸ್ಥೆಯ ಕೋರ್ಸಿಗೆ ಶನಿಯೂ ಕಾರಕನಿರುವನು.

೨) ಈ ಕೋರ್ಸಿನ ವಿದ್ಯಾರ್ಥಿಗಳು ಹೆಚ್ಚಾಗಿ ವೃಷಭ, ಮಿಥುನ, ಕರ್ಕ, ಕನ್ಯಾ, ತುಲಾ, ಧನು, ಮಕರ, ಕುಂಭ, ಮೀನ ಈ ಲಗ್ನದವರೇ ಇರುತ್ತಾರೆ.

೩) ಈ ಕೋರ್ಸಿನ ವಿದ್ಯಾರ್ಥಿಗಳಿಗೆ ಹೆಚ್ಚಾಗಿ ಲೆಕ್ಕ-ಪತ್ರದ ನುತ್ತಾ ಪ್ರಾಯೋಗಿಕ ವಿಷಯವೇ ಮುಖ್ಯವಿರುವದರಿಂದ ತೃತೀಯಸ್ಥಾನ ಮತ್ತು ತೃತೀಯೇಶರೂ ಪೋಷಕರಿರಬೇಕಾಗುವದಲ್ಲದೆ ದಶಮಸ್ಥಾನ, ದಶಮೇಶರೂ ಪೋಷಕರಿರಬೇಕು. ಏಕೆಂದರೆ ಇದೊಂದು ಉದ್ಯೋಗದ ನೌಕರಿಯ ಕೋರ್ಸಿರುವದರಿಂದ ದಶಮಸ್ಥಾನ, ದಶಮೇಶರು ಬಲಾಢ್ಯರಿರಬೇಕು.

೪) ಈ ಕೋರ್ಸಿನ ವಿದ್ಯಾರ್ಥಿಗಳು ವೃಷಭ, ಮಿಥುನ, ಕರ್ಕ, ಕನ್ಯಾ, ತುಲಾ, ಕುಂಭ, ಮೀನ ಈ ರಾಶಿಯುವರಿರುತ್ತಾರೆ.

೫) ಇವರ ಜಾತಕವಲ್ಲಿ ಅನೇಕ ಗ್ರಹಗಳು ಸ್ತ್ರೀರಾಶಿಯಲ್ಲಿರುತ್ತವೆ.

ಹೀಗೆ ಮೇಲ್ಕಂಡ ಐದು ಸಂಗತಿಗಳು ಪೋಷಕವಿದ್ದ ವಿದ್ಯಾರ್ಥಿಗಳು ಈ ಕೋರ್ಸಿನಲ್ಲಿ ತಜ್ಞತೆ ಪಡೆಯುತ್ತಾರೆ.

೩. ಅಗ್ನಿಶಾಮಕದಳದ ಕೋರ್ಸ ( Fire fighters ) :— ಅಗ್ನಿಶಾಮಕ ದಳಕ್ಕೆ ಪ್ರವೇಶಾರ್ಹತೆ ಪಡೆಯಲು ಅಗ್ನಿಶಾಮಕ ತರಬೇತಿ ಪಡೆಯಬೇಕಾಗುತ್ತದೆ. ಇದಕ್ಕೆ ಕನಿಷ್ಟ ಶಿಕ್ಷಣಾರ್ಹತೆ ಎಸ್. ಎಸ್. ಎಲ್. ಸಿ. ಯಿದ್ದು ಆರು ತಿಂಗಳ ವ್ಯಾಸಂಗದ ಅಲ್ಪಾವಧಿಯ ಕೋರ್ಸ ಇರುತ್ತದೆ. ಈ ಕೋರ್ಸಿನಲ್ಲಿ ತಜ್ಞತೆ ಪಡೆಯಲು ಜಾತಕದಲ್ಲಿ ಈ ಮುಂದಿನ ಸಂಗತಿಗಳು ಪೋಷಕವಿರಬೇಕು.

೧) ಈ ಕೋರ್ಸಿನ ವಿದ್ಯಾರ್ಥಿಗಳ ಜಾತಕದಲ್ಲಿ ಮಂಗಳನು ಮಿಕ್ಕ ಎಲ್ಲ ಗ್ರಹಗಳಿಗಿಂತ ಬಲಾಢ್ಯನಿರಬೇಕು. ಏಕೆಂದರೆ ಈ ಕೋರ್ಸಿನ ಹಾಗು ಈ ಹುದ್ದೆಯ ಅಭ್ಯರ್ಥಿಗಳು ಧೈರ್ಯಶಾಲಿಗಳೂ, ಸಾಹಸಿಗಳೂ, ಪ್ರಸಂಗಾವಧಾನಿಗಳೂ ಇರಬೇಕಾಗುತ್ತದೆ. ಈ ಎಲ್ಲ ಗುಣಗಳು ಕುಜನ ಗುಣಧರ್ಮವಿರುತ್ತದೆ. ಕುಜನ ತರುವಾಯ ರವಿಯನ್ನೂ ಪರಿಶೀಲಿಸಬೇಕು.

ಏಕೆಂದರೆ ಈ ಕೋರ್ಸಿನ ವಿದ್ಯಾರ್ಥಿಗಳು ಸದೃಢರಿರಬೇಕಾಗುತ್ತದೆ. ರವಿ-ಕುಜರ ನಂತರ ಚಂದ್ರನನ್ನೂ ಪರಿಶೀಲಿಸಬೇಕು. ಏಕೆಂದರೆ ಅಗ್ನಿಶಾಮಕ ದಳದವರ ಮುಖ್ಯ ಕಾರ್ಯವೆಂದರೆ ಬೆಂಕಿಯನ್ನು ನಂದಿಸುವದು. ಅಗ್ನಿ ಜ್ವಾಲೆಯನ್ನು ಸಂಪೂರ್ಣವಾಗಿ ಹತೋಟಿಯಲ್ಲಿ ತರಲು ಚತುರೋಪಾಯ ಮತ್ತು ಪ್ರಸಂಗಾವಧಾನ, ಕಾಲ್ಪನಿಕಶಕ್ತಿ ಶಕ್ತಿ ಬೇಕಾಗುತ್ತವೆ. ಈ ಎಲ್ಲ ಗುಣಗಳನ್ನು ಪಡೆಯಲು ಜಾತಕದಲ್ಲಿ ಚಂದ್ರನೂ ಬಲಾಢ್ಯನಿರಬೇಕು. ಹೀಗೆ ರವಿ, ಕುಜ, ಚಂದ್ರ ಪೋಷಕರಿದ್ದ ವಿದ್ಯಾರ್ಥಿಗಳೇ ಈ ಕೋರ್ಸಿನಲ್ಲಿ ತಜ್ಞತೆ ಪಡೆಯುತ್ತಾರೆ.

೨) ಈ ಕೋರ್ಸಿನ ವಿದ್ಯಾರ್ಥಿಗಳ ಜಾತಕದಲ್ಲಿ ತನುಸ್ಥಾನ, ದಶಮ ಸ್ಥಾನ, ದಶಮಸ್ಥಾನ ಹಾಗೂ ದಶಮೇಶ, ಲಗ್ನೇಶರು ಜಾತಕದಲ್ಲಿ ಪೋಷಕರಿರಬೇಕು.

೩) ಈ ಕೋರ್ಸಿನ ವಿದ್ಯಾರ್ಥಿಗಳು ಹೆಚ್ಚಾಗಿ, ಮೇಷ, ವೃಷಭ, ಮಿಥುನ, ಕರ್ಕ, ಸಿಂಹ, ವೃಶ್ಚಿಕ, ಧನು, ಮಕರ ಈ ಲಗ್ನದವರಿರುತ್ತಾರೆ.

೪) ಈ ಕೋರ್ಸಿನ ವಿದ್ಯಾರ್ಥಿಗಳು ಮೇಷ, ಸಿಂಹ, ಮಿಥುನ, ತುಲಾ, ವೃಶ್ಚಿಕ, ಧನು, ಮಕರ, ಕುಂಭ ಈ ರಾಶಿಯವರಿರುತ್ತಾರೆ.

ಹೀಗೆ ಮೇಲ್ಕಂಡ ಐದು ಸಂಗತಿಗಳು ಪೋಷಕವಿದ್ದ ವಿದ್ಯಾರ್ಥಿಗಳು ಈ ಕೋರ್ಸಿನಲ್ಲಿ ತಜ್ಞತೆ ಪಡೆಯುತ್ತಾರೆ.

## ೧೪. ಲಲಿತಕಲಾ ಶಿಕ್ಷಣದ ಕೋರ್ಸುಗಳು

ಲಲಿತಕಲೆಗಳ ವೈಶಾಲ್ಯ ಹಾಗೂ ವೈವಿಧ್ಯತೆಯ ಕಲ್ಪನೆ ಬರ ಬೇಕಾದರೆ ಲಲಿತಕಲೆಗಳಲ್ಲಿ ೬೪ ವಿದ್ಯೆಗಳನ್ನು ಸೇರಿಸಲಾಗಿದೆ ಎಂದರೆ ಸಾಕಾಗುತ್ತದೆ. ಇಷ್ಟು ವಿಶಾಲವಾದ ವೈವಿಧ್ಯಪೂರ್ಣವಾದ ವಿಷಯದ ಬಗೆಗೆ ಪ್ರತ್ಯೇಕವಾಗಿ ಜ್ಯೋತಿಷ್ಯಶಾಸ್ತ್ರದ ಆಳತೆಗೋಲಿನಿಂದ ವಿವೇಚಿಸಿ ಪ್ರತ್ಯೇಕ ಉದ್ಗ್ರಂಥವನ್ನೇ ಬರೆಯಬಹುದು. ಆದರೆ "ಶಿಕ್ಷಣಜ್ಯೋತಿಷ್ಯ" ಈ ಗ್ರಂಥದಲ್ಲಿ ಈ ಲಲಿತಕಲೆಗಳಲ್ಲಿ ಯಾವುದಕ್ಕೆ ನಿರ್ದಿಷ್ಟಗೊಳಿಸಿದ ಪಠ್ಯಕ್ರಮ ಶಿಕ್ಷಣ ಸೌಲಭ್ಯಗಳಿವೆಯೋ ಅವುಗಳನ್ನು ಮಾತ್ರ ಇಲ್ಲಿ ವಿವೇಚಿಸಲಾಗಿದೆ.

ಲಲಿತಕಲೆಗಳಲ್ಲಿ ನಾವು ಏಳು ಕಲೆಗಳ ಬಗೆಗೆ ವಿವೇಚಿಸಿದ್ದೇವೆ. ೧) ಚಿತ್ರಕಲೆ ಹಾಗೂ ಬಣ್ಣದ ಕಲೆ, ೨) ಛಾಯಾಗ್ರಹಣ, ೩) ಸಂಗೀತ ವಾದನ (ಹಾಡುಗಾರಿಕೆ). ೪) ವಾದನ, ೫) ನೃತ್ಯಕಲೆ, ೬) ಸಾಹಿತ್ಯ, ೭) ಜ್ಯೋತಿಷ್ಯ. ಹೀಗೆ ಈ ಏಳು ಪ್ರಕಾರದ ಕಲೆಗಳಿಗೆ ಸಾಮಾನ್ಯ ಜ್ಯೋತಿಷ್ಯದ ನಿಯಮಗಳನ್ನು ಈ ಕೆಳಗಿನಂತೆ ಕೊಡಲಾಗಿದೆ.

ಸಾಮಾನ್ಯ ನಿಯಮಗಳು:— ೧) ಜ್ಯೋತಿಷ್ಯಶಾಸ್ತ್ರದ ಪ್ರಕಾರ ಈ ಮೇಲೆ ಬರೆದ ಯಾವದೇ ಲಲಿತಕಲೆಯಲ್ಲಿ ತಜ್ಞತೆ ಪಡೆಯಲು ಶುಕ್ರನು ಜಾತಕದಲ್ಲಿ ಪೋಷಕನಿರಲೇಬೇಕು. ಶುಕ್ರನು ಜಾತಕದಲ್ಲಿ ಬಲಾಢ್ಯನಿರದೆ ಯಾವ ವಿದ್ಯಾರ್ಥಿಯೂ ಯಾವದೇ ಲಲಿತಕಲೆಯ ಶಿಕ್ಷಣದಲ್ಲಿ ತಜ್ಞತೆ ಪಡೆಯಲಾರನು. ಶುಕ್ರನ ತರುವಾಯ ಚಂದ್ರನನ್ನು ಪರಿಶೀಲಿಸಬೇಕು. ಏಕೆಂದರೆ ಚಂದ್ರನು ಮನಸ್ಸಿನ ಕಾರಕನು, ಭಾವನಾಕಾರಕನು. ಯಾವದೇ ಶಿಕ್ಷಣವು ಮನಸ್ಸಿಗೆ ಬಾರದೆ, ಮನಸ್ಸು ಒಪ್ಪದೆ ಅಭಿರುಚಿ, ಆಸಕ್ತಿ ಉಂಟಾಗುವದಿಲ್ಲ. ಅದರಲ್ಲಿ ಲಲಿತಕಲೆಗಳ ಕಲಾಕಾರನ ಕಲಾಕೃತಿ ಯಲ್ಲಿ ಪ್ರತಿಭೆ, ಪಾಂಡಿತ್ಯ ಇರಲು ಕಲಾಕಾರನಿಗೆ ಆ ಕಲೆಯಲ್ಲಿ ಆಸಕ್ತಿ, ಮಗ್ನತೆ, (Mood), ತಲ್ಲೀನತೆ ಬೇಕಾಗುತ್ತದೆ. ಈ ಕಲೆಯಲ್ಲಿ ಮಗ್ನತೆ ಯಿರಲು ಜಾತಕದಲ್ಲಿ ಚಂದ್ರನು ಪೋಷಕನಿರದೆ ಸಾಧಿಸದು. ೨) ಯಾವದೇ ಲಲಿತಕಲಾ ಕೋರ್ಸಿಗೆ ಕೋರ್ಸಿನ ವಿದ್ಯಾರ್ಥಿಗಳು ಹೆಚ್ಚಾಗಿ ಮೇಷ, ವೃಷಭ, ಮಿಥುನ, ಕರ್ಕ, ಕನ್ಯಾ, ತುಲಾ, ಮಕರ, ಕುಂಭ, ಮೀನ ಈ ಲಗ್ನದವರೇ ಹೆಚ್ಚಾಗಿರುತ್ತಾರೆ. ೩) ಯಾವದೇ ಲಲಿತಕಲೆ ಯಲ್ಲಿ ತಜ್ಞನಾಗಲು ಲಗ್ನ, ದ್ವಿತೀಯ, ತೃತೀಯ, ಪಂಚಮ ಈ ಸ್ಥಾನ ಗಳು ಹಾಗೂ ಈ ಸ್ಥಾನಾಧೀಶರು ಜಾತಕದಲ್ಲಿ ಪೋಷಕರಿರಬೇಕು. ೪) ಲಲಿತಕಲಾಕಾರರು ನಿರ್ದಿಷ್ಟ ರಾಶಿಯವರೇ ಇರುವರೆಂದು ಹೇಳಲು ಬಾರದಿದ್ದರೂ ಹೆಚ್ಚಾಗಿ ವೃಷಭ, ಮಿಥುನ, ಕರ್ಕ, ಕನ್ಯಾ, ತುಲಾ, ಕುಂಭ, ಮೀನ ಈ ರಾಶಿಯವರಿರುವದು ಕಂಡುಬರುತ್ತದೆ. ಹೀಗೆ ಮೇಲ್ಕಂಡ ಐದು ಸಂಗತಿಗಳು ಪೋಷಕವಿದ್ದ ವಿದ್ಯಾರ್ಥಿಗಳು ಲಲಿತಕಲಾ ಶಿಕ್ಷಣದಲ್ಲಿ ತಜ್ಞತೆ ಪಡೆಯಬಹುದೆಂದು ಸ್ಥೂಲವಾಗಿ ಹೇಳಬಹುದು.

ಆದರೆ ಯಾವುದೊಂದು ವಿಶಿಷ್ಟ ಲಲಿತಕಲಾ ಶಿಕ್ಷಣದಲ್ಲಿ ತಜ್ಞತೆ ಪಡೆಯಲು ಮೇಲ್ಕಂಡ ಐದು ಸಂಗತಿಗಳಲ್ಲದೆ ಇನ್ನೂ ಅನೇಕ ಸಂಗತಿಗಳನ್ನು ಪರಿಶೀಲಿಸಬೇಕಾಗುತ್ತದೆ. ಅವನ್ನು ಪ್ರತ್ಯೇಕವಾಗಿ ಪರಿಶೀಲಿಸೋಣ.

೧. ಚಿತ್ರಕಲೆಯ ಕೋರ್ಸು :— ಚಿತ್ರಕಲಾ ಕೋರ್ಸಿನಲ್ಲಿ ನಾಲ್ಕು ಪ್ರಕಾರಗಳಿವೆ. ಮೊದಲನೆಯದಾಗಿ ಪ್ರಾಥಮಿಕ ಚಿತ್ರಕಲೆಯ ಕೋರ್ಸು (Elementary Drawing Course). ಎರಡನೆಯದಾಗಿ ಚಿತ್ರಕಲೆ ಹಾಗೂ ಬಣ್ಣದ ಕಲೆಯ ಮುಂದುವರಿದ ಕೋರ್ಸು (Advanced course in Drawing & Painting , ಮೂರನೆಯದಾಗಿ ಪ್ರಾಯೋಗಿಕ ಚಿತ್ರಕಲೆ ಅಥವಾ ವಾಣಿಜ್ಯದ ಚಿತ್ರಕಲೆ (Applied art or commercial art), ನಾಲ್ಕನೆಯದಾಗಿ ಚಿತ್ರಕಲಾ ಶಿಕ್ಷಕರ ತರಬೇತಿ (Drawing Teacher's course) ಹೀಗೆ ಈ ಚಿತ್ರಕಲಾ ಕೋರ್ಸಿನಲ್ಲಿ ನಾಲ್ಕು ವರ್ಗವಾಗಿ ವಿಂಗಡಿಸಬಹುದು.

ಪ್ರಾಥಮಿಕ ಚಿತ್ರಕಲಾ ಕೋರ್ಸಿನಲ್ಲಿ ವಸ್ತು ಚಿತ್ರಕಲೆ, ಪ್ರಕೃತಿಯ ಅಭ್ಯಾಸ, ಮಾದರಿಯ (Designs) ತಯಾರಿಕೆ ಮೊದಲಾದ ವಿಷಯಗಳನ್ನು ಅಭ್ಯಸಿಸಿದರೆ ಸರಕಾರೀ ಪ್ರಾಥಮಿಕ ಹಾಗೂ ಮಾಧ್ಯಮಿಕ ಪರೀಕ್ಷೆಗಳಿಗೆ ಪ್ರವೇಶ ದೊರೆಯುತ್ತದೆ. ಈ ಪರೀಕ್ಷೆಗಳಲ್ಲಿ ಉತ್ತೀರ್ಣರಾದರೆ ಚಿತ್ರಕಲೆ ಹಾಗೂ ಬಣ್ಣಕಲೆಯ ಮುಂದಿನ ಕೋರ್ಸಿಗೆ ಅರ್ಹತೆ ದೊರೆಯುತ್ತದೆ. ಚಿತ್ರಕಲೆ ಹಾಗೂ ಬಣ್ಣ ಕಲೆಯ ಮುಂದುವರಿದ ಕೋರ್ಸಿನಲ್ಲಿ ಇದ್ದಲಿಯಲ್ಲಿ ಚಿತ್ರರಚನೆ, ಪೆನ್ಸಿಲ್-ಪಿಡುಗಳಲ್ಲಿ ಚಿತ್ರರಚನೆ, ಮಾನವನ ಅಂಗಾಂಗಗಳನ್ನು ಪ್ಲಾಸ್ಟರ್ ಆಫ್ ಪಾರಿಸ್‌ನಿಂದ ತಯಾರಿಸುವದು, ಸ್ಥಗಿತ ಜೀವಂತ ಚಿತ್ರರಚನೆ, ಸೀರ್ಬಣ್ಣಗಳಿಂದ ಚಿತ್ರರಚನೆ, ಪಕ್ಷಿಗಳ ಹಾಗೂ ಪ್ರಾಣಿಗಳ ಚಿತ್ರೀಕರಣ, ರೇಖಾಶಾಸ್ತ್ರ ಮೊದಲಾದ ವಿಷಯಗಳನ್ನು ಅಭ್ಯಸಿಸಬೇಕಾಗುತ್ತದೆ. ಈ ಕೋರ್ಸು ನಾಲ್ಕು ವರ್ಷದ್ದಿದ್ದು ಇದಾದ ನಂತರ ಒಂದು ವರ್ಷದ ಅಭ್ಯಾಸ ಮಾಡಿದರೆ ಈ ವಿಷಯದಲ್ಲಿಯೇ ಡಿಪ್ಲೊಮಾ ದೊರೆಯುತ್ತದೆ.

ವಾಣಿಜ್ಯದ ಚಿತ್ರಕಲೆ (Applied art) ಅಥವಾ ಪ್ರಾಯೋಗಿಕ ಚಿತ್ರಕಲೆಯ ಡಿಪ್ಲೊಮಾ ಕೋರ್ಸು ಐದು ವರ್ಷಗಳ ಅಭ್ಯಾಸ ಮಾಡಬೇಕಾಗುತ್ತದೆ. ಈ ಕೋರ್ಸಿನಲ್ಲಿ ಟ್ರೇಡ್‌ಮಾರ್ಕ್, ಲೆಟರ್‌ಹೆಡ್ಸ್, ಫೋಲ್ಡರ್ ಡಿಸೈನ್, ಪುಸ್ತಕಗಳ ಮುಖಚಿತ್ರ, ಪೋಸ್ಟರ್ ಡಿಸೈನ್, ವಸ್ತು ಸಂಗ್ರಹಾಲಯದ ಅಭ್ಯಾಸ, ಚಿತ್ರಗಳ ಸ್ಲೈಡ್ಸ್, ಛಾಯಾಗ್ರಹಣ, ಬ್ಲಾಕ್ ತಯಾರಿಕೆಯ ರೀತಿ ಮೊದಲಾದ ವಿಷಯಗಳನ್ನು ಈ ಕೋರ್ಸಿನಲ್ಲಿ ಅಭ್ಯಾಸ ಮಾಡಬೇಕಾಗುತ್ತದೆ.

ಚಿತ್ರಕಲೆಯ ಶಿಕ್ಷಕರ ತರಬೇತಿಯ ಕೋರ್ಸಾದ (ಡಿ. ಟಿ. ಸಿ.) ಈ ಕೋರ್ಸಿನ ಉದ್ದೇಶವು ಶಿಕ್ಷಣಕ್ಷೇತ್ರದಲ್ಲಿ ಚಿತ್ರಕಲೆಯ ಪ್ರಯೋಗ ಹಾಗೂ ಮಹತ್ವಗಳನ್ನು ಪ್ರತಿಬಿಂಬಿಸಿ ಉಪಯೋಗಿಸುವದಕ್ಕಾಗಿದೆ. ಈ ಕೋರ್ಸಿನಲ್ಲಿ ಉತ್ತೀರ್ಣರಾದವರಿಗೆ ಚಿತ್ರಕಲಾ ಶಿಕ್ಷಕರೆಂದು ನೌಕರಿ ದೊರೆಯುತ್ತದೆ. ಈ ಕೋರ್ಸಿನಲ್ಲಿ ಬ್ಲ್ಯಾಕ್‌ಬೋರ್ಡಿನ ಮೇಲೆ ಚಿತ್ರಕಲೆಯ ಮತ್ತು ಅಕ್ಷರಗಳ ಬರವಣಿಗೆಯ ರೀತಿ, ರೇಖಾಗಣಿತಶಾಸ್ತ್ರ; ಪ್ರಕೃತಿಯ ಚಿತ್ರಕಲೆ, ಜೇಡಿಮಣ್ಣಿನಲ್ಲಿ ಮಾದರಿಯ (Clay modelling) ತಯಾರಿಕೆ, ಕಾಲ್ಪನಿಕ ಚಿತ್ರೀಕರಣ, ಮಾದರಿಯ ರಚನೆ, ಮಕ್ಕಳ ಮನಶ್ಶಾಸ್ತ್ರ, ಮಕ್ಕಳ ಚಿತ್ರ ಮೊದಲಾದ ವಿಷಯಗಳನ್ನು ಈ ಕೋರ್ಸಿನಲ್ಲಿ ಕಲಿಸಲಾಗುತ್ತದೆ. ಎಸ್. ಎಸ್. ಎಲ್. ಸಿ. ಯಲ್ಲಿ ಉತ್ತೀರ್ಣರಾದವರಿಗೆ ಈ ಕೋರ್ಸಿನಲ್ಲಿ ಪ್ರವೇಶಾರ್ಹತೆ ದೊರೆಯುತ್ತದೆ. ಚಿತ್ರಕಲಾ ಶಿಕ್ಷಕರು ಅರ್ಥಾತ್ ಡಿ. ಟಿ. ಸಿ. ಕೋರ್ಸು ಆದವರು ನಾಲ್ಕು ವರ್ಷಗಳ ಅವಧಿಯ ಡ್ರಾಯಿಂಗ್ ಮಾಸ್ಟರ್ ಪರೀಕ್ಷೆಗೆ (ಡಿ. ಎಮ್.) ಕೂಡ್ರಲು ಅರ್ಹರಾಗುತ್ತಾರೆ. ಅಂತೆಯೇ ಎ. ಎಮ್. ಪರೀಕ್ಷೆಗೂ (Art Master) ಕೂಡಬೇಕಾದರೆ ಸರಕಾರೀ ಡ್ರಾಯಿಂಗ ಮಾಸ್ಟರ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು ಅಥವಾ ಡಿ. ಟಿ. ಸಿ. ಕೋರ್ಸು ತೆಗೆದುಕೊಂಡು ಮುಂದುವರಿದ ಚಿತ್ರ ಹಾಗೂ ವರ್ಣಕಲೆಯ ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ಒಂದು ವರ್ಷದ ಅನುಭವವಾಗಿರಬೇಕು. ಇಷ್ಟೊಂದು ಸುದೀರ್ಘವಾದ ಈ ಕೋರ್ಸಿನ ಹಿನ್ನೆಲೆಯಲ್ಲಿ ಈ ಕೋರ್ಸಿನ ವಿಷಯವಾಗಿ ಜ್ಯೋತಿಷ್ಯದ

ವಿಚಾರವೇನು ಈ ಕೋರ್ಸಿನ ಶಿಕ್ಷಣ ಪಡೆಯಲು ಜಾತಕದಲ್ಲಿಯ ಯಾವ ಗ್ರಹ, ಲಗ್ನ, ಸ್ಥಾನಾದಿಗಳು ಕಾರಕವಾಗಿ ಪ್ರಭಾವ ಬೀರಬಲ್ಲವು ಎಂಬುದನ್ನು ಪರಿಶೀಲಿಸುವಾ.

ಕಾರಕಗ್ರಹ:— ಈಗಾಗಲೇ ಹೇಳಿದಂತೆ ಯಾವುದೇ ಲಲಿತಕಲೆಯ ಶಿಕ್ಷಣಕ್ಕೆ ಶುಕ್ರನು ಕಾರಕನಿದ್ದೇ ಇರುತ್ತಾನೆ. ಇದರಂತೆ ಈ ಕೋರ್ಸಿಗೂ ಶುಕ್ರನು ಜಾತಕದಲ್ಲಿ ಪೋಷಕನಿರಲೇಬೇಕು. ಶುಕ್ರನ ತರುವಾಯ ಚಂದ್ರ, ರಾಹು, ಬುಧ, ಗುರುಗಳನ್ನೂ ಪರಿಶೀಲಿಸಬೇಕಾಗುತ್ತದೆ. ಏಕೆಂದರೆ ಈ ಕೋರ್ಸಿನ ಬಣ್ಣದ ಕಲೆಯೂ ಮಹತ್ವದ್ದಿರುವದರಿಂದ ಆಯಾ ಸನ್ನಿವೇಶಗಳಿಗೆ ಹಾಗೂ ಆಯಾ ರಸಗಳಿಗೆ ಆಯಾ ಬಣ್ಣಗಳನ್ನು ಹಚ್ಚುವದು ಒಂದು ಕಲೆಯೇ ಇರುತ್ತದೆ. ಉದಾಹರಣೆಗೆ ಶೃಂಗಾರರಸ ಪ್ರಧಾನ ಚಿತ್ರಗಳಿಗೆ ಡಾರ್ಕ್-ಬ್ರೌನ್ ಬಣ್ಣಗಳೂ, ವೀರರಸಕ್ಕೆ ಬಂಗಾರದ (Golden), ಕರುಣಾರಸಕ್ಕೆ ಪಾರಿವಾಳದ, ರುದ್ರರಸಕ್ಕೆ ಕೆಂಪು, ಹಾಸ್ಯಕ್ಕೆ ಬಿಳಿ, ಭಯಾನಕಕ್ಕೆ ಕರಿಯ, ಭೀಭತ್ಸಕ್ಕೆ ನೀಲಿ, ಅದ್ಭುತಕ್ಕೆ ಹಳದಿ, ಶಾಂತಕ್ಕೆ ಬಿಳಿಮಿಶ್ರಿತ ಹಳದಿ (ಹಸಿರು) ಹೀಗೆ ಆಯಾ ರಸಗಳಿಗನುಗುಣವಾದ ಚಿತ್ರಗಳಿಗೆ ಆಯಾ ಬಣ್ಣಗಳನ್ನು ಲೇಪಿಸುವದು ಒಂದು ಸೂಕ್ಷ್ಮ ಕಲೆಯಿರುತ್ತದೆ. ಈ ಕಲೆ ಕರಗತವಾಗಲು ಜಾತಕದಲ್ಲಿ ಶುಕ್ರನೊಂದಿಗೆ ಚಂದ್ರ-ರಾಹು ಗ್ರಹಗಳೂ ಪೋಷಕವಿರಬೇಕು. ಅದರಲ್ಲಿಯೂ ರಾಹು ಗ್ರಹವು ಬಣ್ಣದ ಕೆಲಸಕ್ಕೆ ಹೆಚ್ಚು ಪೂರಕನು. ಇದರಂತೆಯೇ ಚಿತ್ರಕಲೆಯ ಶಿಕ್ಷಕ ಕೋರ್ಸಿಗೆ ಶಿಕ್ಷಕವೃತ್ತಿಯ ಕಾರಕಗ್ರಹವಾದ ಗುರುವನ್ನೂ ಪರಿಶೀಲಿಸಬೇಕು. ಇನ್ನು ಪ್ರಾಯೋಗಿಕ ಚಿತ್ರಕಲೆ ಅಥವಾ ವಾಣಿಜ್ಯ ಚಿತ್ರಕಲೆಗೆ ವಾಣಿಜ್ಯಕಾರಕಗ್ರಹವಾದ ಬುಧನನ್ನೂ ಪರಿಶೀಲಿಸಬೇಕು. ಅದರ ಒಂದು ಸಂಗತಿ ನಿಜ, ಈ ಕೋರ್ಸಿಗೆ ಶುಕ್ರ ಚಂದ್ರ, ರಾಹು ಈ ಗ್ರಹಗಳು ರಾಶಿಬಲದವರೂ, ಸ್ಥಾನಬಲದವರೂ, ಯೋಗಕಾರಕರೂ ಇದ್ದರೆ ಬುಧ-ಗುರುಗಳು ಕೇವಲ ರಾಶಿಬಲದವರಿರುತ್ತಾರೆ.

ಸ್ಥಾನ:— ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ಚಿತ್ರಕಲಾ ಕೋರ್ಸಿನ ಸ್ಥಾನಗಳೆಂದರೆ ತೃತೀಯ, ಪಂಚಮ, ಲಗ್ನ ಈ ಸ್ಥಾನಗಳು

ಕಾರಕವಿರುತ್ತವೆ. ಏಕೆಂದರೆ ಚಿತ್ರಕಾರನ ಮನಸ್ಸು ಚಿತ್ರದಲ್ಲಿ ಮಗ್ನ ವಾಗಲು ಅಥವಾ ಚಿತ್ರಕಲೆಯಲ್ಲಿ ಅಭಿರುಚಿ, ಆಸಕ್ತಿಯುಂಟಾಗಲು ಜಾತಕ ದಲ್ಲಿ ಲಗ್ನ, ಲಗ್ನೇಶರು ಬಲಾಢ್ಯರಿರಬೇಕು. ಇದರಂತೆ ದುಂಡಾದ ಅಕ್ಷರ, ಉತ್ತಮ ಚಿತ್ರಕಲೆ ಹಾಗೂ ಬಣ್ಣದ ಕೆಲಸಗಳಿಗಾಗಿ ಜಾತಕದಲ್ಲಿ ತೃತೀಯ ಸ್ಥಾನ ಹಾಗೂ ತೃತೀಯೇಶನ ಬಲಾಬಲವನ್ನು ಪರಿಶೀಲಿಸಬೇಕು. ಇನ್ನು ಚಿತ್ರಕಲೆಯಲ್ಲಿ ಗಾಢವಾದ ಜ್ಞಾನವನ್ನು ಪಡೆಯಲು ತೃತೀಯದೊಂದಿಗೆ ಪಂಚಮಸ್ಥಾನವನ್ನೂ ಪರಿಶೀಲಿಸಬೇಕು. ವಾಣಿಜ್ಯ ಚಿತ್ರಕಲೆ ಹಾಗೂ ಶಿಕ್ಷಕವೃತ್ತಿಯ ಕಲೆಗೆ ತೃತೀಯಸ್ಥಾನದೊಂದಿಗೆ ಪಂಚಮ, ದ್ವಿತೀಯ ಸ್ಥಾನ ಗಳನ್ನೂ ಪರಿಶೀಲಿಸಬೇಕು. ಹೀಗೆ ತೃತೀಯ, ಲಗ್ನ, ಪಂಚಮ, ದ್ವಿತೀಯ ಈ ಸ್ಥಾನಗಳೂ, ಸ್ಥಾನಾಧೀಶರೂ ಕ್ರಮವಾಗಿ ಕಾರಕಸ್ಥಾನಗಳಿರುತ್ತವೆ.

ಲಗ್ನ:— ಲಗ್ನದ ದೃಷ್ಟಿದಿಂದ ಪರಿಶೀಲಿಸಿದರೆ ಮೇಷ, ವೃಷಭ, ಮಿಥುನ, ಕರ್ಕ, ತುಲಾ, ಮಕರ, ಕುಂಭ ಈ ಲಗ್ನದವರೇ ಈ ಕೋರ್ಸಿನಲ್ಲಿ ತಜ್ಞತೆ ಪಡೆಯುವದು ಕಂಡುಬರುತ್ತದೆ.

ರಾಶಿ: ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ಕೇವಲ ಚಿತ್ರ ಕಲೆಗೆ ವೃಷಭ, ಮಿಥುನ, ಕರ್ಕ, ಕನ್ಯಾ, ತುಲಾ, ಕುಂಭ, ಮೀನ ಈ ರಾಶಿಯವರು ಪ್ರವೀಣರಿರುವದು ಕಂಡುಬರುತ್ತದೆ. ಆದರೆ ವಾಣಿಜ್ಯ ಚಿತ್ರಕಲೆಯ ಕೋರ್ಸಿಗೆ ವೃಷಭ, ಮಿಥುನ, ಕನ್ಯಾ, ತುಲಾ, ಧನು, ಕುಂಭ ಈ ರಾಶಿಯವರೂ, ಚಿತ್ರಕಲಾ ಶಿಕ್ಷಕ ಕೋರ್ಸಿಗೆ ಕರ್ಕ, ಮೀನ, ಧನು, ಮಿಥುನ, ತುಲಾ, ಕುಂಭ ರಾಶಿಯವರೂ ಇದ್ದುದು ಕಂಡುಬರುತ್ತದೆ.

೨. ಸಂಗೀತ ಶಿಕ್ಷಣ :— ಸಂಗೀತದೊಡನೆ ಜ್ಯೋತಿಶ್ಶಾಸ್ತ್ರದ ಸಂಬಂಧವು ವಿಶಿಷ್ಟವಾಗಿರುತ್ತದೆ. ಹಾಗೆಯೇ ವಾದ್ಯಗಳೊಡನೆ ಕೂಡ ಇದರೊಡನೆ ಇರುತ್ತದೆ. ಪ್ರತಿಯೊಂದು ಸೆಕೆಂಡಿಗೆ ೧,೬೦೦ ವಾಯು ಗತಿಯು ನಿಶ್ಚಿತ ಪ್ರಮಾಣದಲ್ಲಿ ಕೂಡಿದ್ದಾದರೆ ಅದು ಸಂಗೀತವಾಗಿ ರೂಪಾಂತರವಾಗುತ್ತದೆ.

ವೈದಿಕ ವಾಙ್ಮಯದಲ್ಲಿ ಜ್ಯೋತಿಶ್ಶಾಸ್ತ್ರವು ಉಪವೇದಗಳಲ್ಲಿ ಒಂದಾ ಗಿದೆ. ವೇದಾಂಗಗಳಲ್ಲಿಯೂ ಇದು ಸಮಾವಿಷ್ಟವಾಗಿದೆ. ಹಾಗೆಯೇ

ಸಾಮವೇದದಲ್ಲಿ ಸಂಗೀತಶಾಸ್ತ್ರವನ್ನು ವಿವರ ವಿವರವಾಗಿ ಉಲ್ಲೇಖಿಸ ಲಾಗಿದೆ. ಎಂದರೆ ಈ ಎರಡೂ ಶಾಸ್ತ್ರಗಳು ವೇದೋಕ್ತವಾಗಿವೆ. ಮನುಷ್ಯನ ಮೇಲೆ ಗ್ರಹಗತಿಯ ಪರಿಣಾಮವಾಗುವ ಹಾಗೆ ಸಂಗೀತದ ಪರಿಣಾಮವೂ ಆಗುತ್ತದೆ. ದಶರಥ ಮಹಾರಾಜರು ಪುತ್ರಕಾಮೇಷ್ಟಿಯಾಗ ಮಾಡುವ ದಕ್ಕೆ ಶೃಂಗೀ ಮುನಿಗಳನ್ನು ಕರೆಯಿಸಿಕೊಂಡಿದ್ದರು. ಮತ್ತು ಯಜ್ಞದ ಪೂರ್ತಿ ಗೋಸ್ಕರ ಸಂಗೀತದ ಆಶ್ರಯವನ್ನು ಪಡೆದಿದ್ದರು. ತಾನಸೇನನು ದೀಪಕರಾಗವನ್ನು ಹಾಡಿ ಬಾದಶಹನ ಮಗಳ ಪ್ರೇಮವನ್ನು ಗಳಿಸಿಕೊಂಡ ನಲ್ಲದೆ ಸಂಗೀತಬಲದಿಂದಲೇ ಗಜದ ಮದವನ್ನಿಳಿಸಿ ವಶಪಡಿಸಿಕೊಂಡನು. ತಾನಸೇನ ಹಾಡತೊಡಗಿದರೆ ಕೊರಡು ಕೊನರುತ್ತಿತ್ತೆಂಬ ಆಖ್ಯಾಯಿಕೆ ಇದೆ. ವಿಕ್ರಮರಾಜನು ದೀಪಕರಾಗವನ್ನು ಹಾಡಿ ಚಂದ್ರಸೇನೆಯ ಪ್ರೀತಿಗೆ ಪಾತ್ರನಾದುದಲ್ಲದೆ, ರಾಜನು ವಿಧಿಸಿದ್ದ ಮರಣದಂಡನೆಯಿಂದ ಮುಕ್ತ ನಾದನು. ಹೀಗೆ ಪೌರಾಣಿಕ, ಐತಿಹಾಸಿಕ ಉದಾಹರಣೆಗಳು ಅನೇಕವಾಗಿವೆ. ಒಳ್ಳೆಯ ಹಾಡುಗಾರರೊಬ್ಬರು ಸುಮಧುರವಾಗಿ ಹಾಡತೊಡಗಿದರೆಂದರೆ ಕೇಳುತ್ತ ಕೇಳುತ್ತ ನಾವು ಅದರಲ್ಲಿ ತಲ್ಲೀನರಾಗಿ ನಮ್ಮನ್ನು ನಾವೇ ಮರೆತು ಬಿಡುತ್ತೇವೆ. ನಾವು ಸಂಗೀತಕಲಾವಿದರಿಲ್ಲದಿದ್ದರೂ ಕೂಡ ನಮಗೆ ಗೊತ್ತಿಲ್ಲ ದಂತೆಯೇ ನಮ್ಮ ಕೈಗಳು ಸಂಗೀತದ ಗತ್ತನ್ನನುಸರಿಸಿ ತಾಳಹಾಕಲು ತೊಡ ಗುತ್ತವೆ ಹಾಗೂ ತೊಡೆಗಳನ್ನು ಬಾರಿಸಹತ್ತುತ್ತವೆ. ಮಗುವನ್ನು ಮಲ ಗಿಸುವದಕ್ಕೆ ಹೆಣ್ಣುಮಕ್ಕಳು ಹಾಡುವದರ ಗುಟ್ಟಾದರೂ ಇದೇ. ಸಂಗೀತ ದಲ್ಲಿ ಮಗುವಿನ ಮನಸ್ಸು ತಲ್ಲೀನವಾಗಿ ಅದು ನಿದ್ದೆಹೋಗುವದು.

ಸಂಗೀತದ ಸಂಬಂಧವು ಆತ್ಮದೊಂದಿಗೆ ಇರುತ್ತದೆ. ಸಂಗೀತವನ್ನು ಆತ್ಮಬ್ರಹ್ಮ ಎಂದು ಕರೆಯುತ್ತಾರೆ. ಸಂಗೀತದ ತರಂಗಗಳು ಆಕಾಶದಲ್ಲಿ ಹರಡಿರುತ್ತವೆ. ಹಿಂದಿನ ಕಾಲದಲ್ಲಿ ಮೇಘರಾಗವನ್ನು ಹಾಡಿ ಮಳೆಯನ್ನು ತರಿಸುತ್ತಿದ್ದರೆಂದು ಹೇಳಲಾಗುತ್ತದೆ. ಈಗಿನವರು ಈ ಮಾತನ್ನು ಪವಾಡ ಕಥೆಯೆಂದು ತಿಳಿಯುವರು. ಆದರೆ ಸಂಗೀತದಿಂದ ಮನುಷ್ಯನ ಮನ ಸ್ಸನ್ನು— ಅದೇಕೆ ಪಶುಪಕ್ಷಿಗಳ ಮನಸ್ಸನ್ನೂ ಪ್ರಸನ್ನಗೊಳಿಸಬಹುದು. "ಶಿಶುರ್ವೇತ್ತಿ ಪಶುರ್ವೇತ್ತಿ ವೇತ್ತಿ ವಾ ನರಸಂಘಃ" ಎಂಬುದನ್ನು ಯಾರೂ

ಅಲ್ಲಗಳೆಯಲಾರರು. ಅಂತೆಯೇ ಹಿಂದಿನ ಕಾಲದಲ್ಲಿ ದರ್ಬಾರಗಳಲ್ಲಿ ಸಂಗೀತ ಕಾರ್ಯಕ್ರಮಗಳನ್ನು ಏರ್ಪಡಿಸಲಾಗುತ್ತಿತ್ತು. ಅಲ್ಲದೆ ಈಗಲೂ ಕೂಡ ಸಭೆ, ಸಮ್ಮೇಲನಗಳ ಪ್ರಾರಂಭ-ಸಮಾಪ್ತಿಗಳನ್ನು ಸಂಗೀತದಿಂದಲೇ ಮಾಡುವ ಪರಿಪಾಠವಿದೆ. ಸಂಗೀತ ಶಾಸ್ತ್ರವು ಇಷ್ಟೊಂದು ಮಹತ್ವ ಹಾಗೂ ಸಾಮರ್ಥ್ಯವುಳ್ಳದ್ದು ಇರುತ್ತದೆ.

ಲಲಿತಕಲೆಗಳಲ್ಲಿ ಒಂದಾದ ಸಂಗೀತ ಶಾಸ್ತ್ರವು ಮನರಂಜಕವೂ, ಮನೋವಿಕಾಸಿಯೂ, ಆನಂದದಾಯಕವೂ ಇರುವದಲ್ಲದೆ ಈ ಶಾಸ್ತ್ರದಲ್ಲಿ ಪ್ರವೀಣತೆ ಪಡೆಯಲು ಜನ್ಮಾದ್ಯಂತ ಅಭ್ಯಾಸ ಮಾಡಬೇಕಾಗುತ್ತದೆ. ನಿಜವಾಗಿ ನೋಡಿದರೆ ಯಾವುದೇ ಕಲಾಸಾಧನೆ ಹೀಗೆಯೇ ಇರುತ್ತದೆ. ಇನ್ನು ಈ ಕೋರ್ಸಿನ ಶಿಕ್ಷಣ ಪಡೆಯಲು ಅನೇಕ ಖಾಸಗೀ ಸಂಸ್ಥೆಗಳಿವೆ. ಈ ಹಿಂದೆ ಅನೇಕ ಘರಾಣೆಗಳ ಮೂಲಕವೆಂದರೆ ಉದಾಹರಣೆಗೆ: ಕಿರಾಣ, ಗ್ವಾಲ್ಹೇರ್, ಜಯಪೂರ ಮೊದಲಾದ ವಂಶಪಾರಂಪರ್ಯವಾಗಿ ಬಂದ ಈ ಶಿಕ್ಷಣವು ಇಂದು ಅನೇಕ ಖಾಸಗೀ ಸಂಸ್ಥೆಗಳು ಒಂದು ಸಮಿತಿಯನ್ನು ರಚಿಸಿಕೊಂಡು ಪರೀಕ್ಷೆಗಳನ್ನು ನಡೆಸುತ್ತಾರೆ. ಈ ಸಂಸ್ಥೆಗಳಲ್ಲಿ ಹಿಂದುಸ್ತಾನಿ ಹಾಗೂ ಕರ್ನಾಟಕಿ ಸಂಗೀತ ಪದ್ಧತಿಗಳಲ್ಲಿ ಸಂಗೀತ ಪ್ರಥಮ, ಸಂಗೀತ ದ್ವಿತೀಯ, ಸಂಗೀತ ಮಾಧ್ಯಮ, ಸಂಗೀತ ವಿಶಾರದ, ಸಂಗೀತ ಶಿಕ್ಷಕ ಮೊದಲಾದ ಪರೀಕ್ಷೆಗಳು ನಡೆಯುತ್ತವೆ. ರಾಗಜ್ಞಾನ, ತಾಳಜ್ಞಾನಗಳನ್ನು ಶಾಸ್ತ್ರಬದ್ಧವಾಗಿ ಪ್ರಯೋಗಸಿದ್ಧವಾಗುವಂತೆ ಈ ಕೋರ್ಸುಗಳಲ್ಲಿ ಕಲಿಸಲಾಗುತ್ತದೆ.

ವಿಶ್ವವಿದ್ಯಾಲಯಗಳಲ್ಲಿಯೂ ಕೂಡ ಸಂಗೀತವನ್ನು ಮುಖ್ಯ ವಿಷಯವಾಗಿ ತೆಗೆದುಕೊಂಡು ಪದವೀ ಪಡೆಯುವ ಅವಕಾಶಗಳಿವೆ. ಇದರಂತೆ ಮಾಧ್ಯಮಿಕ ಶಿಕ್ಷಣದ ಕೋರ್ಸುಗಳಲ್ಲಿ ಅಂದರೆ ಎಸ್. ಎಸ್. ಎಲ್. ಸಿ. ಯಲ್ಲಿಯೂ ಕೂಡ ಸಂಗೀತವನ್ನು ಐಚ್ಛಿಕ ವಿಷಯವನ್ನಾಗಿ ತೆಗೆದುಕೊಳ್ಳಲು ಅವಕಾಶವಿದೆ. ಇದರಂತೆ ಪಿ. ಯು. ಸಿ. ಯಿಂದ ಡಿಗ್ರಿ ಪದವಿಯ ಪರೀಕ್ಷೆಯ ವರೆಗೆ ಸಂಗೀತವನ್ನು ಮುಖ್ಯ ವಿಷಯವನ್ನಾಗಿ ಕಲಿಸಲಾಗುತ್ತದೆ. ಈ ಕೋರ್ಸುಗಳಲ್ಲಿ ಪಿ. ಯು. ಸಿ. ಮಟ್ಟದಲ್ಲಿ ಸಾಮಾನ್ಯವಾಗಿ ಕಲೆಯ

ಮೂಲ, ಕಲೆ ಹಾಗೂ ಪ್ರಕೃತಿ, ಸಂಗೀತಕಲೆ ಕಲೆಯೋ-ವಿಜ್ಞಾನವೋ ಎಂಬುದರ ಕಲ್ಪನೆ, ಕಲಾಕಾರನ ಕಿವಿ, ಕಣ್ಣು; ತಾಳದ ಮಹತ್ವ, ಸ್ವರಗಳ ಆರೋಹ, ಅವರೋಹ, ರಾಗಗಳಲ್ಲಿ ಯಮನ ಕಲ್ಯಾಣ, ಖಾಮಾಜ, ಖಫೀ, ಭೈರವಿ, ಜೀವನಪುರಿಯಾ ಮತ್ತು ಬಿಲಾವಲ್, ಭಜನೆಗಳು, ದಾಸರಪದಗಳನ್ನು ಕಲಿಯಬೇಕಾಗುತ್ತದೆ. ಇದಲ್ಲದೆ ದಿಲ್‌ರುಬಾ, ಸಿತಾರ್, ತಬಲಾ ಈ ವಾದ್ಯಗಳನ್ನೂ ಕಲಿಯಬೇಕಾಗುತ್ತದೆ.

ಬಿ. ಎ. ಪದವೀ ಮಟ್ಟಕ್ಕೆ ಸಂಗೀತಾಭ್ಯಾಸ ಮಾಡಬೇಕಾದವರು ಕಲೆಯ ಮೂಲಕ ಜೀವನದಲ್ಲಿ ಆನಂದ, ಕಲಾಪ್ರಶಂಸೆ, ಗ್ರಾಮೀಣ ಹಾಡುಗಳಿಂದ ಸಂಗೀತದ ಉಗಮ, ಸಂಗೀತರಚನೆಗಳು, ಸಂಗೀತ, ನಾದ, ಶೃತಿ, ಸ್ವರ, ಸ್ಥಾನ, ವರ್ಣ ಮೊದಲಾದವುಗಳ ಅರ್ಥವಿವರಣೆ, ವಾದ್ಯಸಂಗೀತ ಆರಿಸಿಕೊಂಡವರು ದಿಲ್‌ರುಬಾದ ತತ್ತ್ವ ಹಾಗೂ ಸಿತಾರ್, ತಬಲಾಗಳ ಅಭ್ಯಾಸ ಮಾಡಬೇಕಾಗುತ್ತದೆ.

ಬಿ. ಎ. ೨ರ ಕೋರ್ಸಿನಲ್ಲಿ ಹಾಡುಗಾರಿಕೆಯನ್ನು ಆರಿಸಿಕೊಂಡವರು : ರಾಗಮಾಲಿಕೆ, ರಾಗವಿಧಾನ, ಒಟೇಲು ಅಥವಾ ದಿಲ್‌ರುಬಾಗಳ ಸ್ವರಗಳ ವಾದನ ಇವುಗಳ ಪ್ರಾಯೋಗಿಕ ಶಿಕ್ಷಣ ಸಿತಾರದಲ್ಲಿ ಬಡಸಿತಾರ್, ಜೋಡ-ಕ-ತಾರ್, ಮಸೀತಾಖಾನಿ, ಗತ್ ಮತ್ತು ತೋಡಗಳ ಅಭ್ಯಾಸ, ತಬಲಾದ ಬಗ್ಗೆ ಖಂಡ, ಜಾತಿ, ಮಿಶ್ರಜಾತಿ, ತಿಶ್ರಜಾತಿ, ಚತುಶ್ರಜಾತಿ, ಸಂಕೀರ್ಣ ಜಾತಿ, ತೀನತಾಳ, ದಾದ್ರಾ, ರೂಪಕ, ಝಪ್‌ತಾಳ ಮೊದಲಾದ ತಾಳಗಳ ಅಭ್ಯಾಸ ಮಾಡಬೇಕಾಗುತ್ತದೆ.

ಬಿ. ಎ. ೩ ರ ಕೋರ್ಸಿಗೆ ರಾಗ ಹಾಗೂ ರಾಗಿಣಿಗಳ ವಿಭಜನೆ, ರಾಗಾಂಗ, ಉಪಾಂಗ, ಭಾಷಾಂಗ ಹಾಗೂ ಕ್ರಿಯಾಂಗ, ಸಂಗೀತಕಾರನ ಗುಣದೋಷಗಳು, ಸಂಗೀತದ ಚರಿತ್ರೆ ಈ ಮೊದಲಾದ ವಿಷಯಗಳನ್ನು ಅಭ್ಯಸಿಸಬೇಕಾಗುತ್ತದೆ. ಇಷ್ಟೊಂದು ಹಿನ್ನೆಲೆಯ ಈ ಕೋರ್ಸಿನ ವಿಷಯವಾಗಿ ಹೇಳಿದ ಮೇಲೆ ಜ್ಯೋತಿಷ್ಯದ ವಿಚಾರವೇನು, ಈ ಶಿಕ್ಷಣದಲ್ಲಿ ತಜ್ಞತೆ ಪಡೆಯಲು ಜಾತಕವೆಂತಿರಬೇಕು ಎಂಬುದನ್ನು ಪರಿಶೀಲಿಸುವಾ.

**ಕಾರಕಗ್ರಹ:—** ಜ್ಯೋತಿಷ್ಯಶಾಸ್ತ್ರದ ಪ್ರಕಾರ ಸಂಗೀತ ಶಿಕ್ಷಣಕ್ಕೆ ಕಾರಕಗ್ರಹವೆಂದರೆ ಶುಕ್ರನು. ಏಕೆಂದರೆ ಸಂಗೀತವು ಒಂದು ಕಲೆಯಿರುತ್ತದೆ. ಆದುದರಿಂದ ಕಲೆಯ ಕಾರಕಗ್ರಹವಾದ ಶುಕ್ರನು ಪೋಷಕನಿರದೆ ಸಂಗೀತದ ವ್ಯಾಸಂಗದಲ್ಲಿ ತಜ್ಞತೆ ಲಭಿಸದು. ಶುಕ್ರಗ್ರಹದ ನಂತರ ಚಂದ್ರನನ್ನು ಪರಿಶೀಲಿಸಬೇಕು. ಏಕೆಂದರೆ ಚಂದ್ರನು ಮನಸ್ಸಿನ ಕಾರಕನು. ಮನಸ್ಸಿಗೆ ಒಪ್ಪದೆ ಯಾರಿಗೂ ಯಾವ ವಿಷಯದಲ್ಲಿಯೂ ಲವಲವಿಕೆ, ಆಸಕ್ತಿ, ಮಗ್ನತೆ, ತಲ್ಲೀನತೆ ಬರಲಾರದು. ಅದರಲ್ಲಿಯೂ ಸಂಗೀತ ಕಲಿಯಬೇಕೆಂಬ ಇಚ್ಛೆ ಹಾಗೂ ಮನಸ್ಸು ಉಂಟಾಗಲು ಚಂದ್ರನು ಜಾತಕದಲ್ಲಿ ಪೋಷಕನಿರಬೇಕು. ಶುಕ್ರ-ಚಂದ್ರರ ತರುವಾಯ ಬುಧನನ್ನು ಪರಿಶೀಲಿಸಬೇಕು. ಏಕೆಂದರೆ ಬುಧನು ವಾಣಿಕಾರಕನು. ಮಾತಿನಲ್ಲಿ ಸ್ಪಷ್ಟತೆ ಹಾಗೂ ಸ್ವರಗಳ ಉಚ್ಚಾರದಲ್ಲಿ ಅಸ್ಖಲತೆ ಇರಲು ಜಾತಕದಲ್ಲಿ ಬುಧನೂ ಪೋಷಕನಿರಬೇಕು. ಹೀಗೆ ಶುಕ್ರ-ಚಂದ್ರ-ಬುಧರು ಪೋಷಕರಿದ್ದ ವಿದ್ಯಾರ್ಥಿಗಳು ಈ ಕೋರ್ಸಿನಲ್ಲಿ ತಜ್ಞತೆ ಪಡೆಯುತ್ತಾರೆ.

**ಸ್ಥಾನ:—** ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ಸಂಗೀತ ಶಿಕ್ಷಣದ ಕಾರಕಸ್ಥಾನವೆಂದರೆ ದ್ವಿತೀಯ ಸ್ಥಾನವು. ದ್ವಿತೀಯಸ್ಥಾನ ಹಾಗೂ ದ್ವಿತೀಯೇಶ ಪೋಷಕರಿರದೆ ಯಾವ ಜಾತಕನೂ ಸಂಗೀತದಲ್ಲಿ ತಜ್ಞನಾಗಲಾರನು. ದ್ವಿತೀಯದ ನಂತರ ಲಗ್ನ, ಪಂಚಮ ಈ ಸ್ಥಾನಗಳನ್ನು ಹಾಗೂ ಸ್ಥಾನಾಧೀಶರನ್ನು ಪರಿಶೀಲಿಸಬೇಕು. ದ್ವಿತೀಯ, ಪಂಚಮ ಈ ಸ್ಥಾನಗಳಲ್ಲಿ ಪೃಥ್ವಿ ಅಥವಾ ವಾಯು ರಾಶಿಗಳಿರಬೇಕು. ಏಕೆಂದರೆ ವಾಯುರಾಶಿ ಅಥವಾ ಪೃಥ್ವಿರಾಶಿಗಳು ಮಾಧುರ್ಯವನ್ನು ಕೊಡುತ್ತವೆ; ಅಗ್ನಿರಾಶಿಗಳು ಉಚ್ಚಾರದಲ್ಲಿ ಸ್ಪಷ್ಟತೆಯನ್ನುಂಟುಮಾಡುತ್ತವೆ. ಆದುದರಿಂದ ಇವು ಸಂಗೀತಕಾರನ ಜನ್ಮಕುಂಡಲಿಯಲ್ಲಿ ಮಹತ್ವದ್ದಾಗಿವೆ. ಜಲರಾಶಿಗಳು ಸಂಗೀತಕ್ಕೆ ಬಾಧಕವಾಗಿರುತ್ತವೆ.

**ಲಗ್ನ :—** ಲಗ್ನದ ದೃಷ್ಟಿಯಿಂದ ಪರಿಶೀಲಿಸಿದರೆ ವೃಷಭ, ಮಿಥುನ, ಸಿಂಹ, ಕನ್ಯಾ, ತುಲಾ, ಕುಂಭ ಈ ಲಗ್ನದವರೂ ತದನಂತರ ಮೇಷ, ವೃಶ್ಚಿಕ ಈ ಲಗ್ನದ ವಿದ್ಯಾರ್ಥಿಗಳೂ ಸಂಗೀತದಲ್ಲಿ ತಜ್ಞರಿರುವದು ಕಂಡು ಬರುತ್ತದೆ.

**ರಾಶಿ** :— ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ನಿರ್ದಿಷ್ಟ ರಾಶಿಯವರೇ ಸಂಗೀತದಲ್ಲಿ ತಜ್ಞರಿರುತ್ತಾರೆಂದು ಹೇಳುವದು ಕಠಿಣ. ಆದರೆ **ಮೇಷ, ಸಿಂಹ, ವೃಶ್ಚಿಕ, ಧನು, ಮಕರ, ಕುಂಭ** ಈ ರಾಶಿಯ ವಿದ್ಯಾರ್ಥಿಗಳು ವೀರ, ರೌದ್ರ, ಅದ್ಭುತ, ಭೀಭತ್ಸ, ಭಯಾನಕ ಮೊದಲಾದ ರಸಗಳು ಪ್ರಧಾನವಿರುವ ರಾಗಗಳಲ್ಲಿ ಪ್ರಭುತ್ವ ಪಡೆದಿರುತ್ತಾರೆ. **ಮಿಥುನ, ತುಲಾ, ಕುಂಭ, ಕರ್ಕ, ವೃಶ್ಚಿಕ, ಮೀನ, ಕನ್ಯಾ** ಈ ರಾಶಿಯ ವಿದ್ಯಾರ್ಥಿಗಳೂ ಹಾಸ್ಯ, ಶೃಂಗಾರ ಪೋಷಕವಾಗಿರುವ ರಾಗಗಳಲ್ಲಿ ಪ್ರಭುತ್ವ ಪಡೆದಿರುತ್ತಾರೆ. ಇದರಂತೆ ವೃಷಭ, ಕರ್ಕ, ಕನ್ಯಾ, ಮಿಥುನ, ತುಲಾ, ವೃಶ್ಚಿಕ, ಮಕರ, ಮೀನ ಈ ರಾಶಿಯ ವಿದ್ಯಾರ್ಥಿಗಳು ಕರುಣಾರಸ ಪೋಷಕವಿರುವ ರಾಗಗಳಲ್ಲಿ ಪ್ರಭುತ್ವ ಪಡೆದಿರುತ್ತಾರೆ.

**ಯೋಗ** :— ಬುಧ-ಶುಕ್ರ, ಗುರು-ಶುಕ್ರ, ಶುಕ್ರ-ಚಂದ್ರ, ಗುರು-ಚಂದ್ರ ಈ ಗ್ರಹಗಳ ಯುತಿಯೋಗವು ಅಥವಾ ಗುರು-ಬುಧ, ಗುರು-ಶುಕ್ರ, ಗುರು-ಚಂದ್ರ, ಶುಕ್ರ-ಚಂದ್ರ ಇವರ ಗ್ರಹಯೋಗವು ಲಗ್ನ, ದ್ವಿತೀಯಾ, ಪಂಚಮ, ಲಾಭದಲ್ಲಿದ್ದರೆ ಸಂಗೀತಕ್ಕೆ ಪೋಷಕವು.

**ರಾಗಗಳ ಮೇಲೆ ಪ್ರಭುತ್ವ** :— ಈ ವರೆಗೆ ಸಂಗೀತ ಶಿಕ್ಷಣ ಪಡೆಯಲು ಜಾತಕ ಹೇಗಿರಬೇಕು, ಕಾರಕಗ್ರಹ, ಲಗ್ನ, ಸ್ಥಾನ, ರಾಶ್ಯಾದಿಗಳು ಯಾವವು ಎಂಬುದನ್ನು ವಿವರಿಸಿದ್ದಾಯಿತು. ಆದರೆ ನಮ್ಮ ವಿದ್ಯಾರ್ಥಿಗಳ ಪ್ರಶ್ನೆಯೆಂದರೆ ತಾವು ಯಾವ ರಾಗದಲ್ಲಿ ಪ್ರಭುತ್ವ ಪಡೆಯಬಹುದು, ಯಾವ ರಾಗವನ್ನು ಹೆಚ್ಚು ಅಭ್ಯಾಸ ಮಾಡಬೇಕು, ಇವೇ ಮೊದಲಾದ ಪ್ರಶ್ನೆಗಳಿರುತ್ತವೆ. ಇವು ನಿಜವಾಗಿಯೂ ಜಟಿಲ ಸಮಸ್ಯೆಯಿದ್ದು ಇವಕ್ಕೆ ಉತ್ತರ ಕೊಡುವದು ಕಠಿಣ. ಆದರೆ ವಿದ್ಯಾರ್ಥಿಗಳು ಈ ತರಹದ ಪ್ರಶ್ನೆ ಕೇಳುವದರಲ್ಲಿ ಔಚಿತ್ಯವಿದೆ. ಸಾಮಾನ್ಯವಾಗಿ ಎಲ್ಲ ವೈದ್ಯ, ಡಾಕ್ಟರರು ಎಲ್ಲ ರೋಗಗಳಿಗೂ ಔಷಧ ಕೊಡುವಂತೆ ಎಲ್ಲ ಗಾಯಕರೂ ಎಲ್ಲ ರಾಗಗಳನ್ನೂ ಹಾಡಬಲ್ಲರು. ಆದರೆ ಒಬ್ಬೊಬ್ಬ ಡಾಕ್ಟರರು ಒಂದೊಂದು ರೋಗದ ವಿಶೇಷ ಪರಿಜ್ಞಾನವುಳ್ಳವರೂ, ಸಿದ್ಧಹಸ್ತರೂ ಇರುತ್ತಾರಷ್ಟೇ! ಹಾಗೆಯೇ ಗಾಯಕರಲ್ಲಿ ಕೆಲವರು ಕೆಲವು

ರಾಗಗಳನ್ನು ಹಾಡುವವರಲ್ಲಿ ವಿಶೇಷ ಪರಿಣತಿಯುಳ್ಳವರಿರುತ್ತಾರೆಂಬುದು ಸರ್ವಶೃತವಾಗಿದೆ.

ನವರಸಗಳಾದ ಶೃಂಗಾರ, ಹಾಸ್ಯ, ಕರುಣ, ರೌದ್ರ, ವೀರ, ಭಯಾನಕ, ಭೀಭತ್ಸ, ಅದ್ಭುತ, ಶಾಂತ ಈ ರಸಗಳನ್ನು ಶಾಸ್ತ್ರೀಯ ಸಪ್ತಸ್ವರಗಳಲ್ಲಿ ಈ ರೀತಿಯಾಗಿ ಅಳವಡಿಸಿದ್ದಾಗಿದೆ. 'ಸಾ, ರೆ' ಇವು ವೀರ, ರೌದ್ರ, ಅದ್ಭುತ ರಸಗಳ ಪೋಷಕವಿರುತ್ತವೆ. 'ಧ'ವು ಭೀಭತ್ಸ, ಭಯಾನಕ ರಸಗಳ ಪೋಷಕವಿರುತ್ತವೆ. 'ಗ, ನಿ' ಇವು ಕರುಣಾರಸ, ಶಾಂತರಸಗಳ ಪೋಷಕವಿವೆ. 'ಮ, ಪ' ಇವು ಹಾಸ್ಯ, ಶೃಂಗಾರ, ರಸಗಳ ಪೋಷಕಗಳು.

ಇನ್ನು ಜೋತಿಷ್ಯಶಾಸ್ತ್ರದಲ್ಲಿ ಸಂಗೀತಕಾರಕಗ್ರಹವೆಂದರೆ ಶುಕ್ರನು. ಅಲ್ಲದೆ ಭಿನ್ನ ಭಿನ್ನ ರಾಗಗಳಿಗೆ ಭಿನ್ನ ಭಿನ್ನ ಗ್ರಹ-ರಾಶಿಗಳು ಪ್ರಮುಖವಿರುತ್ತವೆ. ಎಂದರೆ ರಾಶಿ, ಗ್ರಹಗಳ ಬಲಾಬಲದ ಮೇರೆಗೆ ಬೇರೆ ಬೇರೆ ಗಾಯಕರಿಗೆ ಬೇರೆ ಬೇರೆ ರಾಗಗಳಲ್ಲಿ ಪ್ರಭುತ್ವವಿರುತ್ತದೆ. ಸಂಗೀತದಲ್ಲಿಯ "ಸಾ, ರೆ, ಗ, ಮ, ಪ, ಧ, ನಿ" ಎಂಬ ಏಳು ಸ್ವರಗಳಿಗೆ ಈ ಕೆಳಗಿನಂತೆ ರಾಶಿ, ಗ್ರಹಗಳ ಸಂಬಂಧವಿರುತ್ತದೆ.

| ಸ್ವರ | ಗ್ರಹ | ರಾಶಿ |
|---|---|---|
| ಸಾ | ಸೂರ್ಯ | ಸಿಂಹ |
| ರೆ | ಬುಧ | ಮಿಥುನ, ಕನ್ಯಾ |
| ಗ | ಶನಿ | ಮಕರ, ಕುಂಭ |
| ಮ | ಶುಕ್ರ | ವೃಷಭ, ತುಲಾ |
| ಪ | ಚಂದ್ರ | ಕರ್ಕ |
| ಧ | ಮಂಗಳ | ಮೇಷ, ವೃಶ್ಚಿಕ |
| ನಿ | ಗುರು | ಧನು, ಮೀನ |

ಸಂಗೀತದಲ್ಲಿ ಯಾವುದೊಂದು ರಾಗ ತೆಗೆದುಕೊಂಡರೂ ಅದರಲ್ಲಿ ಷಡ್ಜ ಅಥವಾ ಪಂಚಮ ಸ್ವರಗಳು ಹೆಚ್ಚು ಮಹತ್ವದವಾಗಿರುತ್ತವೆ. ಆದುದರಿಂದ ರಾಗಗಳಲ್ಲಿ ಶೃಂಗಾರ, ವೀರ, ಕರುಣಾರಸಗಳೇ ಪ್ರಧಾನವಾಗಿರುತ್ತವೆ. ಹೀಗೆ ಸಪ್ತಸ್ವರಗಳನ್ನು ನವರಸಗಳಲ್ಲಿ ಅಳವಡಿಸಲಾಗಿದೆ. ಹೇಗೆಂದರೆ

ವೀರ, ರೌದ್ರ, ಅದ್ಭುತ, ಭೀಭತ್ಸ, ಭಯಾನಕ ಮೊದಲಾದ ವೀರರಸ ಪ್ರಧಾನವಿರುವ ರಾಗಗಳಿಗೆ "ಸಾ, ರೆ, ಧ" ಇವು ಪ್ರಧಾನ ಸ್ವರಗಳಿರುವಂತೆ ಸೂರ್ಯ–ಮಂಗಳರು ಪ್ರಮುಖ ಕಾರಕರಿರುತ್ತಾರೆ. ಇದರಂತೆ ಹಾಸ್ಯ, ಶೃಂಗಾರ ಈ ರಸಗಳಿಗೆ "ಮ, ಪ" ಇವು ಪ್ರಧಾನ ಸ್ವರಗಳಿರುವಂತೆ ಶುಕ್ರ, ಚಂದ್ರ, ಬುಧರು ಪ್ರಮುಖ ಕಾರಕಗ್ರಹಗಳಿರುತ್ತವೆ. ಇದರಂತೆ ಕರುಣ, ಶಾಂತ ಈ ರಸಗಳಿಗೆ "ಗ, ನಿ" ಇವು ಪ್ರಮುಖ ಸ್ವರಗಳಿರುವಂತೆ ಶನಿ–ಗುರುಗಳು ಕಾರಕಗ್ರಹಗಳಿರುತ್ತವೆ. ಹೀಗೆ ವಿಭಿನ್ನ ರಸಗಳಿಗೆ ವಿಭಿನ್ನ ಸ್ವರಗಳು ಪ್ರಧಾನವಿರುವಂತೆ ವಿವಿಧ ಗ್ರಹಗಳು ಪೋಷಕವಿರುತ್ತವೆ. ಉದಾಹರಣೆಗಾಗಿ: ದರ್ಬಾರೀಕಾನಡಾ ರಾಗವನ್ನೇ ತೆಗೆದುಕೊಳ್ಳೋಣ. ಇಲ್ಲಿ 'ಧೈವತದ' ಆಂದೋಲನದ ಪ್ರಭಾವವೇ ಹೆಚ್ಚಿರುತ್ತದೆ. 'ಧೈವತದ' ಮೇಲೆ ಕುಜನ ಪ್ರಭುತ್ವವಿರುತ್ತದೆ. ಆದುದರಿಂದ ಜಾತಕದಲ್ಲಿ ಕುಜನು ಬಲಾಢ್ಯನಿರುವ ಜಾತಕನಿಗೆ 'ದರಬಾರಿ ಕಾನಡಾ'ದಲ್ಲಿ ಪ್ರಭುತ್ವವಿರುತ್ತದೆ. ಇದು ಅಲ್ಲದೆ ಈ ರಾಗವು ಗಂಭೀರ ಸ್ವಭಾವದ ರಸಗಳಾದ ವೀರ, ಅದ್ಭುತ, ರೌದ್ರ ರಸಗಳಿಗೆ ಪ್ರಧಾನವಾದದ್ದಾಗಿದೆ. ಆದುದರಿಂದ ಸೂರ್ಯನೂ ಸಹ ಇದಕ್ಕೆ ಕಾರಕಗ್ರಹವಾಗಿದ್ದಾನೆ. ಇದು ಅಲ್ಲದೆ ಈ ರಾಗದಲ್ಲಿ ಪ್ರಭುತ್ವ ಪಡೆಯಲು ಜಾತಕನು ಮೇಷ, ಸಿಂಹ, ವೃಶ್ಚಿಕ, ಧನು, ಮಕರ ಈ ರಾಶಿಯವನಾಗಿದ್ದು ಅನೇಕ ಗ್ರಹಗಳು ಜಾತಕದಲ್ಲಿ ಪುರುಷರಾಶಿಗಳಲ್ಲಿರಬೇಕು. ಹೀಗೆ ಬೇರೆ ಬೇರೆ ರಾಗಗಳ ಆರೋಹ–ಅವರೋಹ, ವಾದಿ–ಸಂವಾದಿ ಆಂದೋಲನದ ಸ್ವರಗಳು ಬೇರೆ ಬೇರೆ ಇರುವಂತೆ ಆಯಾ ಸ್ವರಗಳಿಗೆ ಮತ್ತು ರಾಗಗಳಿಗೆ ಬೇರೆ ಬೇರೆ ಗ್ರಹಗಳು ಪೋಷಕವಿರುತ್ತವೆ. ಅವುಗಳಲ್ಲಿ ಕೆಲವನ್ನು ಈ ಕೆಳಗಿನಂತೆ ಕೊಡಲಾಗಿದೆ.

೧) ಹಿಂಡೋಲ, ಮಾಲಕಂಸ, ದರಬಾರಿಕಾನಡಾ, ಶಂಕರಾ ಮೊದಲಾದ ಗಂಭೀರ ಸ್ವಭಾವದ ರಾಗಗಳಿಗೆ ರವಿ, ಮಂಗಳರು ಪೋಷಕರಿರುತ್ತಾರೆ ಇದಲ್ಲದೆ ಈ ರಾಗಗಳಲ್ಲಿ ಪ್ರಭುತ್ವ ಪಡೆಯುವವರು ಮೇಷ, ಸಿಂಹ, ವೃಶ್ಚಿಕ, ಧನು, ಮಕರ ಈ ರಾಶಿಯವರು ಇರುವರಲ್ಲದೆ ಇವರ ಜಾತಕಗಳಲ್ಲಿ ಪುರುಷಗ್ರಹಗಳ ಹಾಗೂ ಪುರುಷರಾಶಿಗಳ ಪ್ರಭಾವವಿರುತ್ತದೆ.

೨) ಶಾಂತರಸವೇ ಪ್ರಧಾನವಾಗಿದ್ದ ಭೂಪ, ಶುದ್ಧಕಲ್ಯಾಣ, ಭೀಮಪಲಾಸ, ಯಮುನ ಮುಂತಾದ ರಾಗಗಳಲ್ಲಿ ಪ್ರಭುತ್ವ ಪಡೆಯಲು ಜಾತಕದಲ್ಲಿ ಗುರುಚಂದ್ರರೇ ಕಾರಕಗ್ರಹಗಳಾಗಿದ್ದು, ವೃಷಭ, ಕರ್ಕ, ಕನ್ಯಾ, ಮೀನ ರಾಶಿಯವರೇ ಹೆಚ್ಚಾಗಿರುವರಲ್ಲದೆ ಅನೇಕ ಗ್ರಹಗಳು ಸ್ತ್ರೀ ರಾಶಿಗಳಲ್ಲಿ ಇರುತ್ತವೆ, ಹಾಗೂ ಸ್ತ್ರೀಗ್ರಹಗಳ ಪ್ರಭಾವವೇ ಹೆಚ್ಚಾಗಿರುತ್ತದೆ.

೩) ಶೃಂಗಾರ ರಸವೇ ಪ್ರಧಾನವಾಗಿದ್ದ ಕಾಫಿ, ದೇಸ, ತಿಲಕಕಾಮೋಹದ ಹಾಗೂ ಠುಮರಿ ಶೈಲಿಯಲ್ಲಿ ಬರುವ ಎಲ್ಲ ರಾಗಗಳಿಗೂ ಶುಕ್ರ,ಚಂದ್ರರೇ ಕಾರಕರು. ಅದರಲ್ಲೂ ವಿಶೇಷವಾಗಿ ಶುಕ್ರನೇ ಹೆಚ್ಚು ಕಾರಕನಿರುತ್ತಾನೆ. ಈ ರಾಗಗಳಲ್ಲಿ ಪ್ರಭುತ್ವ ಪಡೆಯುವವರು ಹೆಚ್ಚಾಗಿ ಮಿಥುನ, ತುಲಾ, ಕುಂಭ, ವೃಷಭ, ಕನ್ಯಾ, ಮೀನ ರಾಶಿಯವರಾಗಿದ್ದು, ಅನೇಕ ಗ್ರಹಗಳು ಭೂ ಇಲ್ಲವೆ ವಾಯು ರಾಶಿಗಳಲ್ಲಿದ್ದುದಲ್ಲದೆ ಸ್ತ್ರೀ ರಾಶಿಗಳ ಪ್ರಾಬಲ್ಯವಿರುತ್ತದೆ.

೪) ಕರುಣಾರಸವೇ ಪ್ರಧಾನರಸವಾದ ಲಲಿತ, ಭೈರವ, ಜೋಗಿಯಾ, ತೋಡಿ ಮುಂತಾದ ರಾಗಗಳಲ್ಲಿ ಪ್ರಭುತ್ವ ಪಡೆಯಲು ಜಾತಕದಲ್ಲಿ ಶನಿ–ಗುರು ಗ್ರಹಗಳು ಪೋಷಕವಿರಬೇಕು. ಅದರಲ್ಲೂ ವಿಶೇಷವಾಗಿ ಶನಿಯೇ ಹೆಚ್ಚು ಪೋಷಕನಿರುತ್ತಾನೆ. ಅಲ್ಲದೆ ಅನೇಕ ಗ್ರಹಗಳು ಸ್ತ್ರೀರಾಶಿಗಳಲ್ಲಿ ಇರುತ್ತವೆ.

೫) ಸಪ್ತಮಸ್ಥಾನದಲ್ಲಿ ದೂಷಿತ ಶುಕ್ರನಿದ್ದರೆ ಆ ಜಾತಕನು ಅಶ್ಲೀಲ ಹಾಡುಗಳಲ್ಲಿ ಪರಿಣತಿಯನ್ನು ಪಡೆಯುತ್ತಾನೆ. ಇದರಂತೆ ಶುಕ್ರ–ಮಂಗಳರ ಯೋಗವು ಕೂಡ ಮೇಲಿನ ಗುಣಧರ್ಮವನ್ನೇ ಸೂಚಿಸುತ್ತದೆ. ಹೀಗೆ ವಿಭಿನ್ನ ಗ್ರಹಗಳು, ರಾಶಿಗಳು ಪೋಷಕವಿದ್ದ ಜಾತಕನು ಆಯಾ ರಾಗಗಳಲ್ಲಿ ಪ್ರಭುತ್ವವನ್ನು ಹೊಂದುತ್ತಾನೆ. ಇದರಂತೆ ಬೇರೆ ಬೇರೆ ಗ್ರಹಗಳು ಬೇರೆ ಬೇರೆ ರಾಗಗಳ ಪೋಷಕವೆಂದು ಹೇಳಬಹುದು.

ಸಂಗೀತ ಹಾಗೂ ಜೀವನ (ಸಂಗೀತಗಾರರು ಹಾಗೂ ಜ್ಯೋತಿಷ್ಯ) ಗಳಲ್ಲಿ ಸಾಮ್ಯವಿರುವುದು ಕಂಡುಬರುತ್ತದೆ. ಲೋಕದ ಚೇಷ್ಟೆಗೆ ರವಿಯೇ ಬೀಜವಾಗಿರುವಂತೆ ಜ್ಯೋತಿಷ್ಯಕ್ಕೂ ರವಿಯೇ ಮುಖ್ಯ ಗ್ರಹವಾಗಿರುತ್ತಾನೆ; ಅಲ್ಲದೆ ಸಪ್ತಸ್ವರಗಳಲ್ಲಿ ಮೊದಲನೇ ಸ್ವರವಾದ ಷಡ್ಜದ ಮೇಲೆ

ಸೂರ್ಯನದೇ ಪ್ರಭುತ್ವವಿರುತ್ತದೆ. ಉತ್ಪತ್ತಿಗೆ ಸೂರ್ಯನು ಕಾರಕನಿದ್ದಂತೆ ಅಂತ್ಯಕ್ಕೆ ಶನಿಯು ಕಾರಕನಿರುತ್ತಾನೆ. ಸೂರ್ಯನೆಂದರೆ ಪ್ರಾಣ. ಚಂದ್ರನೆಂದರೆ ಮನಸ್ಸು. ಮನುಷ್ಯನ ಕೊನೆಯು ಕಾಲವೆಂದರೆ ಶನಿಯು. ಮನುಷ್ಯನು ಜನ್ಮಹೊಂದಿದಾಗ ಅವನ ಪ್ರಾಣ (ಸೂರ್ಯ)ದ ಆವಿರ್ಭಾವವಾಗುತ್ತದೆ. ಆ ಬಳಿಕ ಮನಸ್ಸು (ಚಂದ್ರ) ಉತ್ಪನ್ನವಾಗುತ್ತದೆ. ಅನಂತರ ಹುಟ್ಟುವುದು ಬುದ್ಧಿ. ಬುದ್ಧಿಯೆಂದರೆ ಬುಧನು; ಆಮೇಲೆ ವಿದ್ಯೆಯನ್ನು ಕಲಿಯುವದು. ಇಲ್ಲಿ ಗುರುವಿನ ಸಂಬಂಧ ತರುವಾಯ ಸುಖವನ್ನು (ಶುಕ್ರ) ಅನುಭವಿಸುವದು, ಸುಖಕ್ಕಾಗಿ ಬಡಿದಾಡುವದು. ಮಂಗಳನ ಬಲದಿಂದ ಕೊನೆಗೆ ಆಯುಷ್ಯದ ಪರಿಸಮಾಪ್ತಿಯಾಗುತ್ತದೆ. (ಶನಿ) ಇದರಂತೆಯೆ ಸಂಗೀತದ ಬೈಠಕ ನಡೆದಾಗ ಮೊದಲು ಬುದ್ಧಿ, ಆ ಬಳಿಕ ಮನಸ್ಸು, ಆ ನಂತರ ವಿದ್ಯೆಗಳನ್ನು ಸಾಧಿಸಿದ ಬಳಿಕ ಗಮಕಿಯು ತನ್ನ ಪ್ರಾಣದಿಂದ ಅಂದರೆ ಉಸುರಿನಿಂದ ಹಾಡತೊಡಗುವನು. ಹಾಗೂ ಬೈಠಕದ ಕೊನೆಯು ಭೈರವೀ ರಾಗದಿಂದ (ಶನಿಯಿಂದ) ಆಗುತ್ತದೆ. ಇದರ ಬಗ್ಗೆ ವಿವರವಾದ ಮಾಹಿತಿಯನ್ನು ನಾವು ಶೀಘ್ರದಲ್ಲಿಯೇ ಪ್ರಕಟಿಸಲಿರುವ "ಸಂಗೀತ-ಜ್ಯೋತಿಷ್ಯ" ಗ್ರಂಥದಲ್ಲಿ ಕಾಣಬಹುದು.

೩. **ವಾದ್ಯಶಿಕ್ಷಣ:—** ವಾದ್ಯವೂ ಸಂಗೀತದ ಒಂದು ಅಂಗವು. ಅಂತೆಯೇ "ಗೀತಂ ವಾದ್ಯಂಚ ನೃತ್ಯಂಚ ತ್ರಯಂ ಸಂಗೀತಮುಚ್ಯತೆ" ಎಂದು ಹೇಳಲಾಗುತ್ತದೆ. ಆದರೆ ಇಂದಿನ ಶಿಕ್ಷಣಕ್ರಮದಲ್ಲಿ ವಾದ್ಯಶಿಕ್ಷಣವನ್ನು ಪ್ರತ್ಯೇಕವಾಗಿ ಅಥವಾ ಐಚ್ಛಿಕ ವಿಷಯವನ್ನಾಗಿ ಕಲಿಯಲು ಅವಕಾಶವಿರುವದರಿಂದ ಪ್ರತ್ಯೇಕವಾಗಿ ಈ ವಿಷಯದ ಬಗ್ಗೆ ವಿವರಿಸಲಾಗಿದೆ.

ಗ್ರಹಗಳ ಪರಿಣಾಮವು ಮಾನವನ ಮೇಲೆ ಹೇಗೆ ಆಗುತ್ತದೆಯೋ ಹಾಗೆಯೇ ವಾದ್ಯದ ಪರಿಣಾಮವೂ ಕೂಡ ಮಾನವನ ಮೇಲೆ ಆಗುತ್ತದೆ. ಎಷ್ಟೋ ವಾದ್ಯಗಳಿಂದ ಬೇನೆಗಳ ನಿವಾರಣೆ ಮಾಡಿದ್ದಾರೆ. ಭಿನ್ನ ಭಿನ್ನ ವಾದ್ಯಗಳು ಬೇರೆ ಬೇರೆ ರಸಗಳನ್ನು ನಿರೂಪಿಸುತ್ತವೆ. ಉದಾಹರಣೆಗೆ:— ಹಲಗೆ, ಶಂಖ, ಡೊಳ್ಳು, ಕಾಳಿ ಇವುಗಳಿಂದ ವೀರರಸವನ್ನೂ ವೀಣೆ, ಸಿತಾರಗಳಿಂದ ಶೃಂಗಾರರಸವನ್ನೂ ಪಡೆಯಬಹುದು.

ಋಗ್ವೇದದಲ್ಲಿ ವಾದ್ಯಗಳ ಬಗೆಗೆ ಉಲ್ಲೇಖವಿದೆ. ವಿಶೇಷತಃ ಮೃದಂಗ, ವೀಣೆ, ಮುರಲಿ, ಡಮರು ಇವುಗಳ ಬಗೆಗೆ ಉಲ್ಲೇಖವಿದೆ. ಇದರಂತೆ ಯಜುರ್ವೇದದಲ್ಲಿ ಅಭಿನಯದ ಬಗೆಗೆ, ಸಾಮವೇದದಲ್ಲಿ ಸಂಗೀತದ ಬಗೆಗೆ, ಅಥರ್ವಣವೇದದಲ್ಲಿ ರಸದ ಬಗೆಗೆ ಉಲ್ಲೇಖವಿದೆ. ಪುರಾಣಗಳಲ್ಲಿ ಬೇರೆ ಬೇರೆ ದೇವತೆಗಳು ಬೇರೆ ಬೇರೆ ವಾದ್ಯಗಳನ್ನು ಬಾರಿಸುತ್ತಿದ್ದರೆಂಬ ಉಲ್ಲೇಖವಿದೆ. ಹೇಗೆಂದರೆ ಶ್ರೀಕೃಷ್ಣ-ದೇವೇಂದ್ರರು ಕೊಳಲನ್ನೂ, ನಾರದರು ತಂಬೂರಿಯನ್ನೂ, ಬ್ರಹ್ಮನು ತಾಳ-ಲಯಗಳನ್ನೂ, ವಿಷ್ಣು ಮೃದಂಗವನ್ನೂ, ಸರಸ್ವತಿಯು ವೀಣೆಯನ್ನೂ, ಶಿವನು ಡಮರುವನ್ನೂ, ಶೃಂಗಿ-ಭೃಂಗಿಗಳು ಶಂಖ-ಕಾಳಿಗಳನ್ನೂ ಬಾರಿಸುತ್ತಿದ್ದರು. ಇದರಂತೆಯೇ ಲಕ್ಷ್ಮಣನು ಸುಗ್ರೀವನ ಮನೆಗೆ ಹೋದಾಗ ಸುಗ್ರೀವನು ವೀಣೆಯನ್ನು ಬಾರಿಸುತ್ತಿದ್ದನೆಂದೂ, ಸಂಗೀತಜ್ಞನಾದ ರಾವಣನು ಶಿವನ ತಪಸ್ಸು ಮಾಡುವಾಗ ತನ್ನ ಕರುಳುಗಳನ್ನು ವಾದ್ಯಗಳನ್ನಾಗಿ ಮಾಡಿ ವರವನ್ನು ಪಡೆದನೆಂದು ರಾಮಾಯಣದಲ್ಲಿ ಉಲ್ಲೇಖವಿದೆ.

ಕ್ರಿ. ಶ. ೧೩ನೆಯ ಮತ್ತು ೧೪ನೆಯ ಶತಕದಲ್ಲಿ ಅಂದರೆ ಅಲ್ಲಾವುದ್ದೀನ ಖಿಲ್ಜಿಯ ದರ್ಬಾರದಲ್ಲಿ ಪ್ರಸಿದ್ಧ ಕವಿಯೂ, ಸಂಗೀತತಜ್ಞನೂ ಆದ ಅಮೀರ ಖುಸ್ರು ಎಂಬವನು ವೀಣೆಯ ಆಧಾರದಿಂದ "ಸೆಹತಾರ್"ವನ್ನು ತಯಾರಿಸಿದನು. ಅದನ್ನೇ ಮುಂದೆ ಸಿತಾರ ಎಂದು ಕರೆಯತೊಡಗಿದರು. ಮೃದಂಗ ಹಾಗೂ ಪಕ್ವಾಜದಿಂದ "ತಬಲಾ" ಈ ವಾದ್ಯವನ್ನು ಅವನೇ ನಿರ್ಮಿಸಿದನಂತೆ. ಈಗಿನ "ಏಕತಾರಿ"ಯಾಗಿರುವ "ಚಿಕಾರ" ಎಂಬ ಹೆಸರಿನ ಪುರಾತನ ವಾದ್ಯವನ್ನು ದೊಡ್ಡ ಟೆಂಗಿನಕಾಯಿಯಿಂದ ನಿರ್ಮಿಸುತ್ತಿದ್ದರಂತೆ. ನಾಗರಿಕತೆಯೊಂದಿಗೆ ವಾದ್ಯಗಳಲ್ಲಿ ಸುಧಾರಣೆಯಾಗಿದೆ. ವೀಣೆಯಿಂದ ಸಿತಾರ, ದಿಲ್‌ರಬಾ, ಸರೋದ ವಾದ್ಯಗಳನ್ನೂ, ಮೃದಂಗದ ಆಧಾರದ ಮೇಲಿಂದ ತಬಲಾ, ಡಗ್ಗಾಗಳನ್ನೂ, ಸ್ವರಮಂಡಲದ (ಹಾರ್ಪ) ಆಧಾರದಿಂದ ಹಾರ್ಮೋನಿಯಮ್‌ವನ್ನೂ, ಕೊಳಲಿನ ಆಧಾರದ ಮೇಲೆ ಕ್ಲೇರಿಯೋನೆಟ್ ಎಂಬ ವಾದ್ಯವನ್ನೂ, ಕಾಳಿ-ಕೊಳಲುಗಳ ಸಮ್ಮಿಶ್ರಣದಿಂದ ಭಜಂತ್ರಿಯನ್ನೂ, ಭಜಂತ್ರಿಯಿಂದ ಬ್ಯಾಂಡನ್ನೂ

ರಚಿಸಿದ್ದಾರೆ. ಇದಲ್ಲದೆ ಭಂಜೋ ವಾದ್ಯ, ಬುಲ್‌ಬುಲ್‌ತರಂಗ, ಟೈಕೋಟ್, ಜಲತರಂಗ ಮೊದಲಾದ ವಾದ್ಯಗಳೂ ಬಳಕೆಯಲ್ಲಿ ಬಂದಿವೆ.

ವಾದ್ಯಶಿಕ್ಷಣದ ಕೋರ್ಸುಗಳ ಶಿಕ್ಷಣ ಪಡೆಯಲು ಜಾತಕದಲ್ಲಿ ಯಾವ ಗ್ರಹಗಳು ಪೋಷಕವಿರಬೇಕು ಎಂಬ ಪ್ರಶ್ನೆಗೆ ಉತ್ತರ ಕೊಡುವ ಪೂರ್ವದಲ್ಲಿ ವಾದ್ಯಗಳಲ್ಲಿ ಎಷ್ಟು ಪ್ರಕಾರಗಳಿವೆ ಎಂದು ತಿಳಿಯುವದು ಅವಶ್ಯವಿರುತ್ತದೆ. ಏಕೆಂದರೆ ವಾದ್ಯಗಳಲ್ಲಿ ಅನೇಕ ಪ್ರಕಾರಗಳುಂಟು. ಒಬ್ಬನೇ ಎಲ್ಲ ವಾದ್ಯಗಳ ಪ್ರಾವೀಣ್ಯತೆ ಪಡೆಯಲಾರನು ಎಂಬುದು ಎಲ್ಲರಿಗೂ ತಿಳಿದ ವಿಷಯ. ಇದೂ ಅಲ್ಲದೆ ಭಿನ್ನ ಭಿನ್ನ ವಾದ್ಯಗಳಿಗೆ ಭಿನ್ನ ಭಿನ್ನ ಗ್ರಹಗಳೂ, ಸ್ಥಾನಗಳೂ ಕಾರಕವಿರುತ್ತವೆ. ಆದುದರಿಂದ ನಾವು ವಾದ್ಯಗಳಲ್ಲಿಯ ಪ್ರಕಾರಗಳನ್ನು ಮೊದಲು ತಿಳಿಯುವಾ.

ವಾದ್ಯಗಳಲ್ಲಿಯ ಪ್ರಕಾರಗಳು :

ನಖಜಾ ವಾಯುಜಾಶ್ಚರ್ಯ
ಲೋಹ ಶಾರೀರಜಾಸ್ತದಾ ।
ವೀಣಾದಯಸ್ತು ನಖಜಾ
ವಂಶಾದ್ಯಾವಾಯುಜಾಸ್ತಥಾ
ಚರ್ಮಜಾಶ್ಚ ಮೃದಂಗಾದ್ಯಾ
ಲೋಹಜಾ ಲೋಹಚಕ್ರಜಾ
ಶಾರೀರಜಾನಿ ಗೀತಾನಿ
ವಾದ್ಯ ಪಂಚ ವಿಧಂ ಜಗುಃ ।

ಹೀಗೆ ವಾದ್ಯಗಳಲ್ಲಿ ನಖಜ, ವಾಯುಜ, ಚರ್ಮಜ, ಲೋಹಜ. ಶಾರೀರಜ ಎಂಬ ಐದು ಪ್ರಕಾರಗಳಿವೆ.

ವೀಣಾ, ತಂಬೂರಿ, ಕಿನ್ನರಿ, ದಂಡಿ, ಏಕನಾದ, ಸಿತಾರ, ಬೀನ, ದಿಲ್‌ರುಬಾ, ಸಾರಂಗ ಮುಂತಾದ ವೀಣೆಯ ವರ್ಗದ ಪೌರ್ವಾತ್ಯ ತಂತು ವಾದ್ಯಗಳಿಗೂ ವಯೋಲಿನ್, ಸರೋದ, ಗಿಟಾರ, ಮಂಡೋಲಿನ್, ಬಿಗ್‌ಪ್ಯಾನ್, ಪಿಯಾನೋ ಮುಂತಾದ ಪಾಶ್ಚಿಮಾತ್ಯ ತಂತುವಾದ್ಯಗಳಿಗೂ ನಖಜ ವಾದ್ಯಗಳೆನ್ನುತ್ತಾರೆ.

ಮುರಲಿ, ಶಹನಾಯಿ (ಭಜಂತ್ರಿ), ಸುಂದರಿಷ್ಪಂಗಿ, ನಾಗಸ್ವರ, ಶಂಖ, ಕಾಳಿ ಮುಂತಾದ ಪೌರ್ವಾತ್ಯ ವಾದ್ಯಗಳಿಗೂ ಹಾರ್ಮೋನಿಯಂ, ಆರ್ಗನ್ಸ, ಕ್ಲೇರೋನೆಟ್, ಬ್ಯಾಂಡ್ ಮುಂತಾದ ಪಾಶ್ಚಿಮಾತ್ಯ ವಾದ್ಯ ಗಳಿಗೂ ವಾಯುಜ ವಾದ್ಯಗಳೆನ್ನುತ್ತಾರೆ. ಏಕೆಂದರೆ ಇವು ಗಾಳಿಯ (ಹವೆಯ) ಸಹಾಯದಿಂದ ನಡೆಯುತ್ತವೆ.

ಮೃದಂಗ, ಪಖವಾಜ, ತಬಲಾ, ಖೋಲ, ಢೋಲ್, ಢೋಲಕ್ (ಢಕ್ಕಾ, ಡವಣೆ) ಭೇರಿ, ತಮಟೆ, ಸಾಯವ್ರವ್ (ಪಾಶ್ಚಿಮಾತ್ಯ) ಮೊದ ಲಾದ ವಾದ್ಯಗಳಿಗೆ ಚರ್ಮಜ ವಾದ್ಯಗಳೆನ್ನುತ್ತಾರೆ.

ಲೋಹದಿಂದ ಮಾಡಿದ ತಾಳವಾದ್ಯಗಳಿಗೆ ಲೋಹಜವೆಂತಲೂ, ಬಾಯಿ ಹಾಡುಗಾರಿಕೆ ಶಾರೀರಜವೆಂತಲೂ ಎನ್ನುತ್ತಾರೆ.

**ಕಾರಕಗ್ರಹ:—** ನಖಜ ವಾದ್ಯಗಳಾದ ವೀಣಾ, ಸಿತಾರ, ಬೀನ್, ದಿಲ್‌ರುಬಾ, ಸರೋದ, ವಯೋಲಿನ್ ಮೊದಲಾದ ವಾದ್ಯಗಳ ಕಾರಕ ಗ್ರಹವೆಂದರೆ ಶುಕ್ರನು. ಶುಕ್ರನು ಜಾತಕದಲ್ಲಿ ಪೋಷಕನಿರದ ಯಾರೂ ಈ ವಾದನದಲ್ಲಿ ಪ್ರಾವೀಣ್ಯತೆ ಪಡೆಯಲಾರರು. ಶುಕ್ರನ ತರುವಾಯ ಚಂದ್ರನೂ ನಖಜ ವಾದ್ಯಗಳಿಗೆ ಕಾರಕನಾಗುತ್ತಾನೆ. ಹೀಗೆ ಶುಕ್ರ-ಚಂದ್ರರು ಜಾತಕದಲ್ಲಿ ಪೋಷಕರಿದ್ದ ವಿದ್ಯಾರ್ಥಿಗಳು ನಖಜ ವಾದನದಲ್ಲಿ ತಜ್ಞರಿರುತ್ತಾರೆ.

ಮುರಲಿ, ಶಹನಾಯಿ, ಹಾರ್ಮೋನಿಯಂ, ಕ್ಲೇರಿಯೋನೆಟ್, ಬ್ಯಾಂಡ್ ಮೊದಲಾದ ವಾಯುಜ ವಾದ್ಯಗಳ ಕಾರಕಗ್ರಹವೆಂದರೆ ಶುಕ್ರ. ಆತನೊಂದಿಗೆ ಶನಿಯನ್ನೂ ಪರಿಶೀಲಿಸಬೇಕು. ಏಕೆಂದರೆ ವಾಯುವಿನ ಮೇಲೆ ಶನಿಯ ಪ್ರಭುತ್ವವಿರುತ್ತದೆ. ಶನಿಯ ತರುವಾಯ ಬುಧನನ್ನೂ ಪರಿ ಶೀಲಿಸಬೇಕು. ಹೀಗೆ ಶುಕ್ರ-ಶನಿ-ಬುಧರು ಪೋಷಕರಿದ್ದ ವಿದ್ಯಾರ್ಥಿ ಗಳು ವಾಯುಜ ವಾದ್ಯಗಳಲ್ಲಿ ಪ್ರಭುತ್ವ ಪಡೆಯುತ್ತಾರೆ.

ಚರ್ಮದ ವಾದ್ಯಗಳಾದ ಮೃದಂಗ, ಪಖವಾಜ, ತಬಲಾ ಮೊದ ಲಾದವುಗಳ ಮೇಲೆ ಶನಿ-ಮಂಗಳರು ಕಾರಕರಿರುತ್ತಾರೆ. ಇದರಂತೆ

ಲೋಹದ ವಾದ್ಯಗಳ ಮೇಲೆ ಶನಿಯೋರ್ವನೇ ಕಾರಕನು. ಶಾರೀರಜ ವಾದ್ಯಗಳ ಮೇಲೆ ಶುಕ್ರ-ಚಂದ್ರ-ಬುಧರು ಕಾರಕರಿರುತ್ತಾರೆ.

ಸ್ಥಾನ:—ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ನಖಜ ವಾದ್ಯಗಳ ಕಾರಕಸ್ಥಾನಗಳೆಂದರೆ ತೃತೀಯಸ್ಥಾನವು. ತೃತೀಯಸ್ಥಾನ ಹಾಗೂ ತೃತೀಯೇಶ ಪೋಷಕರಿರದೆ ಯಾವ ವಿದ್ಯಾರ್ಥಿಯೂ ನಖಜ ವಾದ್ಯಗಳ ಮೇಲೆ ಪ್ರಭುತ್ವವನ್ನು ಪಡೆಯಲಾರನು. ತೃತೀಯದ ನಂತರ ಲಗ್ನ-ಪಂಚಮವನ್ನೂ ಪರಿಶೀಲಿಸಬೇಕು.

ವಾಯುಜ ವಾದ್ಯಗಳ ಕಾರಕಸ್ಥಾನವೆಂದರೆ ದ್ವಿತೀಯಸ್ಥಾನ ಮೂಲ ವಿರುತ್ತದೆ. ದ್ವಿತೀಯದ ನಂತರ ತೃತೀಯ ಸ್ಥಾನವನ್ನೂ ಪರಿಶೀಲಿಸಬೇಕು. ಹೀಗೆ ದ್ವಿತೀಯ-ತೃತೀಯ ಸ್ಥಾನಗಳೂ ಹಾಗೂ ಈ ಸ್ಥಾನಾಧೀಶರೂ ಪೋಷಕರಿರದೆ ಯಾವ ವಿದ್ಯಾರ್ಥಿಯೂ ಈ ವಾದ್ಯಗಳ ವಿದ್ಯೆಯಲ್ಲಿ ಪಳಗಲಾರನು.

ಚರ್ಮಜ ವಾದ್ಯಗಳ ಮೇಲೆ ಪ್ರಭುತ್ವ ಪಡೆಯಲು ತೃತೀಯ ಸ್ಥಾನದೊಂದಿಗೆ ಚತುರ್ಥ ಸ್ಥಾನವನ್ನೂ ಪರಿಶೀಲಿಸಬೇಕು. ಹೀಗೆ ಈ ಎರಡೂ ಸ್ಥಾನಗಳೂ ಹಾಗೂ ಸ್ಥಾನಾಧೀಶರೂ ಪೋಷಕರಿದ್ದ ವಿದ್ಯಾರ್ಥಿಗಳು ಈ ವಾದ್ಯವಿದ್ಯೆಯಲ್ಲಿ ವಿದ್ವಾನರಿರುತ್ತಾರೆ.

ಲಗ್ನ:—ಲಗ್ನದ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ವೃಷಭ, ಮಿಥುನ, ಕರ್ಕ, ತುಲಾ, ಮಕರ, ಕುಂಭ ಈ ಲಗ್ನದವರು ನಖಜ ವಾದ್ಯಗಳಲ್ಲಿಯೂ ಮೇಷ, ವೃಷಭ, ಮಿಥುನ, ತುಲಾ, ವೃಶ್ಚಿಕ, ಮಕರ, ಕುಂಭ ಈ ಲಗ್ನದವರು ವಾಯುಜ ವಾದ್ಯಗಳಲ್ಲಿಯೂ ಮೇಷ, ವೃಷಭ, ಮಿಥುನ, ಕರ್ಕ, ಸಿಂಹ, ತುಲಾ, ವೃಶ್ಚಿಕ, ಧನು, ಮಕರ ಈ ಲಗ್ನದವರು ಚರ್ಮದ ವಾದ್ಯಗಳ ಮೇಲೆಯೂ ಪ್ರಾವೀಣ್ಯತೆ ಪಡೆದಿರುತ್ತಾರೆ.

ರಾಶಿ :— ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ನಿರ್ದಿಷ್ಟ ರಾಶಿಯವರೇ ನಿರ್ದಿಷ್ಟ ವಾದ್ಯಗಳಲ್ಲಿ ತಜ್ಞರಿರುತ್ತಾರೆಂದು ಹೇಳಲುಬಾರದು.

೯. ನೃತ್ಯಶಾಸ್ತ್ರದ ಶಿಕ್ಷಣ :— ನೃತ್ಯಶಾಸ್ತ್ರವನ್ನು ಪಂಚಮವೇದ

ವೆಂದು ಕರೆಯುವದುಂಟು. ನೃತ್ಯವು ಭಾರತದ ಸಾಂಸ್ಕೃತಿಕ ಹಾಗೂ ಧಾರ್ಮಿಕ ಜನಜೀವನದ ಅವಿಭಾಜ್ಯ ಅಂಗವಾಗಿಯೇ ಬೆಳೆದುಬಂದಿದೆ ಯೆಂದರೆ ಅತಿಶಯೋಕ್ತಿಯಾಗಲಾರದು. ನೃತ್ಯವು ಲಲಿತಕಲೆಗಳಲ್ಲಿ ಅತಿ ಶೃಂಗಾರ, ರಸಭರಿತ, ಸುಂದರ ಕಲೆಯಿರುವದಲ್ಲದೆ ಇದರಲ್ಲಿ ಸಂಗೀತ, ಕಾವ್ಯ, ನಾಟಕ, ಚಿತ್ರಕಲೆ, ಶಿಲ್ಪಕಲೆಗಳ ಸಮಗ್ರ ಸಂಗಮವಾಗಿ, ಸೌಂದರ್ಯ ಯುಕ್ತವಾಗಿ ಸಂಯಮ, ತಾಳ, ಲಯ, ಮಾಧುರ್ಯ, ಶೃಂಗಾರ, ಭೂಯಿಷ್ಟವಾದುದಿದೆ ಎಂಬ ವಿಷಯವನ್ನು ಮರೆಯುವಂತಿಲ್ಲ.

ಭಾರತದಲ್ಲಿ ನೃತ್ಯಶಾಸ್ತ್ರವು ತಾಂತ್ರಿಕ ಪರಿಪೂರ್ಣತೆಯನ್ನೂ, ಶಾಸ್ತ್ರೀಯ ಔನ್ನತ್ಯವನ್ನೂ ಪಡೆದಂತೆ ಮತ್ತಾವ ದೇಶದಲ್ಲಿಯೂ ಈ ಕಲೆ ಇಷ್ಟು ಉನ್ನತಮಟ್ಟವನ್ನು ಹೊಂದಿಲ್ಲವೆಂದು ಹೇಳಿದರೆ ಅತಿಶಯೋಕ್ತಿ ಯಾಗಲಾರದು. ಭರತನಾಟ್ಯವು ಭರತಮುನಿಯ ನಾಟ್ಯಶಾಸ್ತ್ರದ ಮೂಲ ಗ್ರಂಥವೆಂದು ಹೇಳಬಹುದು. ಶಾಸ್ತ್ರದಂತೆ ಭಾರತೀಯ ನೃತ್ಯದಲ್ಲಿ ನೃತ್ತ, ನೃತ್ಯ, ನಾಟ್ಯ ಎಂಬ ಮೂರು ಮುಖ್ಯ ಅಂಶಗಳಿವೆ. ನೃತ್ತ ಕೇವಲ ತಾಳದ ಆಧಾರದ ಮೇಲೆ ಇದ್ದರೆ ನೃತ್ಯವು ಭಾವ-ರಸ-ತಾಳಗಳ ಸಂಗಮ ವಿರುತ್ತದೆ. ಇದರಂತೆ ನಾಟ್ಯದಲ್ಲಿ ಸಂಗೀತ-ನೃತ್ಯದ ಅಭಿನಯ ಕೂಡಿ ರುತ್ತದೆಯೆಂದು ಹೇಳಬಹುದು. ಇನ್ನು ಭರತನೃತ್ಯವನ್ನು ತಾಂಡವ ಹಾಗೂ ಲಾಸ್ಯವೆಂಬ ಎರಡು ವಿಧಗಳಾಗಿ ವಿಂಗಡಿಸಬಹುದು. ತಾಂಡವ ನೃತ್ಯವು ಶಿವತಾಂಡವದ ಪ್ರಳಯದಂತೆ ಮಾದರಿಯಾದರೆ ಲಾಸ್ಯವು ಮೃದು-ಮಧುರವಾಗಿರುತ್ತದೆ.

ಇಂಥ ಭಾರತದಲ್ಲಿಯ ನಾಟ್ಯ (ನೃತ್ಯ) ಗಳನ್ನು ನಾಲ್ಕು ಮಾದರಿಯ ಶಾಸ್ತ್ರೀಯ ನೃತ್ಯಗಳಾಗಿ ವಿಂಗಡಿಸಬಹುದು. ಅವು ಯಾವವೆಂದರೆ : ೧) ಭರತನಾಟ್ಯ. ೨) ಕಥಕ್, ೩) ಕಥಕ್ಕಳಿ, ೪) ಮಣಿಪುರಿ. ಇವು ಗಳಲ್ಲಿ ಭರತನಾಟ್ಯವೇ ಎಲ್ಲ ನೃತ್ಯಗಳಲ್ಲಿ ಪ್ರಾಚೀನ ಹಾಗೂ ಮೂಲ ನೃತ್ಯ ವಿದ್ದು ಸಾರ್ವತ್ರಿಕವಾಗಿ ಇರುತ್ತದೆ. ಈ ನಾಟ್ಯದ ವೈಶಿಷ್ಟ್ಯವೆಂದರೆ ರಾಮಾಯಣ, ಮಹಾಭಾರತಗಳ ಕಥೆಗಳನ್ನು ಹೇಳುವ ನೃತ್ಯವಿದ್ದು, ಇದರಲ್ಲಿ ಮುಖಮುದ್ರೆ ಹಾಗೂ ಹಸ್ತವಿನ್ಯಾಸವಿರುತ್ತದೆ. ಕೇವಲ ಹಸ್ತ

ಮುದ್ರಿಕೆಗಳ ಮೇಲಿಂದ ನವರಸಗಳನ್ನು ಚಿತ್ರೀಕರಿಸುವ ವೈಶಿಷ್ಟ್ಯ ಬೇರೆ ಯಾವ ನೃತ್ಯದಲ್ಲಿಯೂ ಇಲ್ಲ. ಇನ್ನೂ ಒಂದು ವೈಶಿಷ್ಟ್ಯವೆಂದರೆ ಮೃದಂಗವೇ ಈ ನೃತ್ಯಕ್ಕೆ ಸಹಾಯವಾಗುತ್ತದೆ. ಈ ಭರತನಾಟ್ಯವನ್ನು ಈ ಹಿಂದೆ ದೇವದಾಸಿಯರು ದೇವಾಲಯಗಳಲ್ಲಿ ಅಭಿನಯಿಸುತ್ತಿದ್ದರು. ಇದರಲ್ಲಿ ಅಭಿನಯಕ್ಕೆ ಬಹಳ ಮಹತ್ವವಿದೆ. ಇದರಲ್ಲಿ ಅಲ್ಲರಿಪು, ಜತಿ ಸ್ವರಂ, ತಿಲ್ಲಾಣ ಮೊದಲಾದ ಪ್ರಮುಖ ಪ್ರಕಾರಗಳಿವೆ.

ಎರಡನೆಯದಾಗಿ ಕಥಕ್‌ದ ವೈಶಿಷ್ಟ್ಯವೆಂದರೆ ಇದಕ್ಕೆ ಗಣಿತಶಾಸ್ತ್ರದ ಜ್ಞಾನ ಅತ್ಯವಶ್ಯವಿರುತ್ತದೆ. ಏಕೆಂದರೆ ಈ ನೃತ್ಯದಲ್ಲಿ ಮಾತ್ರೆಗಳು, ಪರಿಣ ಗಳು (ಕಟ್ಟುಗಳು) ಬಹಳ ಮಹತ್ವದವಿರುತ್ತವೆ. ಈ ಮಾತ್ರೆಗಳಲ್ಲಿ ಅಂಕ ಗಣಿತದ ಲೆಕ್ಕದಂತೆ ಸ್ವಲ್ಪೂ ಹೆಚ್ಚು ಕಡಿಮೆಯಾಗದಂತೆ ನೋಡಬೇಕಾಗುತ್ತದೆ. ಈ ನೃತ್ಯವು ಭಾರತದ ಪಂಜಾಬ, ಜಯಪುರ, ಉತ್ತರಪ್ರದೇಶ ಹಾಗೂ ಹಿಂದಿನ ಸಂಸ್ಥಾನಗಳಲ್ಲಿ ಹೆಚ್ಚಾಗಿದೆ. ಇದರಲ್ಲಿ ತಬಲಾವನ್ನೇ ಹೆಚ್ಚು ಅವಲಂಬಿಸಿರುತ್ತಾರೆ.

ಮೂರನೆಯದಾಗಿ ಕಥಕ್ಕಳಿ ಮಣಿಪುರಿ ನೃತ್ಯವು. ಇದು ಆಸಾಮ ಹಾಗೂ ಬಂಗಾಲದಲ್ಲಿ ಹೆಚ್ಚು ಪ್ರಚಲಿತದಲ್ಲಿದ್ದು ಕೇವಲ ಲಾಸ್ಯದಂತಿರುತ್ತದೆ. ಇವರಲ್ಲಿ ಅಂಗ-ಪ್ರತ್ಯಂಗಗಳ ಚಲನವಲನ ಹೆಚ್ಚಿದ್ದು, ಉಡುಪುಗಳಿಗೆ ಹೆಚ್ಚು ಮಹತ್ವವಿದೆ.

ನಾಲ್ಕನೆಯದಾಗಿ ಕಥಕ್ಕಳಿಯು. ಇದು ಕೇರಳದಲ್ಲಿ ಹೆಚ್ಚು ಪ್ರಚಲಿತವಿದ್ದು, ಪ್ರಾಣಿಗಳ ಅವಯವಗಳ ಮಾದರಿಗಳನ್ನು ತಮ್ಮ ಶರೀರದಲ್ಲಿ ಧರಿಸಿಕೊಂಡು ಅಭಿನಯಿಸುತ್ತಾರೆ. ಹೀಗೆ ಈ ನಾಲ್ಕು ಪ್ರಕಾರದ ನೃತ್ಯಗಳಲ್ಲಿ ಬೇರೆ ಬೇರೆ ವೈಶಿಷ್ಟ್ಯವಿರುತ್ತದೆ. ಇದೂ ಅಲ್ಲದೆ ಇತ್ತೀಚಿಗೆ ಟಾಗೋರ್ ನೃತ್ಯದ ರೀತಿ, ಉದಯಶಂಕರ ನೃತ್ಯದ ರೀತಿ ಮತ್ತು ದಕ್ಷಿಣಕನ್ನಡದವಲ್ಲಿಯ ಯಕ್ಷಗಾನ ಮೊದಲಾದವುಗಳ ವೈಶಿಷ್ಟ್ಯಗಳೇ ಬೇರೆ ಇರುತ್ತವೆ.

ನೃತ್ಯಕಾರನಾಗಬೇಕಾದರೆ ಪ್ರಮಾಣಬದ್ಧ ಅಂಗಾಂಗಗಳು, ಆಕರ್ಷಕ ಹಾಗೂ ನವರಸವನ್ನು ಪ್ರದರ್ಶಿಸುವ ಮುಖಲಕ್ಷಣ. ಗಟ್ಟಿಯಾದ ತೊಡೆ, ಕಾಂತಿಯುಕ್ತ ಕಣ್ಣು, ಸದೃಢ, ತೆಳುವಾದ ಶರೀರವಿರಬೇಕಾಗು

ತ್ತದೆ. ಆದರೆ ಬೆಳ್ಳಗಿನ ಕಣ್ಣು, ದಪ್ಪಾದ ತುಟಿ, ಜೋತಾಡುವ ಮೊಲೆ, ಸ್ಥೂಲ ದೇಹ, ದೊಡ್ಡ ಹೊಟ್ಟೆ, ದೊಡ್ಡದಾದ ತಲೆ ಇವು ನೃತ್ಯಕಾರನಿಗೆ ಅಪಥ್ಯವಿರುತ್ತವೆ.

ನೃತ್ಯಶಾಸ್ತ್ರವು ಒಂದು ಉತ್ತಮ ಕಲೆಯಿದ್ದು ಬೆಳೆಯಹತ್ತಿದೆ. ಅದಕ್ಕಾಗಿ ರಾಷ್ಟ್ರಾದ್ಯಂತ ನೃತ್ಯಶಾಲೆಗಳು ಹುಟ್ಟಿಕೊಂಡಿವೆ, ಬೆಳೆದುಕೊಂಡಿವೆ. ಈ ಶಾಲೆಗಳಲ್ಲಿ ನೃತ್ಯ ಪ್ರಥಮ, ದ್ವಿತೀಯ, ಮಧ್ಯಮ, ನೃತ್ಯತೃತೀಯಾ, ನೃತ್ಯವಿಶಾರದ, ಅಲಂಕಾರ, ಪ್ರವೀಣ ಮೊದಲಾದ ಪರೀಕ್ಷೆಗಳಿಗೆ ಏಳು ವರ್ಷದ ತರಬೇತಿ ಕೊಡಲಾಗುತ್ತದೆ. ಈ ಕೋರ್ಸುಗಳಲ್ಲಿ ತಾಳ, ನೃತ್ಯದ ಪ್ರಕಾರ, ಶಾಸ್ತ್ರೀಯ ಜ್ಞಾನ, ಮುದ್ರಿಕೆಗಳು, ಹಸ್ತವಿನ್ಯಾಸ, ತಾಳದ ಕಟ್ಟುಗಳು ಮೊದಲಾದ ನೃತ್ಯದ ಪರಿಚಯವನ್ನು ತಾತ್ವಿಕವಾಗಿ ಹಾಗೂ ಪ್ರಾಯೋಗಿಕವಾಗಿ ತರಬೇತಿಯಲ್ಲಿ ಕೊಡಲಾಗುತ್ತದೆ.

ನೃತ್ಯದಲ್ಲಿ ತಜ್ಞತೆ ಪಡೆದವರಿಗೆ ಚಲನಚಿತ್ರರಂಗ ಹಾಗೂ ನಾಟಕ ರಂಗಗಳಲ್ಲಿ ಪ್ರಾಶಸ್ತ್ಯ ಸಿಗುತ್ತದೆ. ಸಿನೇಮಾರಂಗದಡೆ ವಿಶೇಷ ಆಕರ್ಷಣೆ ಉಂಟಾಗಿರುವ ಈ ಕಾಲದಲ್ಲಿ ನೃತ್ಯದಲ್ಲಿ ನೈಪುಣ್ಯತೆ ಪಡೆದ ಕಲಾವಿದರಿಗೆ ವಿಶೇಷ ಬೇಡಿಕೆಯಿದೆ. ಇದು ಆರ್ಥಿಕ ದೃಷ್ಟಿಯಿಂದ ವಿಶೇಷ ಆಕರ್ಷಣೆ ಒದಗಿಸುತ್ತದೆ. ಇವಲ್ಲದೆ ಶಾಲೆಗಳಲ್ಲಿ ನೃತ್ಯಶಿಕ್ಷಕರಿಗೆ ಬೇಡಿಕೆಯಿದೆ. ಆದುದರಿಂದ ಈ ಕೋರ್ಸಿನಲ್ಲಿ ತಜ್ಞತೆ ಪಡೆಯಲು ವಿದ್ಯಾರ್ಥಿನಿಯರು ತವಕಪಡುತ್ತಿರುವದು ಆಶ್ಚರ್ಯದ ವಿಷಯವಲ್ಲ. ಈ ಕೋರ್ಸಿನ ಇಷ್ಟೊಂದು ಹಿನ್ನಲೆಯಲ್ಲಿ ಈ ಕೋರ್ಸಿನ ಹಾಗೂ ಈ ಶಾಸ್ತ್ರದ ವಿಷಯವಾಗಿ ಜೋತಿಷ್ಯದ ವಿಚಾರವೇನು, ಕಾರಕಗ್ರಹ, ಸ್ಥಾನಾದಿಗಳಾವವು ಎಂಬುದನ್ನು ಪರಿಶೀಲಿಸುವಾ.

**ಕಾರಕಗ್ರಹ:—** ಭರತನಾಟ್ಯದ ಕಾರಕಗ್ರಹವೆಂದರೆ ಶುಕ್ರ-ಚಂದ್ರರು. ಏಕೆಂದರೆ ಈ ನಾಟ್ಯದಲ್ಲಿಯ ಮುಖ್ಯ ವೈಶಿಷ್ಟ್ಯವೆಂದರೆ ಹಸ್ತವಿನ್ಯಾಸದಿಂಧ ಮುಖಮುದ್ರೆಗಳ ಮೇಲಿಂದ ನವರಸಗಳನ್ನು ದರ್ಶಿಸುವ ಕ್ರಿಯೆಯಿರುತ್ತದೆ. ಇದು ಶುಕ್ರ-ಚಂದ್ರರ ಗುಣಧರ್ಮದ್ದಿರುತ್ತದೆ. ಶುಕ್ರ-ಚಂದ್ರರು ಪೋಷಕರಿಲ್ಲದ ಯಾವ ವಿದ್ಯಾರ್ಥಿಯೂ ಈ ನೃತ್ಯದ ಶಿಕ್ಷಣದಲ್ಲಿ

ತಜ್ಞನಾಗಲಾರನು. ಇದರಂತೆಯೇ ಕಥಕ್ ಈ ನೃತ್ಯಶಾಸ್ತ್ರದ ಕಾರಕ ಗ್ರಹವೆಂದರೆ ಬುಧನು. ಏಕೆಂದರೆ ಅಂಕಗಣಿತದ ಲೆಕ್ಕದಂತೆ ಮಾತ್ರೆಗಳ, ಕಟ್ಟುಗಳ ನಿಬಂಧನೆಯಿರುತ್ತದೆ. ಬುಧನ ತರುವಾಯ ಶುಕ್ರ-ಚಂದ್ರರನ್ನೂ ಪರಿಶೀಲಿಸಬೇಕು. ಬುಧನು ರಾಶಿಬಲದವನೂ, ಸ್ಥಾನಬಲದವನೂ ಇದ್ದರೆ ಶುಕ್ರ-ಚಂದ್ರರು ಕೇವಲ ರಾಶಿಬಲದವರಿರುತ್ತಾರೆ ಇದೇ ಈ ಎರಡೂ ನೃತ್ಯಗಳಲ್ಲಿರುವ ಕಾರಕದಲ್ಲಿರುವ ಭೇದವು. ಇದರಂತೆ ಉಳಿದ ಯಾವುದೇ ನೃತ್ಯದ ಕಾರಕಗ್ರಹಗಳೆಂದರೆ ಶುಕ್ರ-ಚಂದ್ರರು ಇರುತ್ತಾರೆ.

ಸ್ಥಾನ:— ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ಭರತನಾಟ್ಯಕ್ಕೆ ಹಸ್ತವಿನ್ಯಾಸ ಹಾಗೂ ಮುಖಮುದ್ರೆಗಳೇ ಪ್ರಧಾನ ಗುಣಧರ್ಮಗಳಿರುವದರಿಂದ ತೃತೀಯ, ಲಗ್ನ ಸ್ಥಾನಗಳೇ ಕಾರಕಸ್ಥಾನ. ಅದರಲ್ಲಿಯೂ ಲಗ್ನಕ್ಕಿಂತ ತೃತೀಯಸ್ಥಾನವು ಹೆಚ್ಚು ಪೋಷಕವಿರುತ್ತದೆ. ಇನ್ನು ಕಥಕ್‌ದಲ್ಲಿ ತೃತೀಯ ಸ್ಥಾನಕ್ಕಿಂತ ಲಗ್ನವೇ ಹೆಚ್ಚು ಕಾರಕಸ್ಥಾನವಿರುತ್ತದೆ. ಹೀಗೆ ತೃತೀಯ, ಲಗ್ನ ಈ ಸ್ಥಾನಗಳು ಹಾಗೂ ಈ ಸ್ಥಾನಾಧೀಶರೂ ಪೋಷಕರಿರುವ ಯಾವುದೇ ವಿದ್ಯಾರ್ಥಿಯು ಯಾವುದೇ ನೃತ್ಯಕೋರ್ಸಿನಲ್ಲಿ ತಜ್ಞತೆ ಪಡೆಯಬಹುದು.

ಲಗ್ನ:— ಲಗ್ನದ ದೃಷ್ಟಿಯಿಂದ ಪರಿಶೀಲಿಸಿದರೆ ನೃತ್ಯಕಾರನಲ್ಲಿರಬೇಕಾದ ಲಕ್ಷಣವೆಂದರೆ ತೆಳುವಾದ, ನೀರಾದ, ಸದೃಢ ಶರೀರ, ಗಟ್ಟಿಮುಟ್ಟಾದ ತೊಡೆಯೂ. ಪ್ರಮಾಣಬದ್ಧವಾದ ಅಂಗಾಂಗವು, ಆಕರ್ಷಕ ಹಾಗೂ ನವರಸಗಳನ್ನು ದರ್ಶಿಸುವ ಮುಖಲಕ್ಷಣ ಹೀಗೆ ದೇಹರಚನೆಯಿರಬೇಕಾಗುತ್ತದೆ. ಆದುದರಿಂದ ಇದರಲ್ಲಿ ವೃಷಭ, ಮಿಥುನ, ಕರ್ಕ, ಕನ್ಯಾ, ತುಲಾ, ಕುಂಭ, ಮೀನ ಲಗ್ನದವರಿದ್ದುದು ಕಂಡುಬರುತ್ತದೆ.

ರಾಶಿ:— ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ನಿರ್ದಿಷ್ಟ ರಾಶಿಯವರೇ ನೃತ್ಯದಲ್ಲಿ ಪ್ರವೀಣರಿರುವರೆಂದು ಹೇಳಲುಬಾರದಿದ್ದರೂ ವೃಷಭ, ಮಿಥುನ, ಕರ್ಕ, ಕನ್ಯಾ, ತುಲಾ, ಧನು, ಕುಂಭ, ಮೀನ ಈ ರಾಶಿಯವರೇ ಹೆಚ್ಚಾಗಿರುವದು ಕಂಡುಬರುತ್ತದೆ.

ಯೋಗ:— ಭರತನಾಟ್ಯದಲ್ಲಿ ಹಸ್ತವಿನ್ಯಾಸವೇ ಪ್ರಮುಖವಿರುವದರಿಂದ ಮಿಥುನ ರಾಶಿಯು ಜಾತಕದಲ್ಲಿ ದೂಷಿತವಿರಕೂಡದು. ಏಕೆಂದರೆ ನೈಸರ್ಗಿಕವಾಗಿ ಹಸ್ತಗಳ ಮೇಲೆ ಮಿಥುನ ರಾಶಿಯ ಆಧಿಪತ್ಯವಿರುತ್ತದೆ. ಇದರಂತೆ ಪಾದಗಳ ಮೇಲೆ ನೈಸರ್ಗಿಕವಾಗಿ ಮೀನರಾಶಿಯ ಆಧಿಪತ್ಯವೂ, ತೊಡೆಗಳ ಮೇಲೆ ಧನುರಾಶಿಯ ಆಧಿಪತ್ಯವೂ ಇರುವದರಿಂದ ಈ ರಾಶಿಗಳು ಜಾತಕದಲ್ಲಿ ದೂಷಿತವಿರಕೂಡದು ಈ ಯೋಗವಿದ್ದ ವಿದ್ಯಾರ್ಥಿಗಳು ಈ ಕೋರ್ಸಿನಲ್ಲಿ ತಜ್ಞತೆ ಪಡೆಯುತ್ತಾರೆ.

೫, ಸಾಹಿತ್ಯ:— ಕವಿಗಳು "ಅನಭಿಷಿಕ್ತ ಶಾಸಕರು" ಎಂಬ ಮಾತು ಸರ್ವಶೃತವಿದೆ. ಇದರ ಅರ್ಥ ಕವಿ ಅಥವಾ ಸಾಹಿತಿಯ ಕಲ್ಪನೆಯಂತೆ ಮಾನವಸಮಾಜದ ಆಗುಹೋಗು ನಡೆಯಬೇಕೆಂದು ಇರುತ್ತದೆ. ಸಾಹಿತಿಗಳು ಭಾವೀ ಜೀವನದ ಆದರ್ಶವನ್ನು ಒದಗಿಸಬಲ್ಲ ಚೈತನ್ಯಶಕ್ತಿಯಾಗಿರುತ್ತಾರೆ. ಅವರ ಮಾನಸಪುಷ್ಪ ಫಲಕಾರಿಯಾದಾಗ ಆದರ್ಶಜೀವನ ರೂಪುಗೊಂಡು ಮಾನವಕುಲದ ಆವಿರ್ಭಾವಕ್ಕೆ ಪೋಷಕವಾಗುತ್ತದೆ. ಹೀಗಾಗಿ ಸಾಹಿತ್ಯ ಭವ್ಯಜೀವನಕ್ಕೆ ದಾರಿದೀಪವಾಗಿದೆ. ಇದರಿಂದಾಗಿ ಜೀವನದ ಬಗೆಗೆ ಉತ್ತಮ ಕಲ್ಪನೆಗಳನ್ನು ತಾಳುವ ಎಲ್ಲರೂ ಸಾಹಿತಿಗಳಾಗಬೇಕೆಂಬ ಬಯಕೆ ಇರುವದರಲ್ಲಿ ಅಸ್ವಾಭಾವಿಕವೇನೂ ಇರುವದಿಲ್ಲ. ಸಾಹಿತಿಗಳಿಗೆ ಸಮಾಜದಲ್ಲಿ ದೊರೆಯುವ ಗೌರವ, ಮಾನ, ಸನ್ಮಾನ ಅವರ ಈ ಭಾವನೆಗೆ ಪೋಷಕವಾಗಿವೆ. ಹೀಗಾಗಿ ಇಂದಿನ ಅನೇಕ ವಿದ್ಯಾರ್ಥಿಗಳು, ಸುಶಿಕ್ಷಿತರು ಸಾಹಿತಿಗಳಾಗುವ ಬಯಕೆಯನ್ನು ತಾಳುತ್ತಾರೆ. ತಾವು ಸಾಹಿತಿಗಳಾಗಬಲ್ಲರೆ; ಎಂಬ ಸಮಸ್ಯೆಯೊಡನೆ ಜ್ಯೋತಿಷಿಗಳನ್ನು ಸಂಪರ್ಕಿಸುತ್ತಾರೆ; ಹಾಗೂ ಈ ದಿಕ್ಕಿನಲ್ಲಿ ಸತತ ಶ್ರಮಿಸುತ್ತಾರೆ. ಇದರಿಂದಾಗಿ ಸಾಹಿತಿಗಳಾಗಬಲ್ಲವರಾರು, ಸಾಹಿತಿಗಳಾಗಲು ಜಾತಕವೆಂತಿರಬೇಕು, ಕಾರಕಗ್ರಹ, ಲಗ್ನ, ಸ್ಥಾನಾದಿಗಳಾವವು ಎಂಬುವದನ್ನು ಪರಿಶೀಲಿಸುವಾ.

ಸಾಹಿತ್ಯಕ್ಕೆ ಕಾರಕಗ್ರಹ ಯಾವುದು ಎಂದು ಪ್ರಶ್ನಿಸಿದರೆ ನಿರ್ದಿಷ್ಟ ಗ್ರಹವೇ ಕಾರಕವೆಂದು ಹೇಳುವದು ಕಠಿಣ. ಏಕೆಂದರೆ ವಾಙ್ಮಯದಲ್ಲಿ ನಾಲ್ಕು ಪ್ರಕಾರಗಳಿವೆ: ೧) ಕಥೆ, ೨) ಕಾದಂಬರಿ, ೩) ಕಾವ್ಯ, ೪)

ನಾಟಕ. ಈ ನಾಲ್ಕು ಪ್ರಕಾರದ ವಾಙ್ಮಯಗಳಿಗೆ ಕಾರಕಗ್ರಹ, ಸ್ಥಾನಾದಿಗಳು ವಿಭಿನ್ನವಿರುತ್ತವೆ. ಆದರೆ ಒಂದು ಸಂಗತಿ ನಿಜ. ಯಾವುದೇ ಪ್ರಕಾರದ ಈ ಸಾಹಿತ್ಯದ ವಿಭಾಗಕ್ಕೆ "ಶುಕ್ರ" ನೇ ಕಾರಕನು. ಏಕೆಂದರೆ ಸಾಹಿತ್ಯವೂ ಒಂದು ಕಲೆಯಿರುತ್ತದೆ. ಈ ಕಲೆ ಕರಗತವಾಗಬೇಕಾದರೆ ಕಲಾಕಾರನಲ್ಲಿ ಕಲಾಕಾರಕ ಗ್ರಹವಾದ ಶುಕ್ರನು ಜಾತಕದಲ್ಲಿ ಪೋಷಕನಿರಲೇಬೇಕು. ಇನ್ನು ವಿವಿಧ ಪ್ರಕಾರದ ಸಾಹಿತ್ಯಕ್ಕೆ ಕಾರಕಗ್ರಹ, ಸ್ಥಾನಾದಿಗಳನ್ನು ಪ್ರತ್ಯೇಕವಾಗಿ ಪರಿಶೀಲಿಸುವಾ.

೧. ಕಥೆ–ಕಾದಂಬರಿ :— ಕಥೆ-ಕಾದಂಬರಿಕಾರನಲ್ಲಿ ಅವಶ್ಯವಾಗಿ ೫ ಮುಖ್ಯ ಗುಣಗಳಿರಬೇಕು. ೧) ತತ್ವಪ್ರಣಾಲಿಕೆ, ೨) ಪಾತ್ರ ರಚನೆಯ ವೈಶಿಷ್ಟ್ಯ, ೩) ತತ್ತ್ವ ಅಥವಾ ವಿಚಾರಪ್ರಣಾಲಿಕೆಯಲ್ಲಿರುವ ಕಲ್ಪನಾಶಕ್ತಿ, ೪) ಭಾಷಾಶೈಲಿ, ೫) ರಸ ನಿರೂಪಣೆ. ಈ ಐದು ಸಂಗತಿಗಳು ಜಾತಕನಲ್ಲಿರಬೇಕಾಗುವುದರಿಂದ ಈ ಮುಂದೆ ಬರೆದ ಸಂಗತಿಗಳು ಜಾತಕದಲ್ಲಿ ಪೋಷಕವಿರಬೇಕು. ಮೊದಲನೆಯದಾಗಿ ಈ ಐದು ಸಂಗತಿಗಳು ಪೋಷಕವಿರಲು ಜಾತಕದಲ್ಲಿ ಶುಕ್ರನು ವೃಷಭ, ಮಿಥುನ, ತುಲಾ, ಕುಂಭ, ಮೀನ ಈ ರಾಶಿಯವನಾಗಿ ಲಗ್ನ, ದ್ವಿತೀಯ, ತೃತೀಯ, ಪಂಚಮ, ಲಾಭದಲ್ಲಿರಬೇಕು. ಎರಡನೆಯದಾಗಿ ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ಕಥೆ–ಕಾದಂಬರಿಕಾರರಿಗೆ ಲಗ್ನ, ತೃತೀಯ, ಪಂಚಮ ಈ ಸ್ಥಾನಗಳು ಪೋಷಕವಿರಬೇಕು. ಏಕೆಂದರೆ ತೃತೀಯಸ್ಥಾನವಿದು ಬರವಣಿಗೆಯ ಸ್ಥಾನವಿರುವದಲ್ಲದೆ ಸ್ಫೂರ್ತಿಕಾರಕ ಸ್ಥಾನವೂ ಇದ್ದು, ಲೇಖನದ ವ್ಯಕ್ತಿಮತ್ವದ ಪ್ರತಿಬಿಂಬದ ಪ್ರಭಾವವು ಈ ಸ್ಥಾನದಿಂದಲೇ ಆಗುತ್ತದೆ. ಸ್ಫೂರ್ತಿಯೇ ಕಥೆ-ಕಾದಂಬರಿಕಾರರಿಗೆ ಇರಬೇಕಾದ ಅವಶ್ಯಕ ಗುಣಧರ್ಮವು. ಆದುದರಿಂದ ತೃತಿಯ ಸ್ಥಾನವೇ ಹೆಚ್ಚು ಕಾರಕವಿರುತ್ತದೆ. ಇದಲ್ಲದೆ ಚತುರ್ಥ ಹಾಗೂ ಲಗ್ನ ಇವು ಮನೋಗುಣಧರ್ಮದ ಸ್ಥಾನಗಳಿರುತ್ತವೆ. ಈ ಸ್ಥಾನಗಳು ಪೋಷಕವಿದ್ದರೆ ಜಾತಕನ ಮನೋಗುಣಧರ್ಮವು ಉತ್ತಮವಿರುತ್ತದೆ. ಮೂರನೆಯದಾಗಿ ಲಗ್ನದ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ವೃಷಭ, ಮಿಥುನ, ಕರ್ಕ, ಸಿಂಹ, ತುಲಾ,

ಮಕರ, ಕುಂಭ ಈ ಲಗ್ನದವರೇ ಉತ್ತಮ ಕಥೆಗಾರರು ಹಾಗೂ ಕಾದಂಬರಿ ಕಾರರಿರುವದು ಕಂಡುಬರುತ್ತದೆ.

೨. ಕಾವ್ಯ: - ಸಾಮಾನ್ಯ ಸಾಹಿತಿಗಳಿಗೆ ಇರಬೇಕಾದ ಗುಣ ಗಳಿಗಿಂತ ಕೆಲವು ವಿಶಿಷ್ಟ ಗುಣಗಳು ಕವಿತೆಯನ್ನು ರಚಿಸುವ ಕವಿಗಳಲ್ಲಿರ ಬೇಕಾಗುತ್ತದೆ. ಅವು ಯಾವವೆಂದರೆ : ೧) ಪ್ರತಿಭೆ (Genius), ೨) ಸ್ಫೂರ್ತಿ (Inspiration), ೩) ಕಲ್ಪನಾಶಕ್ತಿ (Imagination), ೪) ಇಚ್ಛಾಶಕ್ತಿ (Will-power), ೫) ಆತ್ಮೀಯತೆ, ೬) ಅಂತಃ ಶಕ್ತಿ (Intuition) ಇವೇ ಪ್ರಮುಖ ಗುಣಧರ್ಮಗಳಿದ್ದವರು ಕವಿ ಗಳಾಗುವರು.

ಇನ್ನು ಫಲಜ್ಯೋತಿಷ್ಯದ ಮೇರೆಗೆ ಕವಿಗಳಾಗಲು ಜಾತಕದಲ್ಲಿ ಯಾವ ಸಂಗತಿಗಳು ಪೋಷಕವಿರಬೇಕೆಂಬುದನ್ನು ಈ ಮುಂದಿನಂತೆ ಕೊಡಲಾಗಿದೆ.

ಮೊದಲನೆಯದಾಗಿ ಕಲಾಕಾರನೂ ಆತ್ಮೀಯತೆ ಕಾರಕನೂ, ಕಲಾ- ಶಕ್ತಿಯ ಕಾರಕನೂ ಆದ ಶುಕ್ರನು ಜಾತಕದಲ್ಲಿ ಪೋಷಕನಿರಬೇಕು.

ಎರಡನೆಯದಾಗಿ ಕವಿಗಳಿಗೆ ಪ್ರಮುಖ ಪೋಷಕಗ್ರಹವೆಂದರೆ ಚಂದ್ರನು. ಏಕೆಂದರೆ ಕವಿಗಳಲ್ಲಿರಬೇಕಾದ ಮುಖ್ಯ ಗುಣವೆಂದರೆ ಕಲ್ಪನಾ ಶಕ್ತಿ, ಅಂತಃಶಕ್ತಿ, ಸ್ಫೂರ್ತಿ, ಇಚ್ಛಾಶಕ್ತಿ ಈ ಎಲ್ಲ ಗುಣಧರ್ಮಗಳಿಗೆ ಚಂದ್ರನೇ ಕಾರಕನು. ಆದುದರಿಂದ ಜಾತಕದಲ್ಲಿ 'ಚಂದ್ರ'ನು ಪೋಷಕ ನಿರದೆ ಯಾರೂ ಕವಿಯಾಗಲಾರರು.

ಮೂರನೆಯದಾಗಿ ಇವರ ಜಾತಕದಲ್ಲಿ ಲಗ್ನ, ಲಗ್ನೇಶ, ಚತುರ್ಥ, ಚತುರ್ಥೇಶರೇ ಹೆಚ್ಚು ಪೋಷಕರಿರುತ್ತಾರೆ.

ನಾಲ್ಕನೆಯದಾಗಿ ಆವರು ಹೆಚ್ಚಾಗಿ ಮೇಷ, ವೃಷಭ, ಮಿಥುನ, ಕರ್ಕ, ತುಲಾ, ವೃಶ್ಚಿಕ, ಕುಂಭ, ಮೀನ ಈ ಲಗ್ನದವರಿರುತ್ತಾರೆ.

೩. ನಾಟಕ: — ನಾಟಕ ಸಾಹಿತ್ಯದಲ್ಲಿರುವ ವೈಶಿಷ್ಟ್ಯವೆಂದರ ಕಲ್ಪನಾಶಕ್ತಿಗಿಂತ ವಾಸ್ತವಿಕ ಪ್ರವೃತ್ತಿ, ಪರಿಣಾಮಕಾರಿ, ಅರ್ಥಗರ್ಭಿತ ಸಂಭಾಷಣೆಯೇ ಸಾಹಿತ್ಯದ ಜೀವಾಳವಿರುತ್ತದೆ. ಭಾಷೆಯಲ್ಲಿ ಸಾಹಿತ್ಯ

ವಿರದ ವ್ಯವಹಾರದ ಸಂಭಾಷಣೆಯೇ ಹೆಚ್ಚಿರುತ್ತದೆ. ಇದಲ್ಲದೆ ಸಂದರ್ಭ ನಿರ್ಮಾಣಮಾಡುವ ಕಲೆಯೂ ನಾಟಕಕಾರರಲ್ಲಿರಬೇಕಾದ ಅತ್ಯವಶ್ಯವಾದ ಅಗತ್ಯ. ಆದುದರಿಂದ ಉತ್ತಮ ನಾಟಕಕಾರನಾಗಲು ಜಾತಕದಲ್ಲಿ ಈ ಮುಂದಿನ ಸಂಗತಿಗಳು ಪೋಷಕವಿರಬೇಕು.

ಮೊದಲನೆಯದಾಗಿ ಕಥೆಗಾರ-ಕಾದಂಬರಿಕಾರರಿಗೆ ಶುಕ್ರನೇ ಹೆಚ್ಚು ಪೋಷಕನಿರುತ್ತಾನೆ. ಕವಿಗಳಿಗೆ ಚಂದ್ರನೇ ಹೆಚ್ಚು ಪೋಷಕ ಗ್ರಹ ವಾಗಿರುತ್ತಾನೆ. ಆದರೆ ನಾಟಕಕಾರನಿಗೆ ಬುಧನೇ ಹೆಚ್ಚು ಕಾರಕನು. ಏಕೆಂದರೆ ನಾಟಕದಲ್ಲಿರುವ ಸಂಭಾಷಣೆಯೇ ಮಹತ್ವದ ಅಂಶವಿರುವದಲ್ಲದೆ ಜೀವನದ ಪ್ರತಿಬಿಂಬವನ್ನು ದರ್ಶಿಸುವ ಗುಣಧರ್ಮವೂ ನಾಟಕಕಾರನಲ್ಲಿರ ಬೇಕಾಗುತ್ತದೆ. ಈ ಗುಣಧರ್ಮದ ಕಾರಕಗ್ರಹವೆಂದರೆ ಬುಧನು. ಆದುದ ರಿಂದ 'ಬುಧ'ನು ಪೋಷಕನಿರದೆ ಯಾರೂ ನಾಟಕಕಾರರಾಗಲಾರನು.

ಎರಡನೆಯದಾಗಿ ಬುಧನ ತರುವಾಯ ಶುಕ್ರನನ್ನೂ ಪರಿಶೀಲಿಸಬೇಕು.

ಮೂರನೆಯದಾಗಿ ತೃತೀಯ, ಪಂಚಮ ಈ ಸ್ಥಾನಗಳೂ ಹಾಗೂ ಸ್ಥಾನಾಧೀಶರೂ ಪೋಷಕವಿರುವ ಜಾತಕನು ಉತ್ತಮ ನಾಟಕಕಾರನಾಗ ಬಲ್ಲನು.

ನಾಲ್ಕನೆಯದಾಗಿ ಮೇಷ, ವೃಷಭ, ಮಿಥುನ, ಕರ್ಕ, ಸಿಂಹ, ಕನ್ಯಾ, ಮಕರ, ಕುಂಭ ಈ ಲಗ್ನದವರೇ ನಾಟಕಕಾರರಾಗಿರುವದು ಕಂಡುಬರುತ್ತದೆ.

೬. **ಛಾಯಾಗ್ರಹಣ ಕೋರ್ಸ:—** ಈ ಕೋರ್ಸಿನಲ್ಲಿ ಛಾಯಾ ಗ್ರಹಣದ ಮೂಲ ತತ್ತ್ವಗಳು ಇದರ ತಂತ್ರ, ಕ್ಯಾಮರಾದ ಭಾಗಗಳು, ಚಿತ್ರದ ರಚನೆ, ಪ್ರಿಂಟಿಂಗ್, ಎನ್ಲಾರ್ಜಿಂಗ್ ಮೊದಲಾದವುಗಳನ್ನು ಈ ಕೋರ್ಸಿನಲ್ಲಿ ಅಭ್ಯಾಸ ಮಾಡಬೇಕಾಗುತ್ತದೆ. ಎಸ್. ಎಸ್. ಎಲ್. ಸಿ. ಆದವರಿಗೆ ಈ ಕೋರ್ಸಿನಲ್ಲಿ ಪ್ರವೇಶ ಲಭಿಸುತ್ತದೆ. ಇನ್ನು ಫಲಜ್ಯೋತಿಷ್ಯದ ಮೇರೆಗೆ ಈ ಕೋರ್ಸಿನಲ್ಲಿ ತಜ್ಞತೆ ಪಡೆಯಲು ಜಾತಕದಲ್ಲಿ ಈ ಮುಂದೆ ಬರೆದ ಸಂಗತಿಗಳು ಪೋಷಕವಿರಬೇಕು.

ಮೊದಲನೆಯದಾಗಿ ಛಾಯಾಗ್ರಹಣ ಶಿಕ್ಷಣವು ಒಂದು ಕಲೆಯೇ ಇರುವದರಿಂದ ಕಲಾಪೋಷಕ ಕಾರಕಗ್ರಹಗಳಾದ ಶುಕ್ರ-ಚಂದ್ರರು ಜಾತಕ ದಲ್ಲಿ ಪೋಷಕರಿರಬೇಕು.

ಎರಡನೆಯದಾಗಿ ತೃತೀಯ, ಪಂಚಮ ಈ ಸ್ಥಾನಗಳೂ ಹಾಗೂ ಈ ಸ್ಥಾನಾಧೀಶರೂ ಜಾತಕದಲ್ಲಿ ಪೋಷಕರಿರಬೇಕು.

ಮೂರನೆಯದಾಗಿ ಈ ಕೋರ್ಸಿನ ವಿದ್ಯಾರ್ಥಿಗಳು ಹೆಚ್ಚಾಗಿ ಮೇಷ, ವೃಷಭ, ಮಿಥುನ, ಕರ್ಕ, ತುಲಾ, ವೃಶ್ಚಿಕ, ಮಕರ, ಕುಂಭ, ಮೀನ ಈ ಲಗ್ನದವರೇ ಹೆಚ್ಚಾಗಿರುವದು ಕಂಡುಬರುತ್ತದೆ.

ನಾಲ್ಕನೆಯದಾಗಿ ಈ ಕೋರ್ಸಿನ ವಿದ್ಯಾರ್ಥಿಗಳು ವೃಷಭ, ಮಿಥುನ, ಕರ್ಕ, ಕನ್ಯಾ, ತುಲಾ, ಕುಂಭ, ಮೀನ ಈ ರಾಶಿಯವರಿರುವದು ಕಂಡು ಬರುತ್ತದೆ.

೭. ಜ್ಯೋತಿಷ್ಯ :— ಅನೇಕ ಸಂಸ್ಥೆಗಳಲ್ಲಿ, ವಿದ್ಯಾಲಯಗಳಲ್ಲಿ ಜ್ಯೋತಿಷ್ಯದ ಶಿಕ್ಷಣವನ್ನೂ ಕೊಡಲಾಗುತ್ತದೆ. ಈ ಕೋರ್ಸಿನಲ್ಲಿ ತೇರ್ಗಡೆಯಾದ ವಿದ್ಯಾರ್ಥಿಗಳಿಗೆ ರತ್ನ, ಶಿರೋಮಣಿ, ವಿದ್ವಾನ್, ಭೂಷಣ, ಪಂಡಿತ, ಆಚಾರ್ಯ, ಶಾಸ್ತ್ರೀ, ಪಾರಂಗತ ಮೊದಲಾದ ಪದವಿಗಳನ್ನು ಕೊಡಲಾಗುತ್ತದೆ. ಇನ್ನು ಫಲಜ್ಯೋತಿಷ್ಯದಲ್ಲಿ ಈ ಕೋರ್ಸಿನಲ್ಲಿ ತಜ್ಞತೆ ಪಡೆಯಲು ಜಾತಕ ಹೇಗಿರಬೇಕೆಂಬುದನ್ನು ಈ ಮುಂದಿನಂತೆ ಕೊಡಲಾಗಿದೆ.

ಮೊದಲನೆಯದಾಗಿ ಈ ಶಾಸ್ತ್ರವು ವೇದಾಂಗದಲ್ಲಿ ಬರುವದರಿಂದ ವೇದಗಳ ಕಾರಕಗ್ರಹವಾದ ಗುರುವೂ ಪೋಷಕನಿರಬೇಕು. ಇದಲ್ಲದೆ ಜ್ಯೋತಿಷ್ಯವು ಲಲಿತಕಲೆಗಳಲ್ಲಿ ಒಂದಾಗಿರುವದರಿಂದ ಕಲೆಗಳ ಕಾರಕಗ್ರಹವಾದ ಶುಕ್ರನೂ ಪೋಷಕನಿರಬೇಕು.

ಎರಡನೆಯದಾಗಿ ಲಗ್ನ, ದ್ವಿತೀಯ, ಪಂಚಮ ಈ ಸ್ಥಾನಗಳು ಹಾಗೂ ಸ್ಥಾನಾಧೀಶರೂ ಪೋಷಕರಿರುವ ವಿದ್ಯಾರ್ಥಿಗಳು ಈ ಕೋರ್ಸಿನಲ್ಲಿ ತಜ್ಞತೆ ಪಡೆಯುತ್ತಾರೆ.

ಮೂರನೆಯದಾಗಿ ಈ ಕೋರ್ಸಿನ ವಿದ್ಯಾರ್ಥಿಗಳು ಹೆಚ್ಚಾಗಿ ಮೇಷ, ವೃಷಭ, ಮಿಥುನ, ಕರ್ಕ, ಸಿಂಹ, ತುಲಾ, ವೃಶ್ಚಿಕ, ಧನು, ಕುಂಭ ಈ ಲಗ್ನದವರೇ ಇರುವದು ಕಂಡುಬರುತ್ತದೆ.

## ೧೪. ವೈದಿಕ ಶಿಕ್ಷಣ ಕೋರ್ಸುಗಳು

ಭಾರತದ ಪ್ರಾಚೀನತೆಯನ್ನು ಇಂದು ನಾವು ಉಳಿಸಿಕೊಂಡಿದ್ದರೆ ಅದರ ಶ್ರೇಯಸ್ಸು ವೈದಿಕ ಶಿಕ್ಷಣ ಸಂಪ್ರದಾಯದ ಉಳಿಯುವಿಕೆಗೆ ಸಲ್ಲುತ್ತದೆ. ನಮ್ಮ ಸಾಂಸ್ಕೃತಿಕ ಚೈತನ್ಯ ಇಂದು ಉಳಿದಿದ್ದರೆ ಅದು ನಮ್ಮ ವೈದಿಕ ಭಾಂಡಾರಕ್ಕೆ ಸಲ್ಲುತ್ತದೆ. ಈ ವೈದಿಕ ಶಿಕ್ಷಣಕ್ಕೆ ಒಂದು ಕ್ರಮಬದ್ಧ ವ್ಯಾಸಂಗ ಜಾರಿಗೆ ಬಂದಿದೆ.

ವೈದಿಕ ಶಿಕ್ಷಣದ ವ್ಯಾಸಂಗ ಮಾಡುವ ಪೂರ್ವದಲ್ಲಿ ಸಂಸ್ಕೃತದ ಎಲ್ಲ ಪ್ರಾಥಮಿಕ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿರಬೇಕಾಗುತ್ತದೆ. ಈ ಸಂಸ್ಕೃತ ಕೋರ್ಸುಗಳನ್ನು ಖಾಸಗೀ ಸಂಸ್ಕೃತ ಪಾಠಶಾಲೆಗಳು ನಡೆಸುತ್ತವೆ. ಸಂಸ್ಕೃತ ಪ್ರಥಮ, ಕಾವ್ಯ, ಸಾಹಿತ್ಯ ಮೊದಲಾದ ಪರೀಕ್ಷೆಗಳನ್ನು ಉತ್ತೀರ್ಣರಾದ ನಂತರ ತರ್ಕ, ನ್ಯಾಯ, ಮೀಮಾಂಸೆ, ವೇದ, ಆಗಮ, ಆಯುರ್ವೇದ, ಜ್ಯೋತಿಷ್ಯ, ವೇದಾಂತ ಮೊದಲಾದ ವಿಷಯಗಳಲ್ಲಿ ಅಭ್ಯಾಸ ಮಾಡಬೇಕಾಗುತ್ತದೆ. ಈ ವಿಷಯಗಳಲ್ಲಿಯೂ ಅನೇಕ ಉಪ ವಿಷಯಗಳಿವೆ. ಉದಾಹರಣೆಗೆ:— ವೇದಾಂತದಲ್ಲಿ ದ್ವೈತ, ಅದ್ವೈತ, ವಿಶಿಷ್ಟಾದ್ವೈತ, ಶಕ್ತಿ ವಿಶಿಷ್ಟಾದ್ವೈತ ಹೀಗೆ ಉಪವಿಷಯಗಳಿರುತ್ತವೆ.

ಈ ವಿಷಯಗಳ ಪರೀಕ್ಷೆಯಲ್ಲಿಯೂ ಭಾರತಾದ್ಯಂತ ಏಕಮಾದರಿಯಿರುವದಿಲ್ಲ. ಈ ಪರೀಕ್ಷೆಗಳಲ್ಲಿ ಉತ್ತೀರ್ಣರಾದವರಿಗೆ ಒಂದೊಂದೆಡೆ ಒಂದೊಂದು ವಿಧವಾದ ಪದವಿಗಳನ್ನು ಕೊಡಲಾಗುತ್ತದೆ. ಮದ್ರಾಸದಲ್ಲಿ ಶಿರೋಮಣಿ ಪದವಿಯಿದ್ದರೆ ಮೈಸೂರಿನಲ್ಲಿ ಇವೇ ವಿಷಯಗಳ ವಿದ್ವಾನ್ ಪದವಿಯನ್ನು ಕೊಡಲಾಗುತ್ತದೆ. ಬನಾರಸದಲ್ಲಿ ಆಚಾರ್ಯ, ಶಾಸ್ತ್ರೀ ಪದವಿಗಳನ್ನು ಕೊಡುತ್ತಾರೆ. ಕೆಲವೆಡೆಯಲ್ಲಿ ಪಾರಂಗತ, ಮಹಾಮಹೋಪಾಧ್ಯಾಯ, ರತ್ನ ಮೊದಲಾದವುಗಳನ್ನು ಕೊಡಲಾಗುತ್ತದೆ. ಈ ಕೋರ್ಸುಗಳ ವ್ಯಾಸಂಗದ ಅವಧಿಯು ಈ ಹಿಂದೆ ೧೨ ವರ್ಷಗಳಿದ್ದರೆ ಈಗ ಇವರ ಅವಧಿ ಕಡಿಮೆಯಾಗಿದೆಯೆನ್ನಲಾಗುತ್ತದೆ. ಇನ್ನೊಂದು ಈ ಕೋರ್ಸಿನ ಹಿನ್ನೆಲೆಯಲ್ಲಿ ಈ ಕೋರ್ಸಿನ ವಿಷಯವಾಗಿ ಜ್ಯೋತಿಷ್ಯದ ವಿಚಾರವೇನೆಂಬುದನ್ನು ಪರಿಶೀಲಿಸುವಾ.

ಕಾರಕಗ್ರಹ :— ಈ ಕೋರ್ಸಿನ ಕಾರಕಗ್ರಹವೆಂದರೆ ಗುರುವು. ಏಕೆಂದರೆ ಈ ಕೋರ್ಸಿನ ಮುಖ್ಯ ವಿಷಯಗಳಾದ ಸಂಸ್ಕೃತ, ನ್ಯಾಯ, ತರ್ಕ, ವೇದ, ಮೀಮಾಂಸೆ, ಆಗಮ, ಆಯುರ್ವೇದ, ವೇದಾಂತ, ಸ್ಮೃತಿ ಮೊದಲಾದ ವಿಷಯಗಳ ಮೇಲೆ ಗುರುವಿನ ಪ್ರಭುತ್ವವಿರುವದರಿಂದ ಗುರುವೇ ಈ ಕೋರ್ಸಿನ ಕಾರಕಗ್ರಹ ಇರುವನು. ಗುರುವು ಪೋಷಕ ನಿರದೆ ಯಾವ ವಿದ್ಯಾರ್ಥಿಯೂ ಈ ಕೋರ್ಸಿನಲ್ಲಿ ತಜ್ಞತೆ ಪಡೆಯಲಾರನು. ಗುರುವಿನ ತರುವಾಯ ಶನಿಯನ್ನೂ ಪರಿಶೀಲಿಸಬೇಕು.

ಸ್ಥಾನ:—ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ಈ ಕೋರ್ಸಿನ ಮುಖ್ಯ ಕಾರಕಸ್ಥಾನವೆಂದರೆ ಪಂಚಮವು, ನಂತರ ದ್ವಿತೀಯ ಸ್ಥಾನವು. ಆದುದರಿಂದ ಈ ಸ್ಥಾನಗಳೂ ಹಾಗೂ ಈ ಸ್ಥಾನಾಧೀಶರೂ ಜಾತಕದಲ್ಲಿ ಪೋಷಕರಿದ್ದ ವಿದ್ಯಾರ್ಥಿಗಳು ಈ ಕೋರ್ಸಿನಲ್ಲಿ ತಜ್ಞತೆ ಪಡೆಯುತ್ತಾರೆ.

ಲಗ್ನ: ಲಗ್ನದ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ವೃಷಭ, ಮಿಥುನ, ಸಿಂಹ, ವೃಶ್ಚಿಕ, ಕುಂಭ, ಮೀನ ಈ ಲಗ್ನದವರೇ ಈ ಕೋರ್ಸಿನಲ್ಲಿ ತಜ್ಞರಿರುವದು ಕಂಡುಬರುತ್ತದೆ.

ರಾಶಿ:—ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ಮಿಥುನ, ಕರ್ಕ, ತುಲಾ, ಧನು, ಮಕರ, ಸಿಂಹ, ಕುಂಭ, ಮೀನ ಈ ರಾಶಿಯವರೇ ಹೆಚ್ಚಾಗಿರುವದು ಕಂಡುಬರುತ್ತದೆ.

## ೧೫. ಗೃಹವಿಜ್ಞಾನ ಪದವಿಯ ಕೋರ್ಸುಗಳು

ಗೃಹವಿಜ್ಞಾನ (Home Science) ಎಂದರೆ ಅಡಿಗೆ ಕಲಿಸುವ ಕೋರ್ಸು ಎಂಬ ತಪ್ಪು ಕಲ್ಪನೆ ಅನೇಕರಲ್ಲಿದೆ. ಗೃಹ ವಿಜ್ಞಾನವು ಕೇವಲ ಅಡಿಗೆ ಮಾಡುವಿಕೆಯಲ್ಲ ಎಂಬ ವಿಷಯವನ್ನು ನಾವು ಗೃಹ ವಿಜ್ಞಾನ ಪದವಿಯ ಕೋರ್ಸಿನ ವಿವೇಚನೆ ಮಾಡಿದಾಗ ಅರಿಯುತ್ತೇವೆ. ಎಸ್. ಎಸ್. ಎಲ್. ಸಿ. ಯಲ್ಲಿ ಉತ್ತೀರ್ಣರಾದ ವಿದ್ಯಾರ್ಥಿಸಿಗೆ ಪಿ. ಯು. ಸಿ. (ಗೃಹವಿಜ್ಞಾನದ) ಕೋರ್ಸಿಗೆ ಪ್ರವೇಶಾರ್ಹತೆ ಸಿಗುತ್ತದೆ. ಈ ವಿದ್ಯಾರ್ಥಿಸಿ ಪಿ. ಯು. ಸಿ. ಯಲ್ಲಿ ಇತರ ಪಿ. ಯು. ಸಿ. ವಿದ್ಯಾರ್ಥಿ-

ವಿದ್ಯಾರ್ಥಿನಿಯರು ಕಲಿಯುವ ಇತರ ವಿಷಯಗಳಾದ ಇಂಗ್ಲೀಷ್ ಹಾಗೂ ಇತರ ಭಾರತೀಯ ಒಂದು ಭಾಷೆ, ಭೌತಶಾಸ್ತ್ರ, ರಸಾಯನಶಾಸ್ತ್ರ, ಜೀವಶಾಸ್ತ್ರ ಮೊದಲಾದ ವಿಷಯಗಳನ್ನು ಅಭ್ಯಾಸ ಮಾಡುವದರೊಡನೆ ಗಣಿತದ ವಿಷಯಕ್ಕೆ ಬದಲಾಗಿ ಗೃಹವಿಜ್ಞಾನ ತೆಗೆದುಕೊಳ್ಳಬೇಕಾಗುತ್ತದೆ. ಬಿ. ಎಸ್‌ಸಿ. ೧ (ಗೃಹವಿಜ್ಞಾನ) ಕೋರ್ಸಿಗೆ ಬಿ. ಗುಂಪಿನ ವಿದ್ಯಾರ್ಥಿ-ವಿದ್ಯಾರ್ಥಿನಿಯರು ಓದುವ ಇತರ ವಿಷಯಗಳು ಸಾಮಾನ್ಯವಾಗಿದ್ದು ಗೃಹವಿಜ್ಞಾನ ಅಭ್ಯಾಸಿಗಳು ಜೀವಶಾಸ್ತ್ರಕ್ಕೆ ಬದಲು ಅಣುಸಜೀವ ಶಾಸ್ತ್ರವನ್ನು, ಭೌತಶಾಸ್ತ್ರಕ್ಕೆ ಬದಲು ಗೃಹವಿಜ್ಞಾನಶಾಸ್ತ್ರವನ್ನೂ ಕಲಿಯುತ್ತಾರೆ. ಅಂತೆಯೇ ಬಿ. ಎಸ್‌ಸಿ. ೨ ಹಾಗೂ ೩ರಲ್ಲಿ ಗೃಹವಿಜ್ಞಾನ ಅಭ್ಯಾಸಿಗಳು ಗೃಹವಿಜ್ಞಾನವನ್ನು ಪ್ರಧಾನ (Major) ಐಚ್ಛಿಕ ವಿಷಯವನ್ನಾಗಿ ಅಭ್ಯಸಿಸುತ್ತಾರೆ. ಪಿ. ಯು. ಸಿ. (ಗೃಹವಿಜ್ಞಾನ) ಯಲ್ಲಿ ತೇರ್ಗಡೆಯಾದವರಿಗೆ ವೈದ್ಯಕೀಯ ಪದವಿ ಕೋರ್ಸುಗಳಾದ ಎಮ್. ಬಿ. ಬಿ. ಎಸ್. ಕೋರ್ಸಿಗೂ ಪ್ರವೇಶಾರ್ಹತೆ ಇರುವದು ಒಂದು ವಿಶೇಷ ಸೌಲಭ್ಯವೆನ್ನಬಹುದು.

ಗೃಹವಿಜ್ಞಾನ ಕೋರ್ಸಿನ ವೈಶಿಷ್ಟ್ಯವೆಂದರೆ ಆಹಾರ, ಪೌಷ್ಟಿಕತೆ, ಮನೆಯಾಡಳಿತೆ, ಗೃಹ ಅರ್ಥಶಾಸ್ತ್ರ, ಮಕ್ಕಳ ಸಂರಕ್ಷಣೆ, ಜೀವ ಕಾರ್ಯಶಾಸ್ತ್ರ, ಕ್ರಿಮಿಕೀಟಕಶಾಸ್ತ್ರ, ರೋಗ, ಆಹಾರ ಸಂರಕ್ಷಣೆ ಮೊದಲಾದ ವಿಷಯಗಳನ್ನು ಈ ಕೋರ್ಸಿನಲ್ಲಿ ಅಭ್ಯಾಸ ಮಾಡಬೇಕಾಗುತ್ತದೆ. ಒಟ್ಟಿನಲ್ಲಿ ಮನೆಯನ್ನು ಆರೋಗ್ಯಕರವಾಗಿ, ವೈಜ್ಞಾನಿಕವಾಗಿ, ಮಿತವ್ಯಯದಿಂದ ಗೌರಯುತವಾಗಿ ಹೇಗೆ ನಡೆಸಬೇಕೆಂಬುದರ ಪೂರ್ಣ ವ್ಯಾಸಂಗ ಇಲ್ಲಿ ದೊರೆಯುತ್ತದೆ. ಇಂಥ ಉಪಯುಕ್ತ ಕೋರ್ಸಿನ ವಿಷಯವಾಗಿ ಜ್ಯೋತಿಷ್ಯದ ವಿಚಾರವೇನು, ಕಾರಕಗ್ರಹ, ಲಗ್ನ, ಸ್ಥಾನಾದಿಗಳಾವವು ಎಂಬುದನ್ನು ಪರಿಶೀಲಿಸುವಾ.

**ಕಾರಕಗ್ರಹ:—** ಈ ಕೋರ್ಸಿನ ಕಾರಕಗ್ರಹವೆಂದರೆ ಶುಕ್ರ-ಚಂದ್ರರು. ಏಕೆಂದರೆ ಈ ಕೋರ್ಸಿನ ಮುಖ್ಯ ವಿಷಯಗಳಾದ ಮನೆಯಾಡಳಿತೆ ಹಾಗೂ ಗೃಹ ಅರ್ಥಶಾಸ್ತ್ರ ಮೊದಲಾದ ವಿಷಯಗಳ ಮೇಲೆ ಶುಕ್ರನ ಆಧಿಪತ್ಯ

ವಿರುತ್ತದೆ. ಇದರಂತೆ ಮಕ್ಕಳ ಸಂರಕ್ಷಣೆ, ಆಹಾರ ಪೌಷ್ಟಿಕತೆ, ಆಹಾರ ಸಂರಕ್ಷಣೆಗಳ ಮೇಲೆ ಚಂದ್ರನ ಆಧಿಪತ್ಯವಿರುತ್ತದೆ. ಒಟ್ಟಿನಲ್ಲಿ ಗೃಹ ಎಂದರೆ ಶುಕ್ರ, ಮಕ್ಕಳ ಸಂರಕ್ಷಣೆ ಹಾಗೂ ಆಹಾರದ ವಿಷಯವೆಂದರೆ ಚಂದ್ರ ಇವರು ಕಾರಕರಿರುತ್ತಾರೆ. ಆದುದರಿಂದ ಚಂದ್ರ-ಶುಕ್ರರು ಪೋಷಕ ರಿರದೆ ಯಾವ ವಿದ್ಯಾರ್ಥಿಯೂ ಈ ಕೋರ್ಸಿನಲ್ಲಿ ತಜ್ಞತೆ ಪಡೆಯಲಾರರು. ಚಂದ್ರ-ಶುಕ್ರರ ತರುವಾಯ ಬುಧ-ಶನಿಯರನ್ನು ಪರಿಶೀಲಿಸಬೇಕು. ಏಕೆಂದರೆ ಈ ಕೋರ್ಸಿನಲ್ಲಿ ಕಲಿಯಬೇಕಾದ ರಸಾಯನಶಾಸ್ತ್ರ, ಗೃಹ ಅರ್ಥ ಶಾಸ್ತ್ರ ಈ ವಿಷಯಗಳಿಗೆ ಶನಿ-ಬುಧರು ಕಾರಕರಿರುತ್ತಾರೆ.

ಸ್ಥಾನ :— ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ಈ ಕೋರ್ಸಿನಲ್ಲಿ ಥೇರಿಗಿಂತ ಪ್ರಾತ್ಯಕ್ಷಿಕೆಯನ್ನೇ ಹೆಚ್ಚು ಕಲಿಯಬೇಕಾಗುವದರಿಂದ ತೃತೀಯ ಸ್ಥಾನವೂ ಗೃಹಾಡಳಿತೆಯ ಸ್ಥಾನವಾದ ಚತುರ್ಥ-ಸಪ್ತಮ ಸ್ಥಾನಗಳೂ ಈ ಕೋರ್ಸಿನ ಕಾ-ಕಸ್ಥಾನಗಳಿರುತ್ತವೆ. ಆದುದರಿಂದ ಈ ಸ್ಥಾನಗಳೂ ಹಾಗೂ ಈ ಸ್ಥಾನಾಧೀಶರೂ ಜಾತಕದಲ್ಲಿ ಪೋಷಕರಿರಬೇಕು.

ಲಗ್ನ :— ಲಗ್ನದ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ವೃಷಭ, ಕರ್ಕ, ಕನ್ಯಾ, ತುಲಾ, ವೃಶ್ಚಿಕ, ಮಕರ, ಕುಂಭ, ಮೀನ ಈ ಲಗ್ನದವರು ಈ ಕೋರ್ಸಿನಲ್ಲಿ ಪ್ರವೀಣರಿದ್ದುದು ಕಂಡುಬರುತ್ತದೆ.

ರಾಶಿ :— ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ವೃಷಭ, ಮಿಥುನ, ಕರ್ಕ, ಕನ್ಯಾ, ತುಲಾ, ಕುಂಭ, ಮೀನ ಈ ರಾಶಿಯವರೇ ತಜ್ಞರಿರುವದು ಕಂಡುಬರುತ್ತದೆ.

ಯೋಗ :— ಈ ಕೋರ್ಸಿನಲ್ಲಿ ತಜ್ಞತೆ ಪಡೆಯಲು ಜಾತಕದಲ್ಲಿರ ಬೇಕಾದ ವೈಶಿಷ್ಟ್ಯವೆಂದರೆ :

೧) ಅನೇಕ ಗ್ರಹಗಳು ಸ್ತ್ರೀರಾಶಿಯಲ್ಲಿರುತ್ತವೆ,

೨) ಚಂದ್ರ-ಶುಕ್ರರು ಹೆಚ್ಚಾಗಿ ವೃಷಭ, ಕರ್ಕ, ಮಿಥುನ, ಕನ್ಯಾ, ತುಲಾ, ಮಕರ, ಕುಂಭ, ಮೀನ ಈ ರಾಶಿಯಲ್ಲಿರುತ್ತಾರೆ.

೩) ಚತುರ್ಥೇಶ, ಸಪ್ತಮೇಶರು ಶುಭಗ್ರಹದವರಿರುತ್ತಾರೆ.

೪) ಚತುರ್ಥ, ಸಪ್ತಮ ಸ್ಥಾನಗಳಲ್ಲಿ ಶುಭಗ್ರಹಗಳಿರುತ್ತಾರೆ.

೫) ರವಿ–ಮಂಗಳರಿಗಿಂತ ಶುಕ್ರ–ಚಂದ್ರರು ಜಾತಕದಲ್ಲಿ ಬಲಾಢ್ಯರಿರು ತ್ತಾರೆ.

ಹೀಗೆ ಮೇಲೆ ಬರೆದ ಐದು ಸಂಗತಿಗಳು ಪೋಷಕವಿದ್ದ ವಿದ್ಯಾರ್ಥಿನಿಯರು ಈ ಕೋರ್ಸಿನಲ್ಲಿ ತಜ್ಞತೆ ಪಡೆಯುತ್ತಾರೆ.

## ೧೭. ಕೈಗಾರಿಕೆ ಶಿಕ್ಷಣ (Craft Education)

ರಾಷ್ಟ್ರದ ಸರ್ವತೋಮುಖ ಪ್ರಗತಿಗೆ ಕೇವಲ ಇಂಜನಿಯರಿಂಗ್ ಪದವೀಧರರು, ಡಿಪ್ಲೋಮಾಧಾರಿಗಳು, ವೈಜ್ಞಾನಿಕ ಪದವೀಧರರೂ ಆದರೆ ಸಾಲದು. ಕುಶಲ ಕೈಗಾರಿಕೆಯಲ್ಲಿ ತೊಡಗಿ ತಜ್ಞರ ಕಾರ್ಯದಲ್ಲಿ ಸಹಕರಿಸುವ ಕೈಗಾರಿಕಾ ತಜ್ಞರೂ ಬೇಕು. ಈ ದೃಷ್ಟಿಯಿಂದ ಕೈಗಾರಿಕಾ ಶಿಕ್ಷಣದ ಕೋರ್ಸುಗಳು ಹೆಚ್ಚು ಜನಪ್ರಿಯವಾಗಹತ್ತಿವೆ. ಈ ಕೋರ್ಸನ್ನು ಎರಡು ಹಂತಗಳಲ್ಲಿ ವಿವೇಚಿಸಬಹುದು. ಮಾಧ್ಯಮಿಕ ಶಾಲೆಗಳಲ್ಲಿ ಸಾಮಾನ್ಯ ಶಿಕ್ಷಣದ ವಿಷಯದೊಡನೆ ಐಚ್ಛಿಕ ವಿಷಯವನ್ನಾಗಿ ಈ ಕೈಗಾರಿಕೆಯ ಶಿಕ್ಷಣದ ವಿಷಯಗಳ ವ್ಯಾಸಂಗವನ್ನು ಮಾಡುವದು ಒಂದು ಬಗೆಯ ಅವಕಾಶವಿದ್ದರೆ, ಈ ಕೈಗಾರಿಕಾ ಶಿಕ್ಷಣದ ವಿಷಯಗಳಿಗಾಗಿಯೇ ಪ್ರತ್ಯೇಕವಾಗಿ ತಾಂತ್ರಿಕ ಶಾಲೆಗಳು ಅಲ್ಲಲ್ಲಿ ತೆರೆಯಲ್ಪಟ್ಟಿದ್ದು ಅಲ್ಪಾವಧಿಯ ಸರ್ಟಿಫಿಕೇಟ್ ಕೋರ್ಸಿನ ವ್ಯಾಸಂಗ ಸೌಲಭ್ಯದ ಎರಡನೆಯ ಬಗೆಯಿರುತ್ತದೆ. ಮಾಧ್ಯಮಿಕ ಶಾಲೆಗಳಲ್ಲಿ ಐಚ್ಛಿಕ ವಿಷಯವಾಗಿ ತೆಗೆದುಕೊಳ್ಳಲು ಶಿಕ್ಷಣ ಕ್ಷೇತ್ರದಲ್ಲಿ ಅವಕಾಶ ಮಾಡಿಕೊಡಲಾಗಿದೆ. ಇಲ್ಲೊಂದು ಹಿನ್ನೆಲೆಯ ಈ ಕೋರ್ಸಿನ ವಿಷಯವಾಗಿ ಜ್ಯೋತಿಷ್ಯದ ವಿಚಾರವೇನು ಎಂಬುದನ್ನು ಪರಿಶೀಲಿಸುವಾ.

ಕೈಗಾರಿಕೆ ಶಿಕ್ಷಣದ ಕೋರ್ಸಿಗೆ ಕಾರಕಗ್ರಹ ಯಾವುದು ಎಂದು ಪ್ರಶ್ನಿಸಿದರೆ ಉತ್ತರ ಕೊಡುವದು ಕಠಿಣ. ಏಕೆಂದರೆ ಈ ಕೋರ್ಸಿನಲ್ಲಿ ಅಸಂಖ್ಯ ಪ್ರಕಾರದ ಕೈಗಾರಿಕೆಯ ಶಿಕ್ಷಣವಿರುವದರಿಂದ ನಿರ್ದಿಷ್ಟ

ಗ್ರಹವೇ ಕಾರಕವೆಂದು ಹೇಳುವದು ಕಠಿಣ. ಇದೂ ಅಲ್ಲದೆ ಇದೊಂದೇ ಕೋರ್ಸಿನ ವಿಷಯವಾಗಿ ಪ್ರತ್ಯೇಕವಾಗಿ, ಸ್ವತಂತ್ರ ಪುಸ್ತಕವನ್ನು ಬರೆಯುವಷ್ಟು ಇದರ ವ್ಯಾಪ್ತಿಯಿರುತ್ತದೆ. ಆದುದರಿಂದ ನಾವು ಸ್ಥೂಲವಾಗಿ ಪರಿಶೀಲಿಸಿದ್ದು ಪ್ರಥಮವಾಗಿ ಈ ಕೋರ್ಸಿನಲ್ಲಿರುವ ವಿಷಯಗಳನ್ನು ಮೊದಲು ಪರಿಶೀಲಿಸುವಾ.

ಕೈಗಾರಿಕಾ ಶಿಕ್ಷಣಗಳ ವಿಷಯಗಳು:— ಕೈಮಗ್ಗ, ನೇಯ್ಗೆ, ಮರಗೆಲಸ, ಹೊಲಿಗೆಯ ಕೆಲಸ, ಕಮ್ಮಾರಿಕೆ, ಯಂತ್ರ ಜೋಡಣೆ, ಮುದ್ರಣ ಕೆಲಸ, ಮತ್ತು ಪುಸ್ತಕ ಕಟ್ಟುವಿಕೆ, ವರ್ಣನ ಹಾಗೂ ಆರಿವೆ ಗೊಂಬೆ ತಯಾರಿಕೆ, ಲೋಹದ ಕೆಲಸ, ಫೋಟೋ ಕೆಲಸ, ಛಾಯಾ ಗ್ರಹಣ, ಚರ್ಮದ ಕೆಲಸ, ವಿದ್ಯುತ್ ವೈರಮನ್, ಕಡ್ಡಿಪೆಟ್ಟಿಗೆ, ಮಾದರಿಗಳ ತಯಾರಿಕೆ, ಸಿಗರೇಟ್-ತಂಬಾಕದ ಕೆಲಸ, ಸೋಪು, ಕಾಗದ ಮೊದಲಾದವುಗಳ ತಯಾರಿಕೆ, ಕಂಬಳಿ, ಚಾಪೆ, ಚಿತ್ರ ಮೊದಲಾದವುಗಳ ಕೆಲಸ, ತೆಂಗಿನ ಚಿಪ್ಪಿನ ಕೆಲಸ, ಹಗ್ಗ-ನೂಲು ತಯಾರಿಕೆ, ಗಂಧದ ಕೆಲಸ, ಕುಂಬಾರಿಕೆ ಕೆಲಸ, ಪಾತ್ರೆ ತಯಾರಿಕೆ, ಎಣ್ಣೆ ತಯಾರಿಕೆ, ರಬ್ಬರ ಸ್ಟಾಂಪ್ ತಯಾರಿಕೆ— ಹೀಗೆ ಅನೇಕ ವಿಷಯಗಳನ್ನು ಇಲ್ಲಿ ಕಲಿಸಲಾಗುತ್ತಿದ್ದು ಒಂದು ವೈಶಿಷ್ಟ್ಯವೆಂದರೆ ತತ್ವದ ತರಗತಿಗಿಂತಲೂ ಪ್ರಾಯೋಗಿಕ ತರಗತಿಗಳಿಗೇ ಹೆಚ್ಚು ಮಹತ್ವ ಕೊಡಲಾಗಿದೆ. ಇಷ್ಟೊಂದು ವಿಷಯಗಳ ಬಗ್ಗೆ ಕಾರಕಗ್ರಹ ಯಾವದು ಎಂಬುದನ್ನು ಪರಿಶೀಲಿಸೋಣ.

ಕಾರಕಗ್ರಹ:— ಮೇಲೆ ಬರೆದ ಅನೇಕ ವಿಷಯಗಳದ್ದಾಗ್ಯೂ ಕೂಡ ನಾವು ಈ ಕೋರ್ಸಿನ ಶಿಕ್ಷಣವನ್ನು ಎರಡು ವಿಧವಾಗಿ ವಿಂಗಡಿಸಬಹುದು: ೧) ಕಲಾಕಾರ ವರ್ಗ, ೨) ಕುಶಲ ಕೈಗಾರಿಕಾ ಕಾರ್ಮಿಕ ವರ್ಗ. ಉದಾಹರಣೆಗಾಗಿ:—ಬಡಿಗತನದ ಕೆಲಸ, ಗೊಂಬೆಯ ಕೆಲಸ, ಗಂಧದ ಕೆಲಸ, ಟೆಕ್ಸಡೈರ್ಸ್ ಶಿಕ್ಷಣ ಈ ಮೊದಲಾದ ಕೈಗಾರಿಕಾ ಶಿಕ್ಷಣವು ಕಲಾವರ್ಗದಲ್ಲಿ ಬರುತ್ತದೆ. ಆದುದರಿಂದ ಇಂಥ ಕೋರ್ಸಿಗೆ ಶುಕ್ರ-ಚಂದ್ರರು ಕಾರಕರು. ಇದರಂತೆ ಕಮ್ಮಾರಿಕೆ, ಚರ್ಮದ ಕೆಲಸ ಮೊದಲಾದ ಶಿಕ್ಷಣಗಳಿಗೆ ಶನಿಯು ಕಾರಕನು. ಹೀಗೆ ಈ ಕೋರ್ಸಿಗೆ ಶುಕ್ರ-ಚಂದ್ರ-ಶನಿ ಈ ಮೂರು ಗ್ರಹಗಳು ಕಾರಕಗ್ರಹಗಳಿರುತ್ತವೆ.

ಲಗ್ನ:— ಲಗ್ನದ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ವೃಷಭ, ಮಿಥುನ, ಕರ್ಕ, ತುಲಾ, ಮಕರ, ಕುಂಭ, ಮೀನ ಈ ಲಗ್ನದವರೇ ಹೆಚ್ಚಾಗಿರುತ್ತಾರೆ.

ಸ್ಥಾನ:—ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ತೃತೀಯ ಹಾಗೂ ಷಷ್ಠ ಈ ಸ್ಥಾನಗಳೇ ಈ ಕೋರ್ಸಿನ ಕಾರಕಸ್ಥಾನಗಳಿರುವದರಿಂದ ಈ ಸ್ಥಾನಾಧೀಶರೂ ಹಾಗೂ ಈ ಸ್ಥಾನಗಳೂ ಪೋಷಕವಿರಬೇಕು.

ರಾಶಿ:—ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ನಿರ್ದಿಷ್ಟ ರಾಶಿಯವರೇ ಈ ಶಿಕ್ಷಣ ಪಡೆಯುವರೆಂದು ಹೇಳಲು ಬಾರದು.



## ೪. ಪರೀಕ್ಷೆ ಹಾಗೂ ಫಲಿತಾಂಶಗಳ ವಿಚಾರ

ಶಿಕ್ಷಣದಲ್ಲಿ ಯಾವುದೇ ಕೋರ್ಸಿಗೆ ವ್ಯಾಸಂಗ ಪ್ರಾರಂಭಿಸಿದರೆ ಅದರಲ್ಲಿ ಪರೀಕ್ಷೆಗೆ ಕೂಡ್ರುವದು, ನಂತರ ಉತ್ತೀರ್ಣರಾಗುವದು, ಅದರಲ್ಲಿಯೂ ದರ್ಜೆ, ಕ್ಲಾಸ್, ರ್‍ಯಾಂಕ್, ಪ್ರಶಸ್ತಿಗಳನ್ನು, ಪದಕಗಳನ್ನು ಪಡೆಯುವದು ಎಂಬುವು ಮುಖ್ಯ ಹಾಗೂ ಹೊಸ ಸಮಸ್ಯೆಗಳಿರುತ್ತವೆ. ಈ ದೃಷ್ಟಿಯಿಂದ ಶಿಕ್ಷಣ ಜ್ಯೋತಿಷ್ಯದಲ್ಲಿ ಇದು ಮಹತ್ವದ ಅಂಶವಿರುತ್ತದೆ. ಈ ವಿಷಯಗಳಲ್ಲಿ ಪರೀಕ್ಷೆಗೆ ಕೂಡ್ರಬೇಕಾದರೆ ಯಾವ ಸ್ಥಾನ ಹಾಗೂ ಯಾವ ಗ್ರಹಗಳು ಹೇಗೆ ಹೇಗೆ ಪ್ರಭಾವ ಬೀರುತ್ತವೆ, ಅವುಗಳಲ್ಲಿ ಯಾವದು ಲಾಭಕರ, ಯಾವದು ಹಾನಿಕರ ಎಂಬುದರ ವಿಚಾರಗಳೊಡನೆ ಪರೀಕ್ಷೆಗಳ ಫಲಿತಾಂಶದ ಸಮಯದಲ್ಲಿ ಪರೀಕ್ಷಾರ್ಥಿ-ಜಾತಕನ ಜಾತಕಕ್ಕೂ, ಆ ಸಮಯದ ಗ್ರಹಮಾನಕ್ಕೂ ಹೋಲಿಸಿದಾಗ ಅವುಗಳ ಸಂಯುಕ್ತ ಪ್ರಭಾವ, ಸ್ಪರ್ಧಾತ್ಮಕ ಬೋರ್ಡ ಹಾಗೂ ವಿಶ್ವವಿದ್ಯಾಲಯಗಳ ಪಾಠಗಳ ಥಿಯರಿ, ಪ್ರಾಯೋಗಿಕ, ಮೌಖಿಕ ಮೊದಲಾದ ವಿವಿಧ ಪರೀಕ್ಷೆಗಳಿಗೆ ಕೂಡ್ರಬೇಕಾದರೆ ಜಾತಕ ಹೇಗಿರಬೇಕು, ಯಾರು ಯಾವ ಪರೀಕ್ಷೆಗಳಲ್ಲಿ ಯಶಸ್ಸು ಪಡೆಯುವರು ಮೊದಲಾದವುಗಳ ವಿವರಣೆಗಳಲ್ಲದೆ ಪರದೇಶದಲ್ಲಿ ಶಿಕ್ಷಣ ಪಡೆಯುವ ಭಾಗ್ಯ ಯಾವ ಜಾತಕನಿಗೆ ಯಾವಾಗ ಬರುತ್ತದೆ— ಇವೇ ಮೊದಲಾದ ವಿಷಯಗಳ ವಿವರಣೆಯನ್ನು ಈ ಪ್ರಕರಣದಲ್ಲಿ ಕೊಡಲಾಗಿದೆ.

ಮಾರ್ಚ-ಎಪ್ರಿಲ್ ತಿಂಗಳುಗಳು ವಿದ್ಯಾರ್ಥಿ-ವಿದ್ಯಾರ್ಥಿನಿಯರಿಗೆ ಅತ್ಯಂತ ಮಹತ್ವದ ತಿಂಗಳುಗಳು. ಅವರ ಬುದ್ಧಿವಂತಿಕೆಯನ್ನು, ವಿದ್ಯಾವಂತಿಕೆಯನ್ನು, ಗ್ರಹಣಶಕ್ತಿ-ಸ್ಮರಣಶಕ್ತಿಗಳನ್ನು ಒರೆಗೆ ಹಚ್ಚುವದು ಈ ತಿಂಗಳುಗಳಲ್ಲಿಯೇ. ಪ್ರಾಥಮಿಕ, ಮಾಧ್ಯಮಿಕ, ಉಚ್ಚ ಮೊದಲಾದ ಎಲ್ಲ ಹಂತಗಳ ವಿದ್ಯಾಲಯಗಳ ಪರೀಕ್ಷೆಗಳು ಈ ತಿಂಗಳುಗಳಲ್ಲಿ ಜರುಗುತ್ತವೆ. ಅದಕ್ಕಾಗಿ ಎಲ್ಲ ವಿದ್ಯಾರ್ಥಿ-ವಿದ್ಯಾರ್ಥಿನಿಯರೂ ಇಡೀ ವರುಷ

ತಾವು ಕಲಿತಿದ್ದನ್ನು ಕಳೆದ ಒಂದೆರಡು ತಿಂಗಳುಗಳಲ್ಲಿ ಹಗಲಿರುಳುಗಳೆನ್ನದೆ ಊಟ, ನಿದ್ರೆಗಳ ಪರಿವೆಯಿಲ್ಲದೆ ಓದಿ-ಓದಿ ಸ್ಮರಿಸಿಕೊಂಡು ಪರೀಕ್ಷೆಗಳಿಗೆ ಅಣಿಯಾಗುತ್ತಾರೆ. ಈ ವಾರ್ಷಿಕ ಪರೀಕ್ಷೆಗಳೆಂದರೆ ಅವರವರಿಗೆ ಅವರವರ ಮಟ್ಟದಲ್ಲಿ ಸತ್ವಪರೀಕ್ಷೆಗಳೇ ಆಗಿರುತ್ತವೆ. ಇಷ್ಟೆಲ್ಲ ಕಷ್ಟಪಟ್ಟು ಅಭ್ಯಾಸ ಮಾಡಿಯೂ ತೇರ್ಗಡೆಯಾಗುವ ವಿಷಯದಲ್ಲಿ ಚಿಂತಾತುರರಾಗಿಯೇ ಇರುವದುಂಟು. ಮನುಷ್ಯನು ಎಷ್ಟೇ ಪ್ರಯತ್ನವಾದಿಯಾಗಿದ್ದರೂ ಪ್ರಯತ್ನವು ಅವನ ಏಳ್ಗೆಗೆ ಅವಶ್ಯಕವಾದ ಕರ್ತವ್ಯವಾಗಿದ್ದರೂ ತನ್ನ ಪ್ರಯತ್ನಗಳಿಗೆ ದೈವಬೆಂಬಲವಿದೆಯೇ, ಇದ್ದರೆ ಎಷ್ಟರಮಟ್ಟಿಗೆ ಇದೆ ಎಂಬುದನ್ನು ತಿಳಿದುಕೊಳ್ಳುವ ಕುತೂಹಲ ಇದ್ದೇ ಇರುತ್ತದೆ. ಈ ಮಾತಿಗೆ ವಿದ್ಯಾರ್ಥಿ-ವಿದ್ಯಾರ್ಥಿನಿಯರು ಹೇಗೆ ಹೊರತಾಗುತ್ತಾರೆ. ಈ ಸಲದ ತನ್ನ ಪರೀಕ್ಷೆಯ ಫಲಿತಾಂಶ ಎಂತಾಗಬಹುದು ಎಂಬುದನ್ನು ತಿಳಿಯುವ ಆಶೆ, ಆತುರ ಅವನಿಗಿರುತ್ತದೆ. ಮತ್ತೆ ಕೆಲವು ಉತ್ಕಟಾಕಾಂಕ್ಷೆಯುಳ್ಳ ವಿದ್ಯಾರ್ಥಿಗಳಿಗೆ ಕ್ಲಾಸು, ದರ್ಜೆ, ರ್‍ಯಾಂಕ್ಸ್ ಮೊದಲಾದವುಗಳು ಲಭ್ಯವಾಗುವವೋ ಇಲ್ಲವೋ ಎಂಬ ವಿಷಯಗಳನ್ನು ತಿಳಿಯಲು ಆತುರರಿರುತ್ತಾರೆ. ಹೆಚ್ಚು ಪ್ರಯತ್ನದಿಂದ ಯಶ ಎಂದು ಜ್ಯೋತಿಷ್ಯ ಹೇಳಿದರೆ ಅವನು ಆ ಬಗ್ಗೆ ಇನ್ನೂ ಹೆಚ್ಚಿನ ಪರಿಶ್ರಮ ವಹಿಸುತ್ತಾನೆ, ಕಷ್ಟ ವಿಷಯಗಳನ್ನು ಚೆನ್ನಾಗಿ ಅಭ್ಯಾಸ ಮಾಡುತ್ತಾನೆ; ಆರ್ಥಿಕಾದಿಗಳ ವಿಘ್ನಗಳ ಸಂಭಾವವಿದೆ ಎಂದು ಹೇಳಿದರೆ ಅಂತಹ ತೊಂದರೆಗಳನ್ನು ತಪ್ಪಿಸಲು ಎಚ್ಚರಿಕೆ ವಹಿಸುತ್ತಾನೆ. ಪ್ರಾತ್ಯಕ್ಷಿಕೆಯಲ್ಲಿ ತೊಂದರೆ ಎಂದರೆ ಆ ವಿಷಯಗಳ ಕಡೆ ಗಮನ ಕೊಡುತ್ತಾನೆ. ಆದುದರಿಂದ ಶಿಕ್ಷಣದಲ್ಲಿ ಪ್ರಗತಿಹೊಂದಲು ಅರ್ಥಾತ್ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಲು ಗ್ರಹಬಲ ಹೇಗಿರಬೇಕೆಂಬುದನ್ನು ಈ ಪ್ರಕರಣದಲ್ಲಿ ವಿವರಿಸಲಾಗಿದೆ.

### ದೈವಬಲವಿಲ್ಲದೆ ತೇರ್ಗಡೆ ಹೊಂದಲಾರನು

ಎಷ್ಟೋ ವಿದ್ಯಾರ್ಥಿಗಳು ಹಗಲು ರಾತ್ರಿ ಶ್ರಮಪಟ್ಟು ಅಭ್ಯಾಸ ಮಾಡಿದರೂ ಪರೀಕ್ಷೆ ಬಂದೊಡನೆ ಕೈಕಾಲು ಕಳೆದುಕೊಳ್ಳುವವರಿದ್ದಾರೆ; ಹಾಗೆಯೇ ಕೆಲವು ಹುಡುಗರು ನಿರಾಯಾಸವಾಗಿ ಪರೀಕ್ಷೆಯಲ್ಲಿ ಉತ್ತೀರ್ಣ

ರಾಗುತ್ತಾರೆ. ಎಷ್ಟೋ ಪ್ರತಿಷ್ಠಿತ ಶ್ರೀಮಂತವರ್ಗದ ಮಕ್ಕಳು ಕೂಡ ದೈವದ ಬೆಂಬಲವಿಲ್ಲದೆ ಹತಾಶರಾಗುವದುಂಟು. ಅಷ್ಟೇ ಏಕೆ, ಎಷ್ಟೋ ಜನ ಪಂಡಿತ-ವಿದ್ವಾಂಸರ ಮಕ್ಕಳು ಕೂಡ ಪರೀಕ್ಷೆಯಲ್ಲಿ ಮುಂಗಾಣದೆಯೇ ಚಡಪಡಿಸುತ್ತಿರುವದನ್ನು ಕಾಣುತ್ತೇವೆ. ಇಂಥವರಿಗೆಲ್ಲ ವಿದ್ಯಾರ್ಜನೆಯ ವಿಷಯದಲ್ಲಿ ಅವರವರ ಮಾರ್ಗವನ್ನು ನಿರ್ಧರಿಸಿಕೊಳ್ಳಲು ಅವರವರ ದೈವಬಲವನ್ನು ಸೂಚಿಸುವಲ್ಲಿ ಜ್ಯೋತಿಷ್ಯಶಾಸ್ತ್ರವು ಸಹಾಯ ಮಾಡುತ್ತದೆ.

ಪರೀಕ್ಷೆಯಲ್ಲಿ ಒಬ್ಬಾನೊಬ್ಬನು ಉತ್ತೀರ್ಣನಾದನೊ ಇಲ್ಲವೋ ಎಂಬುದನ್ನು ತಿಳಿಯುವದಕ್ಕೆ ಜ್ಯೋತಿಷ್ಯಶಾಸ್ತ್ರರೀತ್ಯಾ ಅನೇಕ ವಿಷಯಗಳನ್ನು ಸಮಾಲೋಚಿಸಬೇಕಾಗುತ್ತದೆ.

ಮೊದಲನೆಯದಾಗಿ ಬೋರ್ಡ್ ಹಾಗೂ ವಿಶ್ವವಿದ್ಯಾಲಯದ ಶಿಕ್ಷಣ ಪಡೆಯುವದಕ್ಕೆ ಅನುಕೂಲವಾದ ಗ್ರಹಯೋಗಗಳು ವಿದ್ಯಾರ್ಥಿಯ ಮೂಲ ಜಾತಕದಲ್ಲಿವೆಯೋ ಹೇಗೆ ಎಂಬುದನ್ನು ಪರಿಶೀಲಿಸಬೇಕಾಗುತ್ತದೆ.

ಎರಡನೆಯದಾಗಿ ಪರೀಕ್ಷೆಯ ಸಮಯದಲ್ಲಿರುವ ಗ್ರಹಗಳ ಬಲಾಬಲವನ್ನು ಲೆಕ್ಕಕ್ಕೆ ತೆಗೆದುಕೊಳ್ಳಬೇಕು.

ಮೂರನೆಯದಾಗಿ ಫಲಿತಾಂಶವನ್ನು ಸಾರುವ ಸಮಯದಲ್ಲಿ ಗ್ರಹಗಳ ಸ್ಥಿತಿ-ಗತಿ ಅನುಕೂಲವಾಗಿದೆಯೊ, ಪ್ರತಿಕೂಲವಾಗಿದೆಯೊ ಎಂಬುದನ್ನು ನೋಡಬೇಕು. ಏಕೆಂದರೆ ಮೂಲ ಜಾತಕದಲ್ಲಿ ಗ್ರಹಗಳು ಎಷ್ಟೇ ಬಲಾಢ್ಯವಾಗಿದ್ದರೂ ಪರೀಕ್ಷೆಯ ಸಮಯದಲ್ಲಿ ಸಾಡೇಸಾತಿ, ಪಂಚಮಾಷ್ಟಮ, ಶನಿ ಹಾಗೂ ಅಶುಭ ಗುರುವು (ಗೋಚರಿ) ಮೊದಲಾದ ಅಶುಭ ಗ್ರಹಗಳ ಪಂಥ್ರವಾಣವಿದ್ದ ಮೂಲಕ ಪರೀಕ್ಷೆಯಲ್ಲಿ ಅನುತ್ತೀರ್ಣರಾದ ಇಲ್ಲವೆ ಡ್ರಾಪ್ ತೆಗೆದುಕೊಂಡ ಅನೇಕ ಉದಾಹರಣೆಗಳನ್ನು ನಾವು ನೋಡಿದ್ದೇವೆ. ಅಂಥ ಒಂದು ಉದಾಹರಣೆಯೆಂದರೆ, ಎಸ್. ಎಸ್. ಎಲ್. ಸಿ. ಪರೀಕ್ಷೆಯಲ್ಲಿ ನಮ್ಮೊಬ್ಬ ಮಿತ್ರರು ಇಡೀ ಕೇಂದ್ರಕ್ಕೆ ಪ್ರಥಮ ಶ್ರೇಣಿಯಲ್ಲಿ ಪ್ರಪ್ರಥಮಾಂಕ ಪಡೆದು ಗೌರವಪೂರ್ಣವಾದ ಯಶಸ್ಸನ್ನು ಪಡೆದಿದ್ದರು. ಆದರೆ ಮರುವರ್ಷ ಅವರೇ ಎಫ್. ವೈ. (ಅರ್ಥಾತ್ ಈಗಿನ ಪಿ.ಯು.ಸಿ.) ಪರೀಕ್ಷೆಯಲ್ಲಿ ಸಾಮಾನ್ಯ ಶ್ರೇಣಿಯಲ್ಲಿ ಕೂಡ ತೇರ್ಗಡೆಯಾಗಲು ಅಸ

ಮರ್ಥರಾದರು. ಇದೊಂದು ಆಶ್ಚರ್ಯಕರವಾದ ಘಟನೆಯಾಗಿತ್ತು. ಅವರ ಬುದ್ಧಿಮತ್ತೆಯನ್ನು ಅರಿತವರಿಗೆಲ್ಲ ಜ್ಯೋತಿಷ್ಯದ ದೃಷ್ಟಿಯಿಂದ ಇದಕ್ಕೆ ಅತ್ಯಂತ ಮಹತ್ವದ ಈ ಸಂಗತಿಗೆ ಕಾರಣವೇನೆಂದು ಹುಡುಕುವದಕ್ಕಾಗಿ ಆ ಮಿತ್ರರ ಜಾತಕವನ್ನು ಪರಿಶೀಲಿಸಲಾಗಿ ವಿದ್ಯಾವಂತಿಕೆಯ ದೃಷ್ಟಿಯಿಂದ ಅವರಲ್ಲಿ ಅತ್ಯಂತ ಉತ್ಕೃಷ್ಟ ಕಾರಕ ಯೋಗಗಳಿದ್ದುದು ಕಂಡುಬಂದಿತು. ಬೋರ್ಡ ಪರೀಕ್ಷೆಯಲ್ಲಿ ಪ್ರಪ್ರಥಮಾಂಕ ಗಳಿಸಿ ಪಾಸಾದ ವರುಷ ಇವರಿಗೆ ಗೋಚರಿಯಾಗ ಹನ್ನೊಂದನೆಯ ಗುರು ಮತ್ತು ಹನ್ನೊಂದನೆಯ ಶನಿ ಇದ್ದರು. ಅವರ ಬಲದಿಂದ ಆ ಮಿತ್ರರು ಪರೀಕ್ಷೆಯಲ್ಲಿ ಸನ್ಮಾನಯುತವಾಗಿ ತೇರ್ಗಡೆಹೊಂದಿದ್ದರು. ಆದರೆ ಮರುವರುಷ ಆ ಗ್ರಹಗಳೆರಡೂ ಅವರಿಗೆ ಪ್ರತಿಕೂಲವಾಗಿ ನಿಂತವು. ಎಫ್. ವೈ. ಪರೀಕ್ಷೆಯ ಸಮಯದಲ್ಲಿ ಅವರಿಗೆ ಸಾಡೇಸಾತಿಯೂ, ೧೨ ನೆಯ ಗುರುವೂ ಗಂಟುಬಿದ್ದದ್ದರಿಂದ ಅವರ ಪಾಲಿಗೆ ಅಪಯಶ ಬಂದಿತು. ಈ ಉದಾಹರಣೆಯಿಂದ ಪರೀಕ್ಷೆಗೆ ಕುಳಿತ ವಿದ್ಯಾರ್ಥಿಯ ಪರೀಕ್ಷಾ-ಫಲಿತಾಂಶ ಹೇಗಾಗುವದೆಂದು ಹೇಳುವಾಗ ಪರೀಕ್ಷೆಯು ಜರುಗುವ ಸಮಯದಲ್ಲಿ ಅವರಿಗೆ ಗೋಚರೀ ಗ್ರಹಗಳ ಬಲಾಬಲ ಹೇಗಿದೆಯೆಂಬುದನ್ನು ಪರಿಶೀಲಿಸುವದು ಅಗತ್ಯವೆಂದು ತೋರುವದು.

## ಪರೀಕ್ಷೆಗಳಲ್ಲಿಯ ಪ್ರಕಾರಗಳು

ಪರೀಕ್ಷೆಗಳಲ್ಲಿ ಅನೇಕ ಪ್ರಕಾರಗಳಿದ್ದರೂ ಅವುಗಳಲ್ಲಿ ಮೂರು ಮುಖ್ಯವಾಗಿರುತ್ತವೆ; ೧) ಥೇರಿ (Theory), ೨) ಪ್ರಾತ್ಯಕ್ಷಿಕೆ (Practicals) ೩) ಮೌಖಿಕ (Oral).

ಕೆಲವು ವಿದ್ಯಾರ್ಥಿಗಳು ಕೇವಲ ಥೇರಿಯಲ್ಲಿ ಪ್ರವೀಣರಿದ್ದು ಪ್ರಾತ್ಯಕ್ಷಿಕೆಯೆಂದರೆ ಅವರಿಗೆ ಮೈ ನಡುಕುವೇ ಹುಟ್ಟುತ್ತದೆ. ಮತ್ತೆ ಕೆಲವರು ಮೌಖಿಕವೆಂದರೆ ಕೈಕಾಲನು ಕಳೆದುಕೊಳ್ಳುವರು. ಎಲ್ಲ ವಿದ್ಯಾರ್ಥಿಗಳು ಎಲ್ಲ ಪ್ರಕಾರದ ಪರೀಕ್ಷೆಗಳಲ್ಲಿ ಪ್ರವೀಣರಿರುವದಿಲ್ಲ. ಜಾತಕದ ಆಧಾರದ ಮೇಲಿಂದ ಯಾವ ವಿದ್ಯಾರ್ಥಿಯು ಯಾವ ಪ್ರಕಾರದ ಪರೀಕ್ಷೆಯಲ್ಲಿ ಯಶಸ್ಸು ಪಡೆಯುವನೆಂಬುದನ್ನು ಪರಿಶೀಲಿಸುವಾ.

## ೧. ಥೇರಿಯಲ್ಲಿ ಪ್ರಾವೀಣ್ಯತೆ ಪಡೆಯುವ ಗ್ರಹಯೋಗಗಳು

ಅನೇಕ ವಿದ್ಯಾರ್ಥಿಗಳು ಜ್ಞಾನವಂತ, ಬುದ್ಧಿವಂತರಿದ್ದಾಗ್ಯೂ ಪರೀಕ್ಷೆಯಲ್ಲಿಯ ಪ್ರಶ್ನೆಗಳನ್ನು ಸರಿಯಾಗಿ ಬರೆಯದೆ ಅನುತ್ತೀರ್ಣರಾಗುವದುಂಟು. ಆಧುನಿಕ ಶಿಕ್ಷಣ ಕ್ರಮದಂತೆ ಪರಿಕ್ಷೆಗಳಲ್ಲಿಯ ನಿರ್ದಿಷ್ಟ ಪ್ರಶ್ನೆಗಳನ್ನು ನಿರ್ದಿಷ್ಟ ವೇಳೆಯಲ್ಲಿ ನಿರ್ದಿಷ್ಟ ರೀತಿಯಲ್ಲಿ ಬರೆಯುವದು ಅರ್ಥಾತ್ ಉತ್ತರಿಸುವದು ಒಂದು ಕಲೆಯೇ ಸರಿ. ಈ ಕಲೆ ಎಲ್ಲ ವಿದ್ಯಾರ್ಥಿಗಳಿಗೆ ಸಾಧಿಸದೆ ಕೆಲವೇ ವಿದ್ಯಾರ್ಥಿಗಳಿಗೆ ಕರಗತವಾಗಿರುತ್ತದೆ. ಆದುದರಿಂದ ಜಾತಕದ ಆಧಾರದ ಮೇಲಿಂದ ಎಂಥ ವಿದ್ಯಾರ್ಥಿಗಳಿಗೆ ಈ ಕಲೆ ಸಾಧಿಸುವದೆಂಬುದನ್ನು ಪರಿಶೀಲಿಸುವಾ.

**ಕಾರಕಗ್ರಹ:**— ಗ್ರಹಗಳ ದೃಷ್ಟಿಯಿಂದ ಪರೀಶೀಲಿಸಿದರೆ ಬರಹದ ಪರೀಕ್ಷೆಯಲ್ಲಿ ಪ್ರಾವೀಣ್ಯತೆ ಪಡೆಯಲು ಜಾತಕದಲ್ಲಿ ಬುಧ, ಗುರು ಈ ಗ್ರಹಗಳು ಕಾರಕರಿರುತ್ತಾರೆ. ಬುಧ-ಗುರು ಗ್ರಹಗಳ ತರುವಾಯ ಪಂಚಮೇಶ ಹಾಗೂ ಚಂದ್ರ-ಶುಕ್ರರು ಕೆಲಮಟ್ಟಿಗೆ ಕಾರಕರಿರುತ್ತಾರೆ. ಬುಧನು ವೃದ್ಧಿ ಇಲ್ಲವೆ ವಾಯುರಾಶಿಯವನಾಗಿ ಇದ್ದು, ಲಗ್ನ, ಪಂಚಮ, ದ್ವಿತೀಯ, ತೃತೀಯ ಸ್ಥಾನದಲ್ಲಿದ್ದರೆ ಅಥವಾ ಗುರುವು ಮೇಷ, ಮಿಥುನ, ಸಿಂಹ, ತುಲಾ, ಧನು, ಕುಂಭ, ಕರ್ಕ, ಮೀನ ಈ ರಾಶಿಯವನಾಗಿ ಲಗ್ನ ಪಂಚಮ, ಭಾಗ್ಯ, ಲಾಭ ಈ ಸ್ಥಾನಗಳಲ್ಲಿದ್ದರೆ ಅಥವಾ ಪಂಚಮೇಶನು ಬಲಾಢ್ಯನಿದ್ದು ಗುರುವಿನ ದೃಷ್ಟಿಯಲ್ಲಿದ್ದರೆ ಇಂಥ ವಿದ್ಯಾರ್ಥಿಗಳು ಥೇರಿಯಲ್ಲಿ ಪ್ರವೀಣರಿರುತ್ತಾರೆ.

**ಸ್ಥಾನ:**— ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ಪಂಚಮಸ್ಥಾನ ಪೂರಕವಿರದೆ ಯಾವ ವಿದ್ಯಾರ್ಥಿಯೂ ಥೇರಿಯಲ್ಲಿ ಪ್ರವೀಣನಾಗಲಾರ. ಪಂಚಮದ ನಂತರ ತೃತೀಯ ಸ್ಥಾನವನ್ನು ಪರಿಶೀಲಿಸಬೇಕು. ಏಕೆಂದರೆ ತೃತೀಯವು ಬರಹದ ಸ್ಥಾನವಿರುತ್ತದೆ. ಅಕ್ಷರಗಳನ್ನು ಅಚ್ಚುಕಟ್ಟಾಗಿ, ಸುಂದರವಾಗಿ ಬರೆಯುವದು ತೃತೀಯಸ್ಥಾನ, ತೃತೀಯೇಶ ಬಲಾಢ್ಯರಿರದೆ ಸಾಧಿಸದು. ಅಚ್ಚುಕಟ್ಟಾದ ಸುಂದರ ಬರಹವು ಪರೀಕ್ಷೆಗಳಲ್ಲಿ ಬಹಳ ಸಲ ಸತ್ಪ್ರಭಾವ ಬೀರುತ್ತದೆ.

ಲಗ್ನ:— ಲಗ್ನದ ದೃಷ್ಟಿಯಿಂದ ಪರಿಶೀಲಿಸಿದರೆ ವೃಷಭ, ಮಿಥುನ, ಸಿಂಹ, ವೃಶ್ಚಿಕ, ಕುಂಭ ಈ ಐದು ಲಗ್ನಗಳ ಜಾತಕರು ಸೈದ್ಧಾಂತಿಕ ಪರೀಕ್ಷೆಯಲ್ಲಿ ಪ್ರವೀಣರಿರುತ್ತಾರೆ.

ರಾಶಿ:— ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ನಿರ್ದಿಷ್ಟ ರಾಶಿಯ ವಿದ್ಯಾರ್ಥಿಗಳೇ ಬರಹದ ಪರೀಕ್ಷೆಯಲ್ಲಿ ಪ್ರವೀಣರಿರುತ್ತಾರೆಂದು ಹೇಳುವದು ಕಠಿಣವಿದ್ದರೂ ವಿಶಿಷ್ಟ ರಾಶಿಯ ವಿದ್ಯಾರ್ಥಿಗಳ ವೈಶಿಷ್ಟ್ಯವನ್ನು ಪರಿಶೀಲಿಸೋಣ.

ಕರ್ಕ ಹಾಗೂ ಮೀನ ರಾಶಿಯ ವಿದ್ಯಾರ್ಥಿಗಳು ಉತ್ತರ ಗೊತ್ತಿದ್ದರೂ ಪ್ರಶ್ನೆಗಳನ್ನು ಬಿಡಿಸದೆ ಮರೆತು ಬರುತ್ತಾರೆ. ಇದಲ್ಲದೆ ಯಾವುದೊಂದು ಪ್ರಶ್ನೆಗೆ ಸಂಪೂರ್ಣ ಉತ್ತರವನ್ನು ಬರೆಯದೆ ಅರ್ಧಮರ್ಧ ಉತ್ತರವನ್ನು ಬರೆದು ಇನ್ನೊಂದು ಪ್ರಶ್ನೆಯ ಉತ್ತರವನ್ನು ಬರೆಯಲು ಪ್ರಾರಂಭಿಸುತ್ತಾರೆ. ಹೀಗೆ ಪ್ರಶ್ನೆಗಳನ್ನು ಮರೆತು ಬರುವದರಿಂದಲೂ ಸಂಪೂರ್ಣ ಉತ್ತರ ಬರೆಯದೆ ಅರ್ಧಮರ್ಧ ಉತ್ತರವನ್ನು ಬರೆಯುವದರಿಂದಲೂ ಕಡಿಮೆ ಗುಣಗಳನ್ನು ಪಡೆಯುವರು.

ವೃಷಭ, ಕರ್ಕ, ಕನ್ಯಾ, ಮೀನ ಈ ರಾಶಿಗಳ ವಿದ್ಯಾರ್ಥಿಗಳು ಸರಿಯಾದ ಮತ್ತು ಅವಶ್ಯವಿದ್ದಷ್ಟನ್ನು ಮಾತ್ರ ಉತ್ತರಗಳಲ್ಲಿ ಬರೆಯದೆ ಬರಿ ಪುಟಗಳನ್ನು ತುಂಬಿಸುವ ಸ್ವಭಾವದವರಿರುವದರಿಂದ ಸಮಯ ಸಾಲದೆ ಅನೇಕ ಪ್ರಶ್ನೆಗಳನ್ನು ಉತ್ತರಿಸದೆಯೆ ಬರುವರು.

ಮೇಷ, ಸಿಂಹ, ವೃಶ್ಚಿಕ, ಧನು, ಮಕರ ಈ ರಾಶಿಯ ವಿದ್ಯಾರ್ಥಿಗಳು ಬಹಳ ಗಡಿಬಿಡಿ ಮಾಡುವರು. ಗಡಿಬಿಡಿಯಿಂದ ಉತ್ತರ ಬರೆದು ಇನ್ನೂ ಸಮಯವಿರುವಾಗಲೇ ಎದ್ದು ಬಿಡುವದರಿಂದ ಕಡಿಮೆ ಗುಣಗಳನ್ನು ಪಡೆಯುವರು.

ಮಿಥುನ, ತುಲಾ, ಕುಂಭ ಈ ರಾಶಿಯ ವಿದ್ಯಾರ್ಥಿಗಳು ಬರೆಹದ ಪರೀಕ್ಷೆಯಲ್ಲಿ ಸಿದ್ಧಹಸ್ತರು. ನಿರ್ದಿಷ್ಟ ವೇಳೆಯಲ್ಲಿ, ನಿರ್ದಿಷ್ಟ ರೀತಿಯಲ್ಲಿ, ನಿರ್ದಿಷ್ಟ ಉತ್ತರಗಳನ್ನು ಬರೆಯುವ ಕಲೆ ಈ ರಾಶಿಯವರಿಗೆ ಸಾಧಿಸಿದಷ್ಟು ಬೇರಾವ ರಾಶಿಯವರಿಗೂ ಸಾಧಿಸಲಾರದು. ಆದರೆ ಕೆಲವೊಮ್ಮೆ ತನಗೆ

ಗೊತ್ತಿಲ್ಲದ ವಿಷಯವೇ ಇಲ್ಲ ಎಂಬ ಅತಿಶಯ ಆತ್ಮವಿಶ್ವಾಸದಿಂದ ಹಾನಿ ಗೊಳಗಾಗುವರು.

**೨. ಪ್ರಾತ್ಯಕ್ಷಿಕ ಪರೀಕ್ಷೆಯಲ್ಲಿ ಪ್ರಾವೀಣ್ಯತೆ ಪಡೆಯುವ ಯೋಗಗಳು**

ಅನೇಕ ವಿದ್ಯಾರ್ಥಿಗಳು ಥೇರಿಯಲ್ಲಿ ಪ್ರವೀಣರಿದ್ದಾಗ್ಯೂ ಪ್ರಾತ್ಯಕ್ಷಿಕೆ ಯೆಂದರೆ ಭಯಗ್ರಸ್ತರಾಗುತ್ತಾರೆ. ಆದುದರಿಂದ ಜಾತಕದಲ್ಲಿ ಗ್ರಹ- ಯೋಗಗಳು ಹೇಗಿದ್ದರೆ ಈ ಪರೀಕ್ಷೆಯಲ್ಲಿ ಪ್ರಾವೀಣ್ಯತೆ ಹೊಂದುವರೆಂಬು ದನ್ನು ನೋಡುವಾ.

ಗ್ರಹ :— ಗ್ರಹಗಳ ದೃಷ್ಟಿಯಿಂದ ಪರಿಶೀಲಿಸಿದರೆ ಜಾತಕದಲ್ಲಿ ಮಂಗ ಳನು ಬಲಾಢ್ಯನಿರದ ಯಾರೂ ಪ್ರಾತ್ಯಕ್ಷಿಕೆಯಲ್ಲಿ ಪ್ರವೀಣರಾಗುವದಿಲ್ಲ. ಮಂಗಳನ ತರುವಾಯ ರವಿ–ಶನಿಯರ ಬಲಾಬಲವನ್ನು ಪರಿಶೀಲಿಸಬೇಕಾಗು ತ್ತದೆ.

ಸ್ಥಾನ :— ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ಕರ್ಮಶಾಲೆ (Laboratory) ಪ್ರಾತ್ಯಕ್ಷಿಕತೆಯ ಜ್ಞಾನದ ಪರೀಕ್ಷೆಯಲ್ಲಿ ಪ್ರಾವೀಣ್ಯತೆ ಪಡೆಯುವ ಸ್ಥಾನವೆಂದರೆ ತೃತೀಯಸ್ಥಾನವು. ತೃತೀಯಸ್ಥಾನ ತೃತೀ ಯೇಶ ಬಲಾಢ್ಯರಿರದೆ ಯಾವ ವಿದ್ಯಾರ್ಥಿಯೂ ತೇರ್ಗಡೆಯಾಗಲಾರನು. ತೃತೀಯದ ನಂತರ ಷಷ್ಠಸ್ಥಾನವನ್ನೂ ಪರಿಶೀಲಿಸಬೇಕು. ತಾಂತ್ರಿಕ ಹಾಗೂ ಇಂಜನಿಯರಿಂಗ್ ಕೋರ್ಸುಗಳ ವಿದ್ಯಾರ್ಥಿಗಳಿಗೆ ಈ ಎರಡೂ ಸ್ಥಾನಗಳು ಬಲಾಢ್ಯವಿರಬೇಕು.

ಲಗ್ನ :— ಲಗ್ನದ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ಕರ್ಕ, ವೃಷಭ, ಸಿಂಹ, ಧನು ಈ ಲಗ್ನಗಳ ವಿದ್ಯಾರ್ಥಿಗಳು ಪ್ರಾತ್ಯಕ್ಷಿಕೆಯ ಪರೀಕ್ಷೆ ಯಲ್ಲಿ ಪ್ರವೀಣರಿರುತ್ತಾರೆ.

ರಾಶಿ :— ರಾಶಿಯ ದೃಷ್ಟಿಯಿಂದ ನೋಡಿದರೆ ನಿರ್ದಿಷ್ಟ ರಾಶಿಯ ವರೇ ಇರಬೇಕೆಂದು ನಿಯಮವಿಲ್ಲ.

## ೩. ಮೌಖಿಕ ಪರೀಕ್ಷೆಯಲ್ಲಿ ಪ್ರಾವೀಣ್ಯತೆ ಪಡೆಯುವ ಯೋಗಗಳು

ಗ್ರಹ :— ಚಂದ್ರ–ಶುಕ್ರರು ಜಾತಕದಲ್ಲಿ ಬಲಾಢ್ಯರಿದ್ದರೆ ಮೌಖಿಕ ಪರೀಕ್ಷೆಗಳಲ್ಲಿ ಪ್ರವೀಣರಿರುತ್ತಾರೆ. ಚಂದ್ರ-ಶುಕ್ರರ ತರುವಾಯ ರವಿಯೂ ಬಲಾಢ್ಯನಿರಬೇಕು. ಏಕೆಂದರೆ ಈ ಮೌಖಿಕ ಪರೀಕ್ಷೆಯಲ್ಲಿ ಅನೇಕ ವೇಳೆ ವಿದ್ಯಾರ್ಥಿಯ ವ್ಯಕ್ತಿಮತ್ವವೂ ಮಹತ್ವದ್ದಾಗಿ ಪರಿಣಮಿಸುತ್ತದೆ.

ಸ್ಥಾನ :— ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ಮೌಖಿಕ ಪರೀಕ್ಷೆಯಲ್ಲಿ ಪ್ರಾವೀಣ್ಯ ಪಡೆಯುವ ಸ್ಥಾನವೆಂದರೆ ದ್ವಿತೀಯ ಸ್ಥಾನವು. ದ್ವಿತೀಯಸ್ಥಾನ ಹಾಗೂ ದ್ವಿತೀಯೇಶ ಬಲಾಢ್ಯರಿರದೆ ಯಾವ ವಿದ್ಯಾರ್ಥಿಯೂ ಮೌಖಿಕ ಪರೀಕ್ಷೆಯಲ್ಲಿ ತೇರ್ಗಡೆಯಾಗಲಾರನು. ದ್ವಿತೀಯ ಸ್ಥಾನದ ನಂತರ ತನುಸ್ಥಾನ ಹಾಗೂ ಲಗ್ನೇಶನ ಬಲಾಬಲವನ್ನು ಪರಿಶೀಲಿಸಬೇಕು. ಏಕೆಂದರೆ ಅನೇಕ ಮೌಖಿಕ ಪರೀಕ್ಷೆಗಳಲ್ಲಿ ವ್ಯಕ್ತಿಯ ವ್ಯಕ್ತಿಮತ್ವವೂ ಪ್ರಭಾವವನ್ನುಂಟು ಮಾಡುತ್ತಿರುವದರಿಂದ ಈ ಅಂಶವನ್ನೂ ಗಮನಿಸಬೇಕಾಗುತ್ತದೆ. ಉದಾಹರಣೆಗೆ:— ಸೈನಿಕ ಶಿಕ್ಷಣ, ಶಾರೀರಿಕ ಶಿಕ್ಷಣ,ಐ.ಎ.ಎಸ್. ಮೊದಲಾದ ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಲಗ್ನ ಹಾಗೂ ಲಗ್ನೇಶರು ಬಲಾಢ್ಯರಿರಬೇಕಾಗುತ್ತದೆ.

ಲಗ್ನ :— ಲಗ್ನದ ದೃಷ್ಟಿಯಿಂದ ಪರಿಶೀಲಿಸಿದರೆ ನಿರ್ದಿಷ್ಟ ಲಗ್ನದ ವಿದ್ಯಾರ್ಥಿಗಳೇ ಮೌಖಿಕ ಪರೀಕ್ಷೆಗಳಲ್ಲಿ ತೇರ್ಗಡೆಯಾಗುತ್ತಾರೆಂದು ಹೇಳಲು ಬಾರದು. ಆದರೂ ಮೇಷ, ವೃಷಭ, ಕರ್ಕ, ಸಿಂಹ. ವೃಶ್ಚಿಕ, ಧನು ಈ ಲಗ್ನಗಳ ವಿದ್ಯಾರ್ಥಿಗಳು ಮೌಖಿಕ ಪರೀಕ್ಷೆಗಳಲ್ಲಿ ಹೆಚ್ಚು ಪ್ರವೀಣರಿರುವದು ಕಂಡುಬರುತ್ತದೆ.

ರಾಶಿ :— ರಾಶಿಯ ದೃಷ್ಟಿಯಿಂದ ಪರಿಶೀಲಿಸಿದರೆ ನಿರ್ದಿಷ್ಟ ರಾಶಿಯವರೇ ಎಲ್ಲ ಮೌಖಿಕ ಪರೀಕ್ಷೆಗಳಲ್ಲಿಯೂ ಪ್ರವೀಣರಿರುತ್ತಾರೆಂದು ಹೇಳಲುಬಾರದು. ಆದರೂ ಸಿಂಹ, ವೃಶ್ಚಿಕ, ಧನು, ಮಕರ ಈ ರಾಶಿಯ ವಿದ್ಯಾರ್ಥಿಗಳು ಧೈರ್ಯದಿಂದ ಮಾತನಾಡುವ ಸ್ವಭಾವದವರಿರುವ ಮೂಲಕ ಹಾಗೂ ಭವ್ಯ ವ್ಯಕ್ತಿಮತ್ವವುಳ್ಳವರಾಗಿರುವ ಕಾರಣ ಅನೇಕ ಸಲ ಮೌಖಿಕ

ಪರೀಕ್ಷೆಗಳಲ್ಲಿ ಹೆಚ್ಚಿಗೆ ಗುಣಗಳನ್ನು ಸಂಪಾದಿಸುತ್ತಿರುವದು ಕಂಡುಬಂದಿದೆ. ಈ ರಾಶಿಗಳ ನಂತರ ವೃಷಭ, ಕನ್ಯಾ, ಕರ್ಕ, ಮೀನ ಈ ರಾಶಿಯ ಜನರು ಮೌಖಿಕ ಪರೀಕ್ಷೆಗಳಲ್ಲಿ ಪ್ರಭಾವಿಯಾಗಿರುವುದು ಕಂಡುಬಂದಿದೆ.

## ಪರೀಕ್ಷೆಯಲ್ಲಿಯ ವೈವಿಧ್ಯ

ಪರೀಕ್ಷೆಗಳಲ್ಲಿ ಸೈದ್ಧಾಂತಿಕ (Theoretical), ಪ್ರಾತ್ಯಕ್ಷಿಕ (Practical), ಮೌಖಿಕ (Oral) ಈ ಮೂರೂ ಪ್ರಕಾರಗಳ ಪರೀಕ್ಷೆಗಳಲ್ಲಿ ಪ್ರತಿಭೆ ಪಡೆಯಲು ಜಾತಕ ಹೇಗಿರಬೇಕು, ಎಂಬುವರ ವಿವರಣೆಯನ್ನು ಈಗಾಗಲೇ ನೀಡಿದ್ದೇವೆ. ಇನ್ನು ಆಯಾ ಪರೀಕ್ಷೆಗಳಲ್ಲಿಯ ವೈವಿಧ್ಯದ ವಿಷಯವಾಗಿ ವಿವರಿಸುವಾ.

ಸಾಮಾನ್ಯವಾಗಿ ಪರೀಕ್ಷೆಗಳಲ್ಲಿ ಮತ್ತೆ ಮೂರು ಪ್ರಕಾರಗಳಿವೆ: ೧) ಬೋರ್ಡ ಇಲ್ಲವೆ ವಿಶ್ವವಿದ್ಯಾಲಯಗಳ ಪರೀಕ್ಷೆಗಳು, ೨) ಯೂನಿಯನ್ ಪಬ್ಲಿಕ್ ಸರ್ವಿಸ್ ಕಮಿಶನ್, (ಇಂಡಿಯನ್ ಆಡ್ಮಿನಿಸ್ಟ್ರೇಟಿವ್ ಸರ್ವಿಸಿಸ್ (I. A. S.), ಇಂಡಿಯನ್ ಫಾರೆನ್ ಸರ್ವೀಸಿಸ್ (I. F. S.), ಪಬ್ಲಿಕ್ ಸರ್ವೀಸ್ ಕಮೀಶನ್ ಈ ಮೊದಲಾದ ಸ್ಪರ್ಧಾತ್ಮಕ ಪರೀಕ್ಷೆಗಳು, ೩) ಖಾತೆಗಳ ಪರೀಕ್ಷೆಗಳು (Department Examinations) ಹೀಗೆ ಪರೀಕ್ಷೆಗಳನ್ನು ಮೂರು ಪ್ರಕಾರಗಳಲ್ಲಿ ವಿಂಗಡಿಸಬಹುದು. ಈ ವಿಭಿನ್ನ ಪರೀಕ್ಷೆಗಳಲ್ಲಿ ತೇರ್ಗಡೆಯಾಗಲು ಜಾತಕದಲ್ಲಿಯ ವಿಶಿಷ್ಟ ಗ್ರಹ ಯೋಗಗಳಿರಬೇಕಾಗುತ್ತದೆ. ಹಾಗೂ ವಿಶಿಷ್ಟ ಲಗ್ನ, ಸ್ಥಾನ, ಗ್ರಹ, ರಾಶಿಗಳು ಕಾರಕವಿರುತ್ತವೆ. ಇವುಗಳ ವಿವರಣೆಯನ್ನು ಈ ಕೆಳಗೆ ಕೊಡಲಾಗಿದೆ.

## ೧. ಬೋರ್ಡ ಹಾಗೂ ವಿಶ್ವವಿದ್ಯಾಲಯಗಳ ಪರೀಕ್ಷೆಗಳ ಯೋಗಗಳು

ಬೋರ್ಡ ಹಾಗೂ ವಿಶ್ವವಿದ್ಯಾಲಯಗಳ ಪರೀಕ್ಷೆಗಳಲ್ಲಿ ತೇರ್ಗಡೆಯಾಗಲು ಜಾತಕನ ಜಾತಕದಲ್ಲಿ ಯಾವ ಯಾವ ಸ್ಥಾನ, ಗ್ರಹ, ರಾಶಿಗಳು ಕಾರಕವಿರುತ್ತವೆ, ಪೂರಕವಿರುತ್ತವೆ, ಪೋಷಕವಿರುತ್ತವೆ ಎಂಬುದರ

ವಿವರಣೆಯನ್ನು ಇದೇ ಗ್ರಂಥದ ೨ನೆಯ ಹಾಗೂ ೩ನೆಯ ಪ್ರಕರಣದಲ್ಲಿ ವಿವರವಾಗಿ ವಿವರಿಸಲಾಗಿದೆ. ಪ್ರಸ್ತುತ ಪ್ರಕರಣದ ಮಟ್ಟಿಗೆ ಇಲ್ಲಿ ಸ್ಥೂಲವಾಗಿ ಉಲ್ಲೇಖಿಸಲಾಗಿದೆ.

ಸಾಮಾನ್ಯವಾಗಿ ಮೇಲಿನ ಪರೀಕ್ಷೆಗಳಲ್ಲಿ ತೇರ್ಗಡೆಯಾಗಲು ಜಾತಕದಲ್ಲಿ ಈ ಐದು ಸಂಗತಿಗಳನ್ನು ಪರಿಶೀಲಿಸಬೇಕು.

೧) ಪಂಚಮಸ್ಥಾನದ ಹಾಗೂ ಪಂಚಮೇಶರ ಬಲಾಬಲ.

೨) ದ್ವಿತೀಯಸ್ಥಾನದ ಮತ್ತು ದ್ವಿತೀಯೇಶನ ಬಲಾಬಲ.

೩) ತಾಂತ್ರಿಕ ಶಿಕ್ಷಣದ ಹಾಗೂ ಇಂಜನಿಯರಿಂಗ್ ಶಿಕ್ಷಣದ ಕೋರ್ಸುಗಳಿಗಾಗಿ ತೃತೀಯಸ್ಥಾನ ಹಾಗೂ ತೃತೀಯೇಶನ ಬಲಾಬಲ.

೪) ವೃತ್ತಿಶಿಕ್ಷಣದ ಕೋರ್ಸುಗಳಿಗಾಗಿ ಷಷ್ಠಸ್ಥಾನ ಹಾಗೂ ಷಷ್ಠೇಶರ ಬಲಾಬಲವನ್ನು ಪರಿಶೀಲಿಸಬೇಕು.

೫) ಕೊನೆಯದಾಗಿ ಆಯಾ ಶಿಕ್ಷಣದ ಕೋರ್ಸಗಳ ಕಾರಕಗ್ರಹಗಳ ಬಲಾಬಲವನ್ನು ಪರಿಶೀಲಿಸಿ ವಿದ್ಯಾರ್ಜನೆಯ ಅವಧಿಯಲ್ಲಿ ವಿದ್ಯಾರ್ಥಿಗೆ ಗೋಚರೀಗ್ರಹಗಳ ಹಾಗೂ ದಶಾಂತರ್ದಶೆಗಳ ಅನುಕೂಲತೆಗಳನ್ನು ಪರಿಶೀಲಿಸಬೇಕು. ಹೀಗೆ ಮೇಲ್ಕಂಡ ಐದು ಸಂಗತಿಗಳು ಜಾತಕನಿಗೆ ಅನುಕೂಲವಿದ್ದಲ್ಲಿ ಅಂಥ ವಿದ್ಯಾರ್ಥಿಯು ಬೋರ್ಡ ಹಾಗೂ ವಿಶ್ವವಿದ್ಯಾಲಯ ಪರೀಕ್ಷೆಗಳಲ್ಲಿ ನಿರಾಯಾಸವಾಗಿ ತೇರ್ಗಡೆಹೊಂದುವನು.

## ೨. ಪಬ್ಲಿಕ್ ಸರ್ವೀಸ್ ಕಮೀಶನ್‌ಗಳು ನಡೆಸುವ ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ತೇರ್ಗಡೆಯಾಗಲು ಬೇಕಾಗುವ ಯೋಗಗಳು

ಯು. ಪಿ. ಎಸ್. ಸಿ., ಪಿ. ಎಸ್. ಸಿ. ಮುಂತಾದವು ನಡೆಸುವ ಐ. ಎ. ಎಸ್. ಮೊದಲಾದ ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಯಶಸ್ವಿಯಾಗಲು ಜಾತಕ ಎಂತಿರಬೇಕು. ಎಂಬುದರ ವಿವರಣೆಯನ್ನು ನಮ್ಮ "ಉದ್ಯೋಗ ಜ್ಯೋತಿಷ್ಯ" ಗ್ರಂಥದಲ್ಲಿ ವಿವರಿಸಲಾಗಿದೆ. ಪ್ರಸ್ತುತ ಗ್ರಂಥದಲ್ಲಿ ಈ ಪ್ರಕರಣದ ಮಟ್ಟಿಗೆ ಇಲ್ಲಿ ಕೊಡಲಾಗಿದೆ.

ಸಾಮಾನ್ಯವಾಗಿ ಮೇಲಿನ ಯಾವದೇ ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ತೇರ್ಗಡೆಯಾಗಲು ನಾಲ್ಕು ಸಂಗತಿಗಳನ್ನು ಲಕ್ಷ್ಯದಲ್ಲಿಡಬೇಕು.

೧) ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ಮೂರು ಸ್ಥಾನಗಳನ್ನು ಪರಿಶೀಲಿಸಬೇಕು. ಪ್ರಾಮುಖ್ಯವಾಗಿ ಭಾಗ್ಯ ಸ್ಥಾನ ಹಾಗೂ ಭಾಗ್ಯೇಶನ ಬಲಾಬಲವನ್ನು ಪರಿಶೀಲಿಸಬೇಕಾಗುತ್ತದೆ. ಏಕೆಂದರೆ ಇಂಥ ಪರೀಕ್ಷೆಗಳಲ್ಲಿ ಕೇವಲ ತೇರ್ಗಡೆಯಾದರೆ ಸಾಲದು. ಅಸಂಖ್ಯ ವಿದ್ಯಾರ್ಥಿಗಳೊಡನೆ ಸ್ಪರ್ಧಿಸಿ ಹೆಚ್ಚಿನ ಗುಣಗಳನ್ನು ಪಡೆದು ಆಯ್ಕೆಹೊಂದಬೇಕು. ಭಾಗ್ಯದ ಬಲ ವಿಲ್ಲದೆ ಇದು ಲಭಿಸದು. ಎರಡನೆಯದಾಗಿ ಭಾಗ್ಯದ ನಂತರ ಲಗ್ನ ಹಾಗೂ ಲಗ್ನೇಶನ ಬಲಾಬಲವನ್ನು ಪರಿಶೀಲಿಸಬೇಕು. ಏಕೆಂದರೆ ಈ ಪರೀಕ್ಷೆಗಳಲ್ಲಿ ವ್ಯಕ್ತಿಮತ್ತ್ವವು ಸಹ ಹೆಚ್ಚಿನ ಪ್ರಭಾವ ಬೀರುತ್ತದೆ. ಮೂರನೆಯದಾಗಿ ಎಲ್ಲ ಪರೀಕ್ಷೆಗಳಿಗೂ ಪೋಷಕವಾದ ಪಂಚಮಸ್ಥಾನ, ಪಂಚಮೇಶ ಮತ್ತು ದ್ವಿತೀಯೇಶನ ಬಲಾಬಲವನ್ನು ಪರಿಶೀಲಿಸಬೇಕಾಗುತ್ತದೆ.

೨) ಈ ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಆಯ್ಕೆಯಾಗಲು ಜಾತಕದಲ್ಲಿ ರವಿಯು ಬಲಾಢ್ಯನಿರಲೇಬೇಕು. ರವಿಯು ದುರ್ಬಲನಿದ್ದ ವಿದ್ಯಾರ್ಥಿಗಳು ತೇರ್ಗಡೆಯಾಗುವದೆ ಕಠಿಣವು. ರವಿಯ ತರುವಾಯ ಗುರು-ಮಂಗಳರು ಜಾತಕದಲ್ಲಿ ಬಲಾಢ್ಯರಿರಬೇಕು.

೩) ಸಾಮಾನ್ಯವಾಗಿ ಈ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಆಯ್ಕೆಯಾಗು ವವರು ಮೇಷ, ವೃಷಭ, ಮಿಥುನ, ಕರ್ಕ, ಸಿಂಹ, ವೃಶ್ಚಿಕ, ಧನು, ಮೀನ ಈ ಲಗ್ನದವರೇ ಹೆಚ್ಚಾಗಿ ಇರುವದು ಕಂಡುಬರುತ್ತದೆ.

೪) ಮೇಲ್ಕಂಡ ಪರೀಕ್ಷೆಗಳಲ್ಲಿ ಆಯ್ಕೆಯಾಗಲು ಈ ಪರೀಕ್ಷೆ ನಡೆ ಯುವ ಕಾಲದಲ್ಲಿ ಹಾಗೂ ಫಲಿತಾಂಶ ಸಾರುವ ಕಾಲದಲ್ಲಿ ಗೋಚರೀ ಗ್ರಹಗಳು ಹಾಗೂ ಶುಭದಶೆ-ಅಂತರ್ದಶೆಗಳು ಇರಬೇಕು.

ಮೇಲ್ಕಂಡ ನಾಲ್ಕು ಸಂಗತಿಗಳು ಪೂರಕ ಹಾಗೂ ಪೋಷಕವಿದ್ದ ವಿದ್ಯಾರ್ಥಿಗಳು ಇಂಥ ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಆಯ್ಕೆಯಾಗುವರು.

## ೩. ಖಾತೆಗಳ ಪರೀಕ್ಷೆಗಳಲ್ಲಿ ತೇರ್ಗಡೆಯಾಗಲು ಬೇಕಾಗುವ ಯೋಗಗಳು

ಖಾತೆಗಳ ಪರೀಕ್ಷೆಗಳಲ್ಲಿ ತೇರ್ಗಡೆಯಾಗಲು ಕೇವಲ ಮೂರು ಸಂಗತಿಗಳನ್ನು ಪರಿಶೀಲಿಸಬೇಕು.

೧) ಜಾತಕನು ಯಾವ ಖಾತೆಯ, ಯಾವ ತರಹದ ಪರೀಕ್ಷೆಗೆ ಕೂಡ್ರುವನೋ ಆ ಖಾತೆಯ ಕಾರಕಗ್ರಹಗಳು ಇವನ ಮೂಲ ಜಾತಕದಲ್ಲಿ ಪೋಷಕವಾಗಿರುವವೋ ಹೇಗೆ ಎಂಬುದನ್ನು ಮೊದಲು ಪರಿಶೀಲಿಸಬೇಕು. ಇದಕ್ಕಾಗಿ ನಮ್ಮ ಉದ್ಯೋಗ ಜ್ಯೋತಿಷ್ಯದಲ್ಲಿ ಸುದೀರ್ಘವಾಗಿ ಬರೆಯಲಾಗಿದೆ. ೨) ಎರಡನೆಯದಾಗಿ ಜಾತಕದಲ್ಲಿ ದಶಮಸ್ಥಾನ ಹಾಗೂ ದಶಮೇಶನ ಬಲಾಬಲವನ್ನು ಪರಿಶೀಲಿಸಬೇಕು. ೩) ಮೂರನೆಯದಾಗಿ ಪರೀಕ್ಷೆಗೆ ಕುಳಿತುಕೊಳ್ಳುವ ಸಮಯದಲ್ಲಿಯ ಗೋಚರೀ ಗ್ರಹಗಳು ದಶೆ-ಅಂತರ್ದಶೆಗಳು ಪೂರಕವಿರಬೇಕು. ಈ ಮೂರೂ ಸಂಗತಿಗಳು ಅನುಕೂಲವಿದ್ದ ಜಾತಕನು ಖಾತೆಗಳ ಪರೀಕ್ಷೆಗಳಲ್ಲಿ ತೇರ್ಗಡೆಹೊಂದುತ್ತಾನೆ.

### ಪರೀಕ್ಷಾ ಸಮಯದ ಅನುಕೂಲ ಗ್ರಹಸ್ಥಿತಿ

ಸೈದ್ಧಾಂತಿಕ ಪರೀಕ್ಷೆಯೇ ಇರಲಿ, ಪ್ರಾತ್ಯಕ್ಷಿಕೆಯ ಪರೀಕ್ಷೆಯೇ ಇರಲಿ, ಮೌಖಿಕ ಪರೀಕ್ಷೆಯೇ ಇರಲಿ, ಅಥವಾ ಖಾತೆಗಳ ಇಲ್ಲವೆ ಸ್ಪರ್ಧಾತ್ಮಕ ಪರೀಕ್ಷೆಯೇ ಆಗಿರಲಿ ಅದರಲ್ಲಿ ಯಾವನೊಬ್ಬನು ಉತ್ತೀರ್ಣನಾಗುವನೊ ಇಲ್ಲವೊ ಎಂಬುದನ್ನು ತಿಳಿಯಲು ಪರೀಕ್ಷೆ ನಡೆಯುವ ಸಮಯದಲ್ಲಿ ಆ ವಿದ್ಯಾರ್ಥಿಯ ಗೋಚರೀ ಗ್ರಹಸ್ಥಿತಿ ಹೇಗಿದೆಯೆಂಬುದನ್ನು ತಿಳಿಯುವದು ಅತ್ಯಂತ ಮಹತ್ವದ ಸಂಗತಿಯಾಗಿದೆ. ಆದುದರಿಂದ ಈ ಪ್ರಕರಣದಲ್ಲಿ ಪರೀಕ್ಷಾ ಸಮಯದಲ್ಲಿ ಅನುಕೂಲ ಗ್ರಹಸ್ಥಿತಿ ಹೇಗಿರಬೇಕು ಎಂಬುವದನ್ನು ಈ ಕೆಳಗಿನಂತೆ ಕೊಡಲಾಗಿದೆ.

೧) ಪರೀಕ್ಷಾ ಸಮಯದ ಅವಧಿಯಲ್ಲಿ ಸಾಡೇಸಾತಿ ಇರಕೂಡದು.

೨) ಪಂಚಮೇಶನು ಗೋಚರಿಯಿಂದ ಶುಭನಿರಬೇಕು. ಹಾಗೂ ಶನಿ, ಮಂಗಳ, ರಾಹು, ಕೇತು ಗ್ರಹಗಳ ಯುಕ್ತನಾಗಿರಕೂಡದು.

೩) ಗೋಚರಿಯಿಂದ ಗ್ರಹಗಳ ಪಂಚಗ್ರಹಯೋಗ, ಚತುರ್ಗ್ರಹ ಯೋಗ ಹಾಗೂ ಶನಿ, ರವಿ, ಮಂಗಳ ಇವರ ಯುತಿಯೋಗ, ಪ್ರತಿಯೋಗವು ಪಂಚಮ, ದ್ವಿತೀಯ, ತೃತೀಯ, ಲಗ್ನ, ಚತುರ್ಥ ಈ ಸ್ಥಾನಗಳಿಂದ ಆಗಕೂಡದು.

೪) ಗುರುವಿನ ಗೋಚರೀ ಪರಿಭ್ರಮಣವು ಲಗ್ನ, ಭಾಗ್ಯ, ಪಂಚಮ, ಸಪ್ತಮ, ಲಾಭ ಈ ಸ್ಥಾನಗಳ ಮೇಲಿಂದ ಇರಬೇಕು.

೫) ಗೋಚರೀ ಗುರುವು ೨, ೫, ೭, ೯, ೧೦, ೧೧ನೆಯವನಿರಬೇಕು.

೬) ಗುರುವು ಗೋಚರಿಯಿಂದ ೪, ೬, ೮, ೧೨ನೆಯವನಿರಕೂಡದು.

೭) ಶನಿಯು ಗೋಚರಿಯಿಂದ ೩, ೬, ೧೦, ೧೧ನೆಯವನಾಗಿರಬೇಕು.

೮) ಜನ್ಮಕುಂಡಲಿಯಲ್ಲಿ ರವಿ, ಚಂದ್ರ, ಮಂಗಳ ಈ ಗ್ರಹಗಳು ದ್ವಿತೀಯ, ಪಂಚಮ, ತೃತೀಯ, ಲಾಭ ಈ ಸ್ಥಾನಗಳಲ್ಲಿದ್ದು, ಅಥವಾ ಈ ಗ್ರಹಗಳು ಪಂಚಮೇಶನಾಗಿ ಯಾವುದೊಂದು ಸ್ಥಾನದಲ್ಲಿದ್ದು ಈ ಗ್ರಹಗಳ ಮೇಲಿಂದ ಗೋಚರೀ ಶನಿಯು ಪರಿಭ್ರಮಣವಾಗುತ್ತಿದ್ದರೆ, ಪರೀಕ್ಷಾರ್ಥಿಗೆ ಅಶುಭ ದಾಯಕವು.

೯) ಸ್ಪರ್ಧಾತ್ಮಕ ಪರೀಕ್ಷೆಯ ಸಮಯದಲ್ಲಿಯೂ ಮೌಖಿಕ (Personal Interview) ಪರೀಕ್ಷೆಗಳಲ್ಲಿಯೂ ಗೋಚರಿಯಿಂದ ರವಿಯೂ ಬಲಾಢ್ಯನಿರಬೇಕು. ಗೋಚರೀ ರವಿಯು ಶುಭನಿದ್ದರೆ ವ್ಯಕ್ತಿತ್ವದ ಪ್ರಭಾವ ವಾಗುತ್ತದೆ. ಆದುದರಿಂದ ಗೋಚರೀ ರವಿಯು ಪರೀಕ್ಷಾಸಮಯದಲ್ಲಿ ೩, ೬, ೧೦, ೧೧ನೆಯವನಾಗಿರಬೇಕು.

೧೦) ತಾಂತ್ರಿಕ ಹಾಗೂ ಇಂಜನಿಯರಿಂಗ್ ಮೊದಲಾದ ಕರ್ಮ ಶಾಲೆಯಲ್ಲಿಯ ಪ್ರಾತ್ಯಕ್ಷಿಕ ಪರೀಕ್ಷೆಗಳ ಸಮಯದಲ್ಲಿ ಕುಜನು ಗೋಚರಿ ಯಿಂದ ೩, ೬, ೧೦, ೧೧ನೆಯವನಾಗಿ ಶುಭನಿರಬೇಕು.

೧೧) ಪರೀಕ್ಷೆ ನಡೆಸುವ ಸಮಯದಲ್ಲಿ ಗೋಚರೀ ಚಂದ್ರನ ತೀವ್ರ ಗತಿಯ ಪರಿಭ್ರಮಣದ ಪರಿಣಾಮವು ಬಹಳವಾಗಿರುತ್ತದೆ. ಏಕೆಂದರೆ

ಚಂದ್ರನು ಮನಸ್ಸಿನ ಕಾರಕನಿದ್ದು, ಅಶುಭನಿದ್ದರೆ ಮನಸ್ಸು ನೆಮ್ಮದಿಯಿಂದಿರದೆ ಪರೀಕ್ಷೆಯ ಮೇಲೆಯೂ ದುಷ್ಪರಿಣಾಮ ಮಾಡುತ್ತದೆ.

ಇದೂ ಅಲ್ಲದೆ ಪರೀಕ್ಷೆಯಲ್ಲಿಯ ಯಾವುದೊಂದು ಪೇಪರು ಸರಿಯಾಗದಿರುವುಕ್ಕೂ ಗೋಚರೀ ಚಂದ್ರನ ಅಶುಭ ಪರಿಣಾಮವೇ ಕಾರಣವು. ಆದುದರಿಂದ ಪರೀಕ್ಷಾ ಸಮಯದಲ್ಲಿ ಚಂದ್ರನು ೧, ೨, ೩, ೫, ೭, ೯, ೧೧ನೆಯ ಮನೆಗಳಲ್ಲಿರಬೇಕು. ಹಾಗೂ ಚಂದ್ರನ ಪರಿಭ್ರಮಣವು ಲಗ್ನ, ದ್ವಿತೀಯ, ತೃತೀಯ, ಪಂಚಮ, ಭಾಗ್ಯ, ಲಾಭ ಈ ಸ್ಥಾನಗಳ ಮೇಲಿಂದಲೂ ಆಗುವದು ಶುಭದಾಯಕವಿರುತ್ತದೆ.

ಫಲಿತಾಂಶ ಸಾರುವ ಸಮಯದ ಅನುಕೂಲ ಗ್ರಹಸ್ಥಿತಿ:— ಪರೀಕ್ಷಾ ಸಮಯದಲ್ಲಿ ಗ್ರಹಸ್ಥಿತಿ ಅನುಕೂಲವಿದ್ದು ಹಾಗೆ ಫಲಿತಾಂಶ ಸಾರುವ ಸಮಯದಲ್ಲಿಯೂ ಗ್ರಹಗಳ ಅನುಕೂಲವಿದ್ದಲ್ಲಿ ಅಂಥ ವಿದ್ಯಾರ್ಥಿಯು ಕ್ಲಾಸು, ರ‍್ಯಾಂಕ್ಸ್ ಮೊದಲಾಗಿ ಸನ್ಮಾನಯುತವಾಗಿ ತೇರ್ಗಡೆಹೊಂದುವನು. ಆದುದರಿಂದ ಫಲಿತಾಂಶದ ಸಮಯದಲ್ಲಿ ಗೋಚರಿಯಿಂದ ಶನಿ, ಗುರು ಗ್ರಹಗಳಂತೂ ಅನುಕೂಲವಿರಬೇಕು.

ಪರದೇಶ ಪರ್ಯಟನ ಯೋಗ :— ಸ್ನಾತಕೋತ್ತರ ಶಿಕ್ಷಣ ಮುಗಿಯುತ್ತಿದ್ದಂತೆಯೇ ವಿದೇಶಗಳಲ್ಲಿ ಉಚ್ಚ ಅಭ್ಯಾಸದ ಇಚ್ಛೆ ಸ್ವಾಭಾವಿಕವಾಗಿ ವಿದ್ಯಾರ್ಥಿಗಳಿಗೆ ಇದ್ದೇ ಇರುತ್ತದೆ. ಇದಕ್ಕೆ ಅನೇಕ ಕಾರಣಗಳಿವೆ. ಭಾರತದಲ್ಲಿ ವಿದೇಶಗಳಿಂದ ಪಡೆದ ಪದವಿಗಳಿರುವ ಮನ್ನಣೆ, ಅವರಿಗೆ ದೊರೆಯುವ ಆರ್ಥಿಕ ಲಾಭ ಹಾಗೂ ಸ್ಥಾನ ಮಾನ, ಹೆಚ್ಚು ಅಭ್ಯಾಸಕ್ಕಾಗಿ ವಿದೇಶಗಳಲ್ಲಿರುವ ಸೌಲಭ್ಯ-ಸಲಕರಣೆ ಮೊದಲಾದವುಗಳಿಂದ ಇಂದಿನ ಅನೇಕಾನೇಕ ವಿದ್ಯಾರ್ಥಿಗಳು ಪರದೇಶಕ್ಕೆ ಹೋಗುವ ಇಚ್ಛೆ ಹೊಂದಿರುತ್ತಾರೆ. ಇದರ ಬಗ್ಗೆ ಆಗಾಗ ಜ್ಯೋತಿಷಿಗಳ ಸಲಹೆಯನ್ನು ಪಡೆಯಲು ಸಂದರ್ಶಿಸುತ್ತಾರೆ. ಹೀಗಾಗಿ ಈ ಪ್ರಚಲಿತ ವಿಷಯವಾದ "ಪರದೇಶ-ಪರ್ಯಟನ ಯೋಗ"ದ ವಿಷಯವಾಗಿ ಜ್ಯೋತಿಷ್ಯದ ವಿಚಾರವೇನು, ಜಾತಕವೆಂತಿರಬೇಕು, ಕಾರಕ ಗ್ರಹ, ಲಗ್ನ, ಸ್ಥಾನಾದಿಗಳಾವವು ಎಂಬುದನ್ನು ಪರಿಶೀಲಿಸುವಾ.

ಯಾರೊಬ್ಬ ವಿದ್ಯಾರ್ಥಿಯ ಪರದೇಶ–ಪರ್ಯಟನ ಯೋಗದ ವಿಷಯವಾಗಿ ಜಾತಕವನ್ನು ಪರಿಶೀಲಿಸುವಾಗ ನಾವು ಎರಡು ಸಂಗತಿಗಳನ್ನು ಲಕ್ಷ್ಯವಲ್ಲಿಡಬೇಕು. ಮೊದಲನೆಯದಾಗಿ ಜಾತಕನ ಮೂಲಜಾತಕದಲ್ಲಿ ಪರದೇಶಪರ್ಯಟನ ಯೋಗವಿದೆಯೋ ಹೇಗೆ ಎಂಬುದನ್ನು ಖಚಿತವಾಡಿಕೊಂಡು ನಂತರ ಗೋಚರೀಯ ಗ್ರಹಗಳ ಶುಭಾಶುಭಗಳ ಫಲವನ್ನು ಪರಿಶೀಲಿಸಬೇಕು. ಈ ಪರದೇಶಪರ್ಯಟನ ಯೋಗಗಳು ಹೇಗಿರುವವು ಎಂಬುದನ್ನು ಈ ಕೆಳಗಿನಂತೆ ಕೊಡಲಾಗಿದೆ.

ಯಾರೊಬ್ಬ ವಿದ್ಯಾರ್ಥಿಯು (ಜಾತಕನು) ಸತತ ಸಂಚಾರಿಯಾಗಿದ್ದರೆ ಅಥವಾ ಪ್ರವಾಸಿಜೀವಿಯಾಗಿದ್ದರೆ ಅಥವಾ ಜನ್ಮಸ್ಥಳದಿಂದ ಬಹು ದೂರದಲ್ಲಿ ವಾಸ್ತವ್ಯವಿದ್ದರೆ ಅಥವಾ ಬೇರೆ ಪ್ರಾಂತದಲ್ಲಿ, ಬೇರೆ ದೇಶದಲ್ಲಿ ಉತ್ಕರ್ಷಹೊಂದುತ್ತಿದ್ದರೆ ಅಥವಾ ಪರದೇಶ-ಪರ್ಯಟನ ಮಾಡುತ್ತಿದ್ದರೆ ಇಂಥ ಜಾತಕನ ಜಾತಕದಲ್ಲಿ ಈ ಕೆಳಗಿನ ಸಂಗತಿಗಳು ಪೋಷಕವಿರುತ್ತವೆ.

೧) ಜಾತಕನ ಜಾತಕದಲ್ಲಿ ಅನೇಕ ಗ್ರಹಗಳು ಲಗ್ನ, ಭಾಗ್ಯ, ಸಪ್ತಮ, ತೃತೀಯ, ವ್ಯಯ ಈ ಸ್ಥಾನಗಳಲ್ಲಿರುತ್ತವೆ.

೨) ಭಾಗ್ಯೇಶ, ಲಗ್ನೇಶ, ಸಪ್ತಮೇಶ, ತೃತೀಯೇಶ, ವ್ಯಯೇಶ ಇವರು ಲಗ್ನ, ಭಾಗ್ಯ, ಸಪ್ತಮ, ತೃತೀಯ, ವ್ಯಯ ಈ ಸ್ಥಾನದಲ್ಲಿರುತ್ತಾರೆ.

೩) ಅನೇಕ ಗ್ರಹಗಳು ಹೆಚ್ಚಾಗಿ ಚರರಾಶಿಗಳಲ್ಲಿರುವವು, ಅಥವಾ ಕನಿಷ್ಠ ದ್ವಿಸ್ವಭಾವ ರಾಶಿಯಲ್ಲಿರುವವು.

೪) ರವಿ, ಚಂದ್ರ, ಗುರು, ಈ ಗ್ರಹಗಳು ಲಗ್ನ, ತೃತೀಯ, ಸಪ್ತಮ, ಭಾಗ್ಯಗಳಲ್ಲಿರುತ್ತಾರೆ.

೫) ಲಗ್ನೇಶ, ಭಾಗ್ಯೇಶ, ಪಂಚಮೇಶರು ಬಲಾಢ್ಯರಿರುತ್ತಾರೆ.

೬) ಶನಿ-ಮಂಗಳ, ರವಿ ಶನಿ, ಶನಿ-ಚಂದ್ರ, ಚಂದ್ರ-ರಾಹು, ರವಿ-ಕೇತು ಇವರ ಯುತಿಯೋಗ, ಪ್ರತಿಯೋಗ, ಲಗ್ನ ಪಂಚಮ, ತೃತೀಯ, ಚತುರ್ಥ, ಭಾಗ್ಯದಲ್ಲಿ ಇರಕೂಡದು.

೭) ಬುಧ–ಶುಕ್ರ, ಗುರು–ಚಂದ್ರ, ಮಂಗಳ–ಗುರು, ರವಿ–ಮಂಗಳ, ರವಿ–ಗುರು ಇವರ ಯುತಿಯೋಗವು ಶುಭರಾಶಿಯಲ್ಲಿದ್ದು, ಲಗ್ನ, ಪಂಚಮ, ಭಾಗ್ಯ, ತೃತೀಯ, ಚತುರ್ಥ ಈ ಸ್ಥಾನದಲ್ಲಿರುತ್ತವೆ.

೮) ಜಾತಕನ ಮೂಲ ಜಾತಕದಲ್ಲಿ ಪಂಚಮಸ್ಥಾನ, ಪಂಚಮೇಶ, ಗುರು, ಶಿಕ್ಷಣಕಾರಕಗ್ರಹ, ಯೋಗಕಾರಕಗ್ರಹ— ಈ ಐದು ಸಂಗತಿಗಳು ಜಾತಕದಲ್ಲಿ ಪೋಷಕವಿರುತ್ತವೆ.

ಹೀಗೆ ಮೇಲ್ಕಂಡ ಎಂಟು ಸಂಗತಿಗಳು ಪೋಷಕವಿದ್ದ ಜಾತಕನು ಪರದೇಶಪರ್ಯಟನ ಮಾಡುವನು. ಎರಡನೆಯದಾಗಿ ಪರದೇಶ–ಪರ್ಯಟನವಾಗಬೇಕಾದರೆ ಜಾತಕನಿಗೆ ಈ ಮುಂದೆ ಬರೆದ ಸಂಗತಿಗಳು ಪೋಷಕವಿರಬೇಕು.

೧) ಗುರು ಗೋಚರಿಯಿಂದ ೧, ೨, ೫, ೭, ೯, ೧೧ ನೆಯವನಾಗಿರಬೇಕು.

೨) ಶನಿಯು ಗೋಚರಿಯಿಂದ ೩, ೬, ೭, ೯, ೧೦, ೧೧ ನೆಯವನಿರಬೇಕು.

೩) ಜಾತಕದಲ್ಲಿ ಬಲಾಢ್ಯ ಹಾಗೂ ಪೋಷಕವಿರುವ ಗ್ರಹಗಳ ದಶ ಅಂತರ್ದಶವಿರಬೇಕು. ಈ ಮೂರು ಸಂಗತಿಗಳು ಪೋಷಕವಿದ್ದ ವಿದ್ಯಾರ್ಥಿಗಳು ಪರದೇಶಪರ್ಯಟನ ಮಾಡುವರು.

# ೫. ಅನುಭವಸಿದ್ಧ ನಿಯಮಗಳು

ಈ ಅಧ್ಯಾಯದಲ್ಲಿ ನನ್ನ ವೃತ್ತಿಯಲ್ಲಿ ಕಳೆದ ೩೩ ವರ್ಷಗಳ ಅನುಭವದಲ್ಲಿ ಸಿದ್ಧವಾದ ವೈಶಿಷ್ಟ್ಯಪೂರ್ವಕ ಕೆಲವು ಅನುಭವಗಳನ್ನು ಕ್ರೋಢೀಕರಿಸಿ " ಅನುಭವಿಕ ನಿಯಮಗಳು " ಎಂದು ರೂಪಿಸಲಾಗಿದೆ. ವೃತ್ತಿಬಾಂಧವರಿಗೆ ಈ ಅಧ್ಯಾಯ ಬಹಳ ಅಮೂಲ್ಯವಾಗಿದ್ದಂತೆಯೇ ಜ್ಯೋತಿಷ್ಯದ ಪ್ರಾಥಮಿಕ ಜ್ಞಾನವಿರುವ ಪೃಚ್ಛಕರಿಗೂ, ಓದುಗರಿಗೂ ಈ ನಿಯಮಗಳು ಪ್ರಯೋಜನಕಾರಿಯಾಗುವದರಲ್ಲಿ ಸಂದೇಹವಿಲ್ಲ.

೧) ಭೂಮಿತಿ, ಭೂಗೋಲ, ಭೂಗರ್ಭಶಾಸ್ತ್ರ ಮೊದಲಾದ ಭೂಮಿಗೆ ಸಂಬಂಧಿಸಿದ ಶಾಸ್ತ್ರಗಳಿಗೆ ಭೂಪುತ್ರನಾದ ಕುಜನೂ, ಜಲಾಧಿಪತಿಯಾದ ಚಂದ್ರನೂ ಕಾರಕರಿರುತ್ತಾರೆ.

೨) ಪಂಚಮೇಶ ಹಾಗೂ ಪಂಚಮಸ್ಥಾನ ಮತ್ತು ಗುರು ಜಾತಕದಲ್ಲಿ ಶುಭರಿದ್ದು, ವಿದ್ಯಾರ್ಥಿದೆಶೆಯಲ್ಲಿ ಅನುಕೂಲವಾಗಿದ್ದರೆ ಜಾತಕನ ಶಿಕ್ಷಣ ಪೂರ್ತಿಯಾಗುತ್ತದೆ.

೩) ಪಂಚಮಸ್ಥಾನ ದೂಷಿತವಿದ್ದು, ಪಂಚಮೇಶನು ಬಲಾಢ್ಯನಿದ್ದರೆ ಅಥವಾ ಪಂಚಮೇಶ ದೂಷಿತನಿದ್ದು, ಪಂಚಮಸ್ಥಾನ ಪೂರಕವಿದ್ದರೆ ಇಂಥ ವಿದ್ಯಾರ್ಥಿಗಳ ಶಿಕ್ಷಣವು ಕೆಲವು ವರ್ಷಗಳ ವರೆಗೆ ಅರ್ಧಕ್ಕೇ ನಿಂತು ಆ ಬಳಿಕ ಪೂರ್ತಿಯಾಗುತ್ತದೆ. ಅಥವಾ ಅನೇಕ ವಿಘ್ನಗಳಿಂದ ಶಿಕ್ಷಣ ಪೂರ್ತಿಯಾಗುತ್ತದೆ.

೪) ವಾಯುರಾಶಿಯಲ್ಲಿ ಅನೇಕ ಗ್ರಹಗಳು ತೃತೀಯ ಇಲ್ಲವೆ ಪಂಚಮ ಲಗ್ನದಲ್ಲಿದ್ದರೆ ಮೇಲಿಂದ ಮೇಲೆ ವಿಷಯಗಳ ಬದಲಾವಣೆಯಿಂದ ಶಿಕ್ಷಣ ಅರ್ಧಕ್ಕೇ ನಿಲ್ಲುತ್ತದೆ.

೫) ಚಂದ್ರ–ಶನಿಯರ ಯುತಿ ಅಥವಾ ಚಂದ್ರ–ರಾಹುಗಳ ಯುತಿ ಅಥವಾ ಶನಿಯಿಂದ ದೃಷ್ಟಿಸಲ್ಪಟ್ಟ ಚಂದ್ರನಿದ್ದರೆ ಇಂಥ ವಿದ್ಯಾರ್ಥಿಗಳು ವಿಷಯ ಇಲ್ಲವೆ ಕೋರ್ಸುಗಳನ್ನು ಮೇಲಿಂದ ಮೇಲೆ ಬದಲಾವಣೆಯಿಂದ ಶಿಕ್ಷಣಕ್ಕೆ ವ್ಯತ್ಯಯವುಂಟಾಗುತ್ತದೆ.

೬) ಪಂಚಮಸ್ಥಾನದಲ್ಲಿ ರಾಹು, ಶನಿ, ಕೇತು, ಮಂಗಳ, ರವಿ ಮೊದಲಾದ ಯಾವುದೆ ಎರಡು ಪಾಪಗ್ರಹಗಳಿದ್ದು, ಪಂಚಮೇಶನು ದುರ್ಬಲನಿದ್ದ ವಿದ್ಯಾರ್ಥಿಗೆ ಶಿಕ್ಷಣದಲ್ಲಿ ತೊಡಕು ಬಹಳ.

೭) ಪಂಚಮಸ್ಥಾನ ಹಾಗೂ ಪಂಚಮೇಶ ಮತ್ತು ಗುರು–ಬುಧರು ಪೋಷಕರಿದ್ದ ವಿದ್ಯಾರ್ಥಿಗಳು ಥೇರಿ ಪರೀಕ್ಷೆಯಲ್ಲಿ ಪ್ರವೀಣರಿರುತ್ತಾರೆ.

೮) ತೃತೀಯಸ್ಥಾನ ಹಾಗೂ ತೃತೀಯೇಶ ಪೋಷಕರಿದ್ದು, ರವಿ–ಮಂಗಳರು ಬಲಾಢ್ಯರಿದ್ದ ವಿದ್ಯಾರ್ಥಿಗಳು ಪ್ರಾತ್ಯಕ್ಷಿಕೆ ಪ್ರಾಯೋಗಿಕ ಪರೀಕ್ಷೆಗಳಲ್ಲಿ ಪ್ರವೀಣರಿರುತ್ತಾರೆ.

೯) ದ್ವಿತೀಯಸ್ಥಾನ, ತನುಸ್ಥಾನ, ದ್ವಿತೀಯೇಶ, ಲಗ್ನೇಶ ಹಾಗೂ ಶುಕ್ರ–ಚಂದ್ರರು ಪೋಷಕರಿದ್ದ ವಿದ್ಯಾರ್ಥಿಗಳು ಮೌಖಿಕ ಪರೀಕ್ಷೆಯಲ್ಲಿ ಪ್ರತಿಭಾಶಾಲಿಗಳಿರುತ್ತಾರೆ.

೧೦) ಪಂಚಮೇಶನು ಪಾಪಗ್ರಹಯುಕ್ತ, ಪಾಪಗ್ರಹಮಧ್ಯ, ಪಾಪ ಗ್ರಹದೃಷ್ಟನಿದ್ದರೆ ಅಥವಾ ಪಂಚಮಸ್ಥಾನದಲ್ಲಿ ಅನೇಕ ಗ್ರಹಗಳಿದ್ದರೆ (ತ್ರಿಗ್ರಹ, ಚತುರ್ಗ್ರಹ, ಪಂಚಗ್ರಹ, ಷಡ್ಗ್ರಹ) ಅಂಥ ವಿದ್ಯಾರ್ಥಿಯ ಶಿಕ್ಷಣಕ್ಕೆ ವಿಘ್ನಗಳು ಬಹಳ.

೧೧) ಅನೇಕ ಗ್ರಹಗಳು (ತ್ರಿಗ್ರಹ, ಚತುರ್ಗ್ರಹ, ಪಂಚಗ್ರಹ) ತೃತೀಯಸ್ಥಾನದಲ್ಲಿದ್ದರೆ ಅಥವಾ ತೃತೀಯೇಶನು ದಾರ್ಬಲನಿದ್ದರೆ ಅಂಥ ವಿದ್ಯಾರ್ಥಿಗಳ ಶಿಕ್ಷಣಕ್ಕೆ ವಿಘ್ನ ಬಹಳ.

೧೨) ಶನಿ–ಮಂಗಳ, ರವಿ–ಶನಿ, ರವಿ–ಕೇತು, ಚಂದ್ರ–ರಾಹು, ಶನಿ–ಚಂದ್ರ ಇವರ ಯುತಿಯೋಗ, ಪ್ರತಿಯೋಗವು ಲಗ್ನ ತೃತೀಯ, ಚತುರ್ಥ, ಪಂಚಮ, ಲಾಭದಲ್ಲಿದ್ದರೆ ಶಿಕ್ಷಣಕ್ಕೆ ವಿಘ್ನ ಬಹಳ.

೧೩) ಅನೇಕ ಗ್ರಹಗಳು ಜಾತಕದಲ್ಲಿ ರಾಶಿಬಲದವರಿದ್ದರೆ ಶಿಕ್ಷಣ ಪೂರ್ತಿಯಾಗುತ್ತದೆ.

೧೪) ಬುಧ, ಗುರು, ಶುಕ್ರ, ಶನಿ, ಪಂಚಮೇಶ, ಪಂಚಮಸ್ಥಾನ ಪೋಷಕರಿದ್ದ ವಿದ್ಯಾರ್ಥಿಗಳು ಆರ್ಟ್ಸ್ ಕೋರ್ಸಿನಲ್ಲಿ ಪ್ರವೀಣರಿರುತ್ತಾರೆ.

೧೫) ರವಿ, ಮಂಗಳ, ಶನಿ ಹಾಗೂ ತೃತೀಯಸ್ಥಾನ, ತೃತೀಯೇಶರು ಪೋಷಕರಿದ್ದ ವಿದ್ಯಾರ್ಥಿಗಳು ವಿಜ್ಞಾನಕೋರ್ಸಿನಲ್ಲಿ ಪ್ರವೀಣರು.

೧೬) ಗುರು–ಶನಿ, ಪಂಚಮ–ದ್ವಿತೀಯ ಸ್ಥಾನಗಳು, ಪಂಚಮೇಶ-ದ್ವಿತೀಯೇಶರು ಪೋಷಕರಿರುವ ವಿದ್ಯಾರ್ಥಿಗಳು ಕಾಯಿದ ವ್ಯಾಸಂಗದಲ್ಲಿ ಪ್ರವೀಣರಿರುತ್ತಾರೆ.

೧೭) ಬುಧ, ತೃತೀಯಸ್ಥಾನ, ತೃತೀಯೇಶ ಪೋಷಕರಿರುವ ವಿದ್ಯಾರ್ಥಿಗಳು ವಾಣಿಜ್ಯಕೋರ್ಸಿನಲ್ಲಿ ಪ್ರವೀಣರಿರುತ್ತಾರೆ.

೧೮) ತೃತೀಯಸ್ಥಾನ, ತೃತೀಯೇಶನ, ಲಗ್ನ, ಲಗ್ನೇಶ, ಶನಿ, ಮಂಗಳರು ಪೋಷಕರಿರುವ ವಿದ್ಯಾರ್ಥಿಗಳು ತಾಂತ್ರಿಕ ಶಿಕ್ಷಣದಲ್ಲಿ ಪ್ರವೀಣರಿರುತ್ತಾರೆ.

೧೯) ರವಿ, ಚಂದ್ರ. ಶನಿ, ಗುರುವು ಪೋಷಕರಿರುವ ವಿದ್ಯಾರ್ಥಿಗಳು ವೈದ್ಯಕೀಯ ವಿದ್ಯೆಯಲ್ಲಿ ವಿದ್ವಾಂಸರಿರುತ್ತಾರೆ.

೨೦) ಗುರುವು ಬಲಾಢ್ಯನಿರುವ ವಿದ್ಯಾರ್ಥಿಯು ವೈದಿಕ ವಿದ್ಯೆಯಲ್ಲಿ ವಿದ್ವಾನನಿರುತ್ತಾನೆ.

೨೧) ಶುಕ್ರ, ಚಂದ್ರ, ದ್ವಿತೀಯ, ತೃತೀಯ, ಪಂಚಮ ಈ ಸ್ಥಾನಗಳೂ ಹಾಗೂ ಈ ಸ್ಥಾನಾಧೀಶರು ಪೋಷಕರಿರುವ ವಿದ್ಯಾರ್ಥಿಗಳು ಲಲಿತ ಕಲಾ ಶಿಕ್ಷಣದಲ್ಲಿ ಪಾರಂಗತರಿರುತ್ತಾರೆ.

೨೨) ಶನಿ, ಚಂದ್ರರು ಪೋಷಕರಿರುವ ವಿದ್ಯಾರ್ಥಿಗಳು ಕೃಷಿ ವಿಜ್ಞಾನ ಕೋರ್ಸಿನಲ್ಲಿ ತಜ್ಞರಿರುತ್ತಾರೆ.

೨೩) ಶನಿ, ಚಂದ್ರ, ಮಂಗಳ, ಷಷ್ಠಸ್ಥಾನ, ಷಷ್ಠೇಶ, ಪೋಷಕರಿರುವ ವಿದ್ಯಾರ್ಥಿಗಳು ಪಶುವೈದ್ಯವಿಜ್ಞಾನದಲ್ಲಿ ಪಾರಂಗತರಿರುತ್ತಾರೆ.

೨೪) ರವಿ, ಗುರುವು ಹಾಗೂ ಭಾಗ್ಯೇಶ, ಪಂಚಮೇಶರು ಪೋಷಕರಿದ್ದ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ, ಶಿಷ್ಯವೃತ್ತಿ ಹಾಗೂ ಪುಕ್ಕಟೆ ಶಿಕ್ಷಣದ ಸೌಲಭ್ಯಗಳು ಅನಾಯಾಸವಾಗಿ ಸಿಗುತ್ತವೆ.

೨೫) ಬುಧ, ಗುರು, ಮಂಗಳರು ಪೋಷಕರಿದ್ದ ವಿದ್ಯಾರ್ಥಿಗಳು ಗಣಿತಶಾಸ್ತ್ರದಲ್ಲಿ ಪಾರಂಗತರಿರುತ್ತಾರೆ.

೨೬) ಬುಧನು ಬಲಾಢ್ಯನಿದ್ದರೆ ಭಾಷಾಶಾಸ್ತ್ರದಲ್ಲಿ ತಜ್ಞನಿರುತ್ತಾನೆ.

೨೭) ಶನಿ–ಚಂದ್ರರು ಬಲಾಢ್ಯರಿದ್ದರೆ ರಸಾಯನಶಾಸ್ತ್ರ ಹಾಗೂ ಔಷಧೀಶಾಸ್ತ್ರದಲ್ಲಿ ತಜ್ಞತೆ ಪಡೆಯುತ್ತಾರ.

೨೮) ಗುರು–ಶನಿಯರು ಬಲಾಢ್ಯರಿದ್ದರೆ ನ್ಯಾಯ, ತರ್ಕ, ಮೀಮಾಂಸೆ, ವೇದವಿದ್ಯೆಗಳಲ್ಲಿ ವಿದ್ವಾಂಸರಿರುತ್ತಾರೆ.

೨೯) ಕುಜನು ಪೋಷಕನಿದ್ದರೆ ಭೌತಶಾಸ್ತ್ರದಲ್ಲಿ ತಜ್ಞರಿರುತ್ತಾರೆ.

೩೦) ರವಿಯು ಪೋಷಕನಿದ್ದರೆ ಶರೀರಶಾಸ್ತ್ರ, ಜೀವಕಾರ್ಯ ವಿಜ್ಞಾನದಲ್ಲಿ ಪಾರಂಗರಿರುತ್ತಾರೆ.

೩೧) ಶನಿಯು ಬಲಾಢ್ಯನಿದ್ದರೆ ಇತಿಹಾಸ, ತತ್ವಜ್ಞಾನ, ಮಾನವ ಶಾಸ್ತ್ರಗಳಲ್ಲಿ ತಜ್ಞತೆ ಪಡೆಯುತ್ತಾರೆ.

— —

ವಿ. ಸೂ.: ಓದುಗರು ಮೇಲೆ ಹೇಳಿದ ಈ ಅನುಭವಸಿದ್ಧ ನಿಯಮಗಳನ್ನು ಪ್ರಯೋಗಪಡಿಸಿ ತಮಗುಂಟಾದ ಅನುಭವವನ್ನು ಸತ್ಯಶೋಧನೆಗಾಗಿ ನಮಗೆ ತಿಳಿಸಬೇಕಾಗಿ ವಿನಂತಿ.